# ಶ್ರೀಮದ್ಭಗವದ್ಗೀತಾ

ಮೂಲ ಪ್ರತಿಪದಾರ್ಥ
ತಾತ್ಪರ್ಯ ಟಿಪ್ಪಣಿಗಳೊಡನೆ

ಸ್ವಾಮಿ ಆದಿದೇವಾನಂದ



ಶ್ರೀರಾಮಕೃಷ್ಣ ಆಶ್ರಮ
ಮೈಸೂರು

# ಮುನ್ನುಡಿ

ಭಗವದ್ಗೀತೆ ಪಂಚಮವೇದವೆಂದು ಪ್ರಖ್ಯಾತವಾಗಿರುವ ವ್ಯಾಸಪ್ರಣೀತ ಮಹಾಭಾರತದ ಭೀಷ್ಮಪರ್ವದಲ್ಲಿ ಬರುವುದು. ಏಳುನೂರು ಶ್ಲೋಕಗಳನ್ನೊಳಗೊಂಡ ಈ ಗೀತೆ ಹಲವು ಶತಮಾನಗಳಿಂದಲೂ ಹಿಂದೂಗಳಿಗೆಲ್ಲಾ ಒಂದು ಪರಮಪವಿತ್ರವಾದ ಧರ್ಮಗ್ರಂಥವಾಗಿದೆ. ಎಲ್ಲಾ ಆಚಾರ್ಯರೂ ಇದರ ಮೇಲೆ ಭಾಷ್ಯ ಬರೆದಿರುವರು. ಆಚಾರ್ಯರೇ ಸ್ವಯಂ ಪ್ರತಿಭಾವಂತರಾದರೂ ತಾವೇ ಸ್ವತಂತ್ರವಾಗಿ ಏನನ್ನೂ ಹೇಳಬಯಸಲಿಲ್ಲ. ಗೀತೆಯ ಪ್ರಭಾವ ಅಷ್ಟು ಆಳವಾಗಿ ಹೋಗಿದೆ ಹಿಂದೂಜನಾಂಗದಲ್ಲಿ. ಗೀತೆಯ ಆಧಾರದ ಮೇಲೆ ನಿಂತ ಸಂಪ್ರದಾಯಕ್ಕೆ ಮಾತ್ರ ಪುರಸ್ಕಾರ ಭಾರತದಲ್ಲಿ.

ಇದನ್ನು ಹೇಳುವವನು ಆಜನ್ಮಸಿದ್ಧ ಅವತಾರಶ್ರೇಷ್ಠ ಸ್ವಯಂ ಭಗವಂತನೇ ಎಂದು ಜಗತ್ತಿನಲ್ಲಿ ಪ್ರಖ್ಯಾತನಾದ ಶ್ರೀಕೃಷ್ಣ. ವ್ಯಾಸರು ಇಡೀ ಮಹಾಭಾರತವೆಂಬ ತೈಲವನ್ನು ಧಾರೆಯೆರೆದದ್ದು ಭಗವದ್ಗೀತೆ ಎಂಬ ಒಂದು ದಿವ್ಯಜ್ಯೋತಿಯನ್ನು ಪೋಷಿಸುವುದಕ್ಕೆ. ಅಂದಿನಿಂದ ಇಂದಿನ ವರೆಗೆ ಎಷ್ಟೋ ಆಚಾರ್ಯರು, ಯೋಗಿಗಳು, ಭಕ್ತರು, ಕರ್ಮಪಟುಗಳು, ಜ್ಞಾನಿಗಳು, ತಮ್ಮ ಜೀವನದ ಹಣತೆಯನ್ನು ಅದರಿಂದ ಹತ್ತಿಸಿಕೊಂಡಿರುವರು. ಇದೊಂದು ನಿತ್ಯಪಾರಾಯಣಗ್ರಂಥ. ಧರ್ಮಸಂಕಟದಲ್ಲಿ ಸಿಕ್ಕಿದಾಗ ಅದರಿಂದ ಪಾರು ಮಾಡುವ ಗ್ರಂಥ. ಸುಖದುಃಖಗಳಲ್ಲಿ, ಲಾಭನಷ್ಟಗಳಲ್ಲಿ, ಜಯಾಪಜಯಗಳಲ್ಲಿ ಗುರಿಮರೆಯದಂತೆ ಸದಾ ನಮ್ಮನ್ನು ನಿತ್ಯಸತ್ಯದ ಕಡೆಗೆ ಸೆಳೆಯುತ್ತಿರುವ ಧ್ರುವತಾರೆಯಂತಹ ಗ್ರಂಥ. ಸನಾತನ ಧರ್ಮದ ಪೂರ್ಣ ಪ್ರತಿನಿಧಿ ಎಂಬ ಮಾತು ಈ ಒಂದು ಗ್ರಂಥಕ್ಕೆ ಅನ್ವಯಿಸುವಂತೆ ಮತ್ತಾವುದಕ್ಕೂ ಅನ್ವಯಿಸಲಾರದು.

ಭಗವದ್ಗೀತೆಯಲ್ಲಿ ಎಲ್ಲರಿಗೂ ಸ್ವಾಗತವಿದೆ. ಸಾಂಖ್ಯ ಯೋಗ ದ್ವೈತ ವಿಶಿಷ್ಟಾದ್ವೈತ ಅದ್ವೈತ ಕರ್ಮ ಜ್ಞಾನ ಭಕ್ತಿ ಎಲ್ಲವೂ ಇಲ್ಲಿ ಮಿಳನವಾಗಿವೆ. ಇದು ಹಿಂದೂಧರ್ಮಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಎಲ್ಲೆಲ್ಲಿ ವಿಭೂತಿ ಪುರುಷರು ಇರುವರೋ ಅಲ್ಲೆಲ್ಲಾ ನಾನೇ ಇರುವೆನು ಎಂದು ಶ್ರೀಕೃಷ್ಣ

# ಮುನ್ನುಡಿ

ಭಗವದ್ಗೀತೆ ಪಂಚಮವೇದವೆಂದು ಪ್ರಖ್ಯಾತವಾಗಿರುವ ವ್ಯಾಸಪ್ರಣೀತ ಮಹಾಭಾರತದ ಭೀಷ್ಮಪರ್ವದಲ್ಲಿ ಬರುವುದು. ಏಳುನೂರು ಶ್ಲೋಕಗಳ ನ್ನೊಳಗೊಂಡ ಈ ಗೀತೆ ಹಲವು ಶತಮಾನಗಳಿಂದಲೂ ಹಿಂದೂಗಳಿಗೆಲ್ಲಾ ಒಂದು ಪರಮಪವಿತ್ರವಾದ ಧರ್ಮಗ್ರಂಥವಾಗಿದೆ. ಎಲ್ಲಾ ಆಚಾರ್ಯರೂ ಇದರ ಮೇಲೆ ಭಾಷ್ಯ ಬರೆದಿರುವರು. ಆಚಾರ್ಯರೇ ಸ್ವಯಂ ಪ್ರತಿಭಾವಂತ ರಾದರೂ ತಾವೇ ಸ್ವತಂತ್ರವಾಗಿ ಏನನ್ನೂ ಹೇಳಬಯಸಲಿಲ್ಲ. ಗೀತೆಯ ಪ್ರಭಾವ ಅಷ್ಟು ಆಳವಾಗಿ ಹೋಗಿದೆ ಹಿಂದೂಜನಾಂಗದಲ್ಲಿ. ಗೀತೆಯ ಆಧಾರದ ಮೇಲೆ ನಿಂತ ಸಂಪ್ರದಾಯಕ್ಕೆ ಮಾತ್ರ ಪುರಸ್ಕಾರ ಭಾರತದಲ್ಲಿ.

ಇದನ್ನು ಹೇಳುವವನು ಆಜನ್ಮಸಿದ್ಧ ಅವತಾರಶ್ರೇಷ್ಠ ಸ್ವಯಂ ಭಗ ವಂತನೇ ಎಂದು ಜಗತ್ತಿನಲ್ಲಿ ಪ್ರಖ್ಯಾತನಾದ ಶ್ರೀಕೃಷ್ಣ. ವ್ಯಾಸರು ಇಡೀ ಮಹಾಭಾರತವೆಂಬ ತೈಲವನ್ನು ಧಾರೆಯೆರೆದದ್ದು ಭಗವದ್ಗೀತೆ ಎಂಬ ಒಂದು ದಿವ್ಯಜ್ಯೋತಿಯನ್ನು ಪೋಷಿಸುವುದಕ್ಕೆ. ಅಂದಿನಿಂದ ಇಂದಿನ ವರೆಗೆ ಎಷ್ಟೋ ಆಚಾರ್ಯರು, ಯೋಗಿಗಳು, ಭಕ್ತರು, ಕರ್ಮಪಟುಗಳು, ಜ್ಞಾನಿಗಳು, ತಮ್ಮ ಜೀವನದ ಹಣತೆಯನ್ನು ಅದರಿಂದ ಹತ್ತಿಸಿಕೊಂಡಿರುವರು. ಇದೊಂದು ನಿತ್ಯಪಾರಾಯಣಗ್ರಂಥ. ಧರ್ಮಸಂಕಟದಲ್ಲಿ ಸಿಕ್ಕಿದಾಗ ಅದರಿಂದ ಪಾರು ಮಾಡುವ ಗ್ರಂಥ. ಸುಖದುಃಖಗಳಲ್ಲಿ, ಲಾಭನಷ್ಟಗಳಲ್ಲಿ, ಜಯಾಪಜಯ ಗಳಲ್ಲಿ ಗುರಿಮರೆಯದಂತೆ ಸದಾ ನಮ್ಮನ್ನು ನಿತ್ಯಸತ್ಯದ ಕಡೆಗೆ ಸೆಳೆಯು ತ್ತಿರುವ ಧ್ರುವತಾರೆಯಂತಹ ಗ್ರಂಥ. ಸನಾತನ ಧರ್ಮದ ಪೂರ್ಣ ಪ್ರತಿನಿಧಿ ಎಂಬ ಮಾತು ಈ ಒಂದು ಗ್ರಂಥಕ್ಕೆ ಅನ್ವಯಿಸುವಂತೆ ಮತ್ತಾವುದಕ್ಕೂ ಅನ್ವಯಿಸಲಾರದು.

ಭಗವದ್ಗೀತೆಯಲ್ಲಿ ಎಲ್ಲರಿಗೂ ಸ್ವಾಗತವಿದೆ. ಸಾಂಖ್ಯ ಯೋಗ ದ್ವೈತ ವಿಶಿಷ್ಟಾದ್ವೈತ ಅದ್ವೈತ ಕರ್ಮ ಜ್ಞಾನ ಭಕ್ತಿ ಎಲ್ಲವೂ ಇಲ್ಲಿ ಮಿಳನವಾಗಿವೆ. ಇದು ಹಿಂದೂಧರ್ಮಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಎಲ್ಲೆಲ್ಲಿ ವಿಭೂತಿ ಪುರುಷರು ಇರುವರೋ ಅಲ್ಲೆಲ್ಲಾ ನಾನೇ ಇರುವೆನು ಎಂದು ಶ್ರೀಕೃಷ್ಣ

ಸಾರುವನು. ಇತರ ಧರ್ಮದವರು ಒಪ್ಪಲಿ ಬಿಡಲಿ, ಹಿಂದೂ ಮಾತ್ರ ತಾನು ಯಾವುದನ್ನು ಸತ್ಯವೆಂದು ಉಪಾಸನೆ ಮಾಡುತ್ತಿರುವನೋ ಅದನ್ನೇ ಇತರ ಧರ್ಮಾನುಯಾಯಿಗಳು ಬೇರೆಬೇರೆ ಹೆಸರಿನಿಂದ ಕರೆಯುತ್ತಿರುವರು ಎಂದು ಸುಲಭವಾಗಿ ನಂಬುವುದಕ್ಕೆ ಕಾರಣ ಗೀತಾಸಂದೇಶದ ವಿಶಾಲತೆ ಮತ್ತು ಜನರ ಮೇಲೆ ಅದಕ್ಕೆ ಇರುವ ಪ್ರಭಾವ.

ಪ್ರಪಂಚದಲ್ಲಿ ಮತ್ತಾವ ಆಧ್ಯಾತ್ಮಿಕ ಗ್ರಂಥವೂ ಇಷ್ಟೊಂದು ನಾಟಕೀಯವಾಗಿ ಪ್ರಾರಂಭವಾಗುವುದಿಲ್ಲ. ಗೀತಾಸಂದೇಶ ಪ್ರಾರಂಭವಾಗುವುದಕ್ಕಾಗಿಯೇ ಭಾರತಯುದ್ಧವೆಂಬ ಹಿನ್ನೆಲೆ ಸೃಷ್ಟಿಯಾಗಿರುವಂತೆ ಕಾಣುತ್ತೆ. ಯಾವುದೋ ಒಂದು ನಿರ್ಜನಪ್ರದೇಶವಲ್ಲ, ಅರಣ್ಯವಲ್ಲ, ಗಿರಿಗುಹೆಯಲ್ಲ; ಹೇಷಾರವ, ಪಟುಗಳ ಆರ್ಭಟ, ಶಂಖರಣಕಹಳೆಗಳ ದಿಗ್‌ಭಿತ್ತಿ ಬಿರಿಯುವಂತಹ ನಿನಾದದಿಂದ ತುಂಬಿ ತುಳುಕಾಡುತ್ತಿರುವ ಕುರುಕ್ಷೇತ್ರವೇ ಅದು.

ಪಾಂಡವಕೌರವರ ಅಪಾರಸೇನಾಸಾಗರ ಕುರುಕ್ಷೇತ್ರದಲ್ಲಿ ಕಾದಲನುವಾಗಿ ನಿಂತಿದೆ. ಪಾಂಡವರು ಬಾಲ್ಯದಿಂದಲೂ ಕೌರವನ ಕುಟಿಲತಂತ್ರಗಳಿಗೆ ಒಳಗಾಗಿ, ಬೆಂದು ನೊಂದು ಅವಮಾನಹೊಂದಿ, ಕೌರವನಿಂದ ತಮಗೆ ಬರಬೇಕಾದ ರಾಜ್ಯವನ್ನು ಬೇಡಿ ನಿರಾಶರಾಗಿ, ಶರದ ಮೊನೆಯಲ್ಲಿ ಕಾದಿದಲ್ಲದೆ ಬೇಡಿದರೆ ದೊರಕುವುದಿಲ್ಲವೆಂದು ಅತಿರಥಮಹಾರಥರನ್ನೊಳಗೊಂಡ ಏಳು ಅಕ್ಷೌಹಿಣೀ ಸೈನ್ಯದೊಂದಿಗೆ ಯುದ್ಧಮಾಡುವುದಕ್ಕಾಗಿ ಕುರುಕ್ಷೇತ್ರಕ್ಕೆ ಬಂದಿರುವರು. ಪ್ರಳಯ ಮೊದಲಾಗುವುದಕ್ಕೆ, ಯಮನ ಸೂರೆಗೆ, ದ್ವಾಪರ ಯುಗದ ಶ್ರೇಷ್ಠತಮವ್ಯಕ್ತಿಗಳೆಲ್ಲ ಅವ್ಯಕ್ತದ ಗೋರಿಗೆ ಸಾಗಿಹೋಗುವುದಕ್ಕೆ ಕಾಲ ಸ್ವಲ್ಪ ಉಳಿದಿದೆ. ಅರ್ಜುನನು ಶ್ರೀಕೃಷ್ಣನನ್ನು ಸಾರಥಿಯಾಗಿ ಮಾಡಿಕೊಂಡು ಎರಡು ಸೈನ್ಯಗಳ ಮಧ್ಯದಲ್ಲಿ ತನ್ನ ರಥವನ್ನು ನಿಲ್ಲಿಸುವನು. ಯಾರ ಮೇಲೆ ಯುದ್ಧಮಾಡಬೇಕೆಂದು ಬಂದಿರುವನೋ ಅವರನ್ನು ಅರ್ಜುನ ಒಮ್ಮೆ ದಿಟ್ಟಿಸಿ ನೋಡುವನು. ಯಾರ ತೊಡೆಯ ಮೇಲೆ ತಮ್ಮ ಬಾಲ್ಯವನ್ನು ಕಳೆದರೋ, ಯಾರ ಆಶ್ರಯದಿಂದ, ಹರಕೆಯ ಬಲದಿಂದ, ಯುವಕರಾಗಿ ಬಲಾಢ್ಯರಾಗಿ ಪ್ರಖ್ಯಾತ ಬಿಲ್ಲಾಳುಗಳಾದರೋ, ಅಂತಹ ಕುರುಪಿತಾಮಹ ಭೀಷ್ಮನೇ ಸೈನ್ಯಕ್ಕೆ ಅಧಿಪತಿಯಾಗಿರುವನು. ಒಂದುಕಡೆ ತನಗೆ ಧನುರ್ವಿದ್ಯೆಯ ದೀಕ್ಷೆಕೊಟ್ಟು ಜಗತ್ತ್ರಯದಲ್ಲಿ ಅಸೀಮಸಾಹಸಿಯನ್ನಾಗಿ ಮಾಡಿ, ಹೆತ್ತಮಗನಾದ ಅಶ್ವತ್ಥಾಮನಿಗಿಂತ ಹೆಚ್ಚು ಪ್ರೀತಿಸುತ್ತಿದ್ದ ಗುರುವರ್ಯ ದ್ರೋಣಾ

ಚಾರ್ಯರಿರುವರು. ಅಕ್ಕಪಕ್ಕದಲ್ಲೇ ಒಂದೇ ವಂಶದ ತರುವಿನಿಂದ ಕವಲೊಡೆದ ದಾಯಾದಿಗಳು ಬಂಧುಗಳು ಮಿತ್ರರು ಮುಂತಾದವರು ಇರುವರು. ಇವರನ್ನು ನೋಡಿದೊಡನೆ ಹದಿನಾಲ್ಕು ವರುಷ ಅರಣ್ಯದಲ್ಲಿ ಪಟ್ಟ ಕಷ್ಟವನ್ನು ಆತ ಮರೆಯುವನು. ಪೌರುಷದ ತನ್ನ ಜೀವನವನ್ನೇ ಒಂದು ವರ್ಷ ಬೃಹನ್ನಳೆಯಾಗಿ ಸವೆಸಿದ ಅವಮಾನವನ್ನೂ ಆತ ಲೆಕ್ಕಿಸನು. ದ್ರೌಪದಿಯ ಅವಮಾನದ ಸಮಯದಲ್ಲಿ ಮಾಡಿದ ವೀರಪ್ರತಿಜ್ಞೆ ಜಾರುವುದು. ಗೊಡ್ಡು ವೈರಾಗ್ಯದ ಬೂದಿ ಸಿಂಹಪರಾಕ್ರಮಿಯ ಅಗ್ನಿಕುಂಡವನ್ನು ಆವರಿಸುವುದು. ತಾಮಸಿಕ ಮೋಹ ದಯೆಯ ನೆಪದಲ್ಲಿ ಕಾಲಿಟ್ಟಿತು. ಮತ್ತೊಂದು ಗಳಿಗೆಯಲ್ಲಿ ಮಹಾಶಸ್ತ್ರಾಸ್ತ್ರಗಳನ್ನು ಕಾರುವ ಗಾಂಡೀವ ಕೈಯಿಂದ ಜಾರಿತು. ಕಣ್ಣಿನಲ್ಲಿ ಕಂಬನಿ ತುಂಬಿತು. ಅಂಗೋಪಾಂಗವೆಲ್ಲಾ ಕಂಪಿಸಿತು. ಯುದ್ಧ ಮಾಡುವುದೆಂತು? ರಕ್ತದ ಕಾಲುವೆಯಿಂದ ರಣಭೂಮಿಯನ್ನು ಸಾರಿಸಿ ಜಯವಧುವಿಗೆ ಆಹ್ವಾನವೀಯಲೆ? ಆಚಾರ್ಯರನ್ನು ಪಿತಾಮಹರನ್ನು ನಂಟರಿಷ್ಟರನ್ನು ಕೊಂದ ಕಲುಷಿತ ಕೈಗಳಿಂದ ಧರ್ಮದೇವಿಯನ್ನು ಆರಾಧಿಸುವುದೆ?—ಎಂದು ಯೋಚಿಸುತ್ತಾ ಕಾರ್ಪಣ್ಯದೋಷಹತಸ್ವಭಾವನಾಗಿ ಯುದ್ಧಮಾಡುವುದು ಧರ್ಮವೇ ಎಂದು ಶ್ರೀಕೃಷ್ಣನನ್ನು ಪ್ರಶ್ನಿಸುವನು. ಆಗಲೇ—

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ ।**
**ಅನಾರ್ಯಜುಷ್ಟಂ ಅಸ್ವರ್ಗ್ಯಂ ಅಕೀರ್ತಿಕರಂ ಅರ್ಜುನ ॥**
**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವಾ ಉತ್ತಿಷ್ಠ ಪರಂತಪ ॥**

ಎಂದು ಗುಡುಗಿನಂತೆ ಮೊಳಗುವ ಗಂಭೀರವಾಣಿಯಿಂದ ಶ್ರೀಕೃಷ್ಣನ ಗೀತಾ ಸಂದೇಶ ಮೊದಲಾಗುವುದು. ಜ್ಞಾನಭಕ್ತಿವೈರಾಗ್ಯಗಳ ಬಿರುಗಾಳಿಯಿಂದ ತಾತ್ಕಾಲಿಕವಾಗಿ ಆವರಿಸಿದ ಅಜ್ಞಾನದ ಬೂದಿ ಹಾರಿಹೋಗುವುದು. ಸ್ವರ್ಗ ತಾನಾಗಿ ತೆರೆದ ಬಾಗಿಲಿನಂತೆ ಇದೆ ಧರ್ಮಯುದ್ಧ; ಗೆದ್ದರೆ ಇಹಲೋಕದ ಸೌಖ್ಯವಿದೆ, ಮಡಿದರೆ ಪರಲೋಕದ ಸೌಖ್ಯ; ಸ್ವಧರ್ಮಕ್ಕೋಸ್ಕರ ಮಡಿದರೂ ಶ್ರೇಷ್ಠವೆ—ಎಂದು ಮುಂತಾದ ಪೌರುಷವಾಕ್ಯದ ಸಲಾಕೆಯಿಂದ ಅರ್ಜುನನ ಅಗ್ನಿಕುಂಡವನ್ನು ಮೀಟಿ ಪುನಃ ಕ್ಷಾತ್ರಪೌರುಷದ ಕಿಡಿಕಾರುವಂತೆ ಮಾಡುವನು. ಅರ್ಜುನನನ್ನು ನಿಮಿತ್ತಮಾತ್ರವಾಗಿ ಮಾಡಿಕೊಂಡು

ಅಧರ್ಮದ ಕಳೆಯನ್ನು ಬೇರುಸಹಿತ ನಿರ್ದಾಕ್ಷಿಣ್ಯವಾಗಿ ಕಿತ್ತೊಗೆದು ಶಾಶ್ವತ ಧರ್ಮವನ್ನು ಜಗತ್ತಿಗೆ ಬೋಧಿಸುವನು.

ಭಗವದ್ಗೀತೆ ಭೀಷ್ಮಪರ್ವದಲ್ಲಿ ಅಂತರ್ಗತವಾಗಿದ್ದರೂ ಗೀತೆಯನ್ನು ಯಾರೋ ಬರೆದು ಮಹಾಭಾರತದಲ್ಲಿ ಸೇರಿಸಿರಬಹುದು ಎಂಬ ವಾದವನ್ನು ಕೆಲವರು ವಿಮರ್ಶಕರು ತರುವರು. ಅವರ ವಾದಕ್ಕೆ ಕಾರಣ—ಯುದ್ಧಕ್ಕೆ ಸನ್ನದ್ಧನಾಗಿ ಬಂದಿರುವ ಅರ್ಜುನನಲ್ಲಿ ವೈರಾಗ್ಯಬರುವುದು, ಅದನ್ನು ನಿಧಾನವಾಗಿ ಶ್ರೀಕೃಷ್ಣನು ಏಳುನೂರು ಶ್ಲೋಕಗಳಲ್ಲಿ ವಿವರಿಸುತ್ತಾ ಹೋಗುವುದು ಅಸಂಗತವಾಗಿದೆ ಎಂಬುದು. ಆದರೆ ಮಾನವನಿಗೆ ವೈರಾಗ್ಯ ಇಂತಹ ಕಾಲದಲ್ಲೇ ಬರಬೇಕು, ಇಂತಹ ಸನ್ನಿವೇಶದಲ್ಲೇ ಬರಬೇಕು ಎಂಬ ಯಾವ ನಿಯಮವೂ ಇಲ್ಲ. ಹಲವು ಘಟನೆಗಳು ಮಾನವನನ್ನು ಅತೀಂದ್ರಿಯ ಸತ್ಯದೆಡೆಗೆ ಕೊಂಡೊಯ್ಯುವುವು. ಅದರಲ್ಲಿಯೂ ಯುದ್ಧರಂಗ, ಸಾವಿರಾರು ಜನರ ಕೊಲೆ, ಬಂಧುಬಾಂಧವರ ಗುರುಹಿರಿಯರ ಹತ್ಯೆ ಇವುಗಳೆಲ್ಲಾ ಅರ್ಜುನನ ಹೃದಯವನ್ನು ಕರಗಿಸಿರಬಹುದು. ಅಷ್ಟು ದೀರ್ಘವಾದ ಉಪನ್ಯಾಸವನ್ನು ಶ್ರೀಕೃಷ್ಣ ಕೊಡುವುದಕ್ಕೆ ಆಗ ಸಮಯವೆಲ್ಲಿತ್ತು ಎಂಬ ಪ್ರಶ್ನೆಗೆ, ಶ್ರೀಕೃಷ್ಣನು ಅರ್ಜುನನಿಗೆ ಎಲ್ಲವನ್ನೂ ನಮಗೆ ಈಗ ಗೀತೆಯಲ್ಲಿ ಇರುವಂತೆಯೇ ಹೇಳದೆ ಕೆಲವು ಮಾತಿನಲ್ಲಿ ಸಂಕ್ಷೇಪಿಸಿ ಹೇಳಿರಬಹುದು. ಆದರೆ ಅದೇ ವಿಷಯಗಳನ್ನು ವ್ಯಾಸರು ಬರೆಯುವಾಗ ವಿವರವಾಗಿ ದೀರ್ಘವಾಗಿ ಮಾಡಿರಬಹುದು. ಈ ಸಂದರ್ಭದಲ್ಲಿ ಗೀತೆಯ ಪ್ರಸಿದ್ಧ ಟೀಕಾಕಾರರಾದ ಶ್ರೀಧರಸ್ವಾಮಿಗಳು ತಮ್ಮ ಪ್ರಸ್ತಾವನೆಯಲ್ಲಿ ಹೇಳಿರುವ ಮಾತು ಅತ್ಯಂತ ಮನೋಜ್ಞವಾಗಿದೆ: 'ಭಗವಂತನು ಉಪದೇಶಿಸಿದ ವಿಷಯವನ್ನೇ ಕೃಷ್ಣ ದ್ವೈಪಾಯನರು ಏಳುನೂರು ಶ್ಲೋಕಗಳಲ್ಲಿ ಬರೆದರು . . . ಸಂಬಂಧವನ್ನು ಸೂಚಿಸುವುದಕ್ಕೋಸ್ಕರ ಅಲ್ಲಲ್ಲಿ ತಮ್ಮ ಶ್ಲೋಕಗಳನ್ನೂ ಸೇರಿಸಿದರು.'[1] ಈಗ 'ಭಗವದ್ಗೀತಾ' ಎಂದು ಹೇಳಲ್ಪಡುವ ಗ್ರಂಥದಲ್ಲಿ ಶ್ರೀಕೃಷ್ಣನ ಉಪದೇಶವು ಅಂತರ್ಗತವಾಗಿದೆ ಎಂಬುದರಲ್ಲಿ ಶ್ರೀಮದ್ವಿವೇಕಾನಂದಸ್ವಾಮಿೂ ಶ್ರೀಅರವಿಂದ ಇವರಿಗೆ ಸಂಶಯವಿರಲಿಲ್ಲವೆಂದು ಅವರ ಲೇಖನಗಳಿಂದ

---

[1] ತಮೇವ ಭಗವದುಪದಿಷ್ಟಮರ್ಥಂ ಕೃಷ್ಣದ್ವೈಪಾಯನಃ ಸಪ್ತಭಿಃ ಶ್ಲೋಕ-ಶತೈರುಪನಿಬಂಧ । ತತ್ರ ಚ ಪ್ರಾಯಶಃ ಶ್ರೀಕೃಷ್ಣಮುಖನಿಃಸೃತಾನೇವ ಶ್ಲೋಕಾನ-ಲಿಖತ್ । ಕಾಂಶ್ಚಿತ್ತತ್ಸಂಗತಯೇ ಸ್ವಯಂ ವ್ಯರಚಯತ್ ।

ಗೊತ್ತಾಗುತ್ತದೆ. ಶೈಲಿಯ ರೀತಿಯನ್ನು ನೋಡಿದರೆ ಮಹಾಭಾರತದಲ್ಲಿ ಮತ್ತು ಗೀತೆಯಲ್ಲಿ ಒಂದೇ ಕವಿಯ ಕೈವಾಡವನ್ನು ನೋಡಬಹುದು ಎಂದು ಬಾಲಗಂಗಾಧರ ತಿಲಕರ ಅಭಿಪ್ರಾಯ. ಗೀತೆಯನ್ನು ಬಿಟ್ಟರೆ ಮಹಾಭಾರತಕ್ಕೆ ಬೆಲೆಯಿಲ್ಲ, ಕಳೆಯಿಲ್ಲ. ಆದಕಾರಣವೇ ಹಿಂದಿನವರು ಗೀತೆಯನ್ನು ಕುರಿತು

'ಭಾರತತೈಲಪೂರ್ಣಃ ಪ್ರಜ್ವಾಲಿತೋ ಜ್ಞಾನಮಯಪ್ರದೀಪಃ'

ಎಂದು ಹೇಳಿರುವರು. ಇಡೀ ಮಹಾಭಾರತ ಗೀತೆಯೆಂಬ ನಂದಾದೀವಿಗೆಯನ್ನು ಹತ್ತಿಸುವುದಕ್ಕೆ ಇರುವ ತೈಲದಂತೆ.

ಗೀತೆ ಪ್ರಸ್ಥಾನತ್ರಯದಲ್ಲಿ ಒಂದು. ಹಿಂದಿನಿಂದಲೂ ತ್ರಿಮತಸ್ಥಾಪನಾಚಾರ್ಯರ ಗೌರವಕ್ಕೆ ಪಾತ್ರವಾಗಿದೆ. ಯಾವ ಆಚಾರ್ಯರು ಬರಲಿ, ಅವರು ಒಂದು ತತ್ತ್ವಸಂಪ್ರದಾಯವನ್ನು ಸ್ಥಾಪಿಸಬೇಕಾದರೆ, ಗೀತೆಗೆ ಭಾಷ್ಯವನ್ನು ಬರೆದು ತಾವು ಸಾರುವ ತತ್ತ್ವ ಆಗಲೇ ಗೀತೆಯಲ್ಲಿ ಅಂತರ್ಗತವಾಗಿದೆ ಎಂದು ತೋರಿಸಿದರೆ ಮಾತ್ರ ಅವರು ನೆಡುವ ಸಂಪ್ರದಾಯದ ತರುವಿಗೆ ಮುಂದೆ ಬರುವವರು ನೀರು ಹಾಕುವರು.

ಹಲವಾರು ಉಪನಿಷತ್ತುಗಳು ಶ್ರೀಕೃಷ್ಣನ ಕಾಲಕ್ಕೆ ಮುಂದೆ ಇದ್ದುವು. ಅವು ಸಾಧಾರಣ ಜನರು ಓದಿ ಅರ್ಥಮಾಡಿಕೊಳ್ಳುವಷ್ಟು ಸುಲಭವಾಗಿರಲಿಲ್ಲ. ಸೂಕ್ಷ್ಮಮತಿಯುವರಾಗಿರಬೇಕು; ಬುದ್ಧಿಯ ಗರಡಿಯಲ್ಲಿ ಚೆನ್ನಾಗಿ ಪಳಗಿರಬೇಕು. ಉಪನಿಷತ್ತುಗಳಲ್ಲಿ ಭಕ್ತಿ ಕೆಲವು ಕಡೆ ಮಿಂಚಿನಂತೆ ಹೊಳೆದರೂ ಅಲ್ಲಿ ಪ್ರಾಧಾನ್ಯವಿರುವುದು ಜ್ಞಾನಮಾರ್ಗಕ್ಕೆ. ವೇದದಲ್ಲಿ ಬರುವ ಉಪನಿಷತ್ತುಗಳನ್ನು ಓದಲು ಎಲ್ಲರೂ ಅರ್ಹರಲ್ಲವೆಂದೂ ಬೇರೆ ಪೂರ್ವಿಕರು ಬೇಲಿಹಾಕಿದ್ದರು. ಎಲ್ಲಾ ಪಂಗಡಗಳಿಗೂ ತೆರೆದ, ಪಂಡಿತನಿಂದ ಪಾಮರನ ವರೆಗೆ ಓದಿದರೆ ತಿಳಿಯಬಹುದಾದ, ವಿಚಾರದ ಒರೆಗಲ್ಲಿನ ಮೇಲೆ ತಿಕ್ಕಿದಾಗ ಹೇಗೆ ನಮಗೆ ತೃಪ್ತಿಯನ್ನು ಕೊಡಬಲ್ಲುದೋ ಹಾಗೆ ಭಾವದ ನಾಡಿಯನ್ನು ಮೀಟಿ ಹೃದಯಕ್ಕೆ ಆನಂದವನ್ನು ಕೊಡಬಲ್ಲ, ಜಗದ ಕಷ್ಟನಷ್ಟಗಳನ್ನು ಕಂಡಾಗ ಓಡಿಹೋಗದೆ ಜಗ್ಗದೆ ಕುಗ್ಗದೆ ಎದೆಗೊಟ್ಟು ಅವುಗಳೊಂದಿಗೆ ಕೊನೆಯ ತನಕ ಹೋರಾಡುವಂತಹ ಕರ್ಮಯೋಗಿಗಳನ್ನು ಪ್ರೋತ್ಸಾಹಿಸುವಂತಹ ಸಂದೇಶವೊಂದು ಜಗತ್ತಿಗೆ ಬೇಕಾಗಿತ್ತು. ಶ್ರೀಕೃಷ್ಣನು ಈ ಅವಶ್ಯಕತೆಯನ್ನು ಮನಗಂಡು ಗೀತೆಯಲ್ಲಿ ಒಂದು ಮಾರ್ಗ

ಚಾನಲನನ್ನು ಶೋಧಿಸಿ ನಿರ್ನಾಮಮಾಡುವುದು ಅತ್ಯದ್ಭುತವಾದ ಸಾಹಸ. ಅದು ಕೆಲವು ದಿನಗಳಲ್ಲಿ ಮುಗಿಯುವುದಿಲ್ಲ, ಕೆಲವು ವರ್ಷಗಳಲ್ಲಿ ಮುಗಿಯುವುದಿಲ್ಲ. ಹಲವು ಜನ್ಮಗಳನ್ನೇ ಅದಕ್ಕೆ ಮೀಸಲಾಗಿಡಬೇಕು. ಕೈಯಲ್ಲಿರುವ ಸುಖವನ್ನು ಬಿಟ್ಟು ಮುಂದೆ ಸಿಕ್ಕಬಹುದಾದ ಅನಂತವಾದ ಆನಂದಕ್ಕೆ ಕಾದು ಕುಳಿತಾಗ, ಆ ಸುಖವು ಇದೆಯೋ ಇಲ್ಲವೋ ಎಂಬ ಹಲವಾರು ಸಂಶಯಗಳು ನಮ್ಮನ್ನು ಮುತ್ತುವುವು. ಅರ್ಜುನನೂ ಕೂಡ ಈ ಪ್ರಶ್ನೆಯನ್ನೇ ಎತ್ತುವನು. ಅದಕ್ಕೆ ಶ್ರೀಕೃಷ್ಣನ ಭರವಸೆ ಇದು:

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ ॥**

"ಎಲೈ ಅರ್ಜುನ, ಯೋಗಭ್ರಷ್ಟನಿಗೆ ಇಹದಲ್ಲಾಗಲೀ ಪರದಲ್ಲಾಗಲೀ ವಿನಾಶವಿಲ್ಲ; ಏಕೆಂದರೆ ಕಲ್ಯಾಣಕಾರ್ಯಗಳನ್ನು ಮಾಡುವ ಯಾವನೂ ಅಧೋಗತಿಯನ್ನು ಹೊಂದುವುದಿಲ್ಲ." ಎಲ್ಲಾ ಸಾಧಕರಿಗೂ ನವಸ್ಫೂರ್ತಿಯನ್ನು ಕೊಡುವ ಸಂದೇಶವಿದು.

ಶ್ರೀಕೃಷ್ಣನ ಬೋಧನೆಯಲ್ಲಿ ಅಧಿಕಾರ ಅನುಭವ ವಿಚಾರ ಇವುಗಳ ಒಂದು ಸಾಮರಸ್ಯ ನಮಗೆ ತೋರುವುದು. ಶ್ರೀಕೃಷ್ಣನು ಸ್ವಯಂ ಅವತಾರ ಪುರುಷನಾಗಿದ್ದರೂ ಆಜನ್ಮಸಿದ್ಧ ಪುರುಷನಾದರೂ, ಬೋಧಿಸುವಾಗ, ಹಿಂದಿನ ಋಷಿಗಳು ತನ್ನಂತೆ ಹೇಳಿರುವರು, ಹಿಂದಿನ ಧರ್ಮಗ್ರಂಥಗಳು ಅದನ್ನೇ ಸಾರುವುವು ಎಂದು ಪ್ರಮಾಣಕ್ಕೆ ಹಿಂದಿನವರ ಅನುಭವಗಳನ್ನು ತರುವನು. ಹಿಂದಿನವರನ್ನೆಲ್ಲಾ ಧಿಕ್ಕರಿಸಿ, ಅವರೇನೂ ಕಂಡಿಲ್ಲ, ನಾನೇ ಅದನ್ನು ಮೊದಲ ಬಾರಿ ನೋಡಿರುವುದು ಎಂದು ಹೆಮ್ಮೆ ಕೊಚ್ಚಿಕೊಳ್ಳುವುದಿಲ್ಲ. ಹಿಂದಿನವರಿಗೆ ಗೌರವ ತೋರುವುದು ಇಂದಿನ ಕಿರಿಯರ ಒಂದು ಹಿರಿಯ ಗುಣ. ಅರ್ಜುನನ ಸಂಶಯವನ್ನು ಕೇವಲ ಹಿಂದಿನವರ ಅಧಿಕಾರವಾಣಿಯಿಂದ ಮಾತ್ರ ಹೋಗಲಾಡಿಸಲಿಲ್ಲ; ಪ್ರತ್ಯಕ್ಷವಾದ ಅನುಭವವನ್ನು ಕೊಡುವನು. ಅನುಭವಕೊಟ್ಟ ಮೇಲೂ ಶ್ರೀಕೃಷ್ಣನು ವಿಚಾರವನ್ನು ಬಿಡಲಿಲ್ಲ; ಅಥವಾ ತಾನು ಹೇಳಿದುದನ್ನೇ ಇವನು ಮಾಡಬೇಕೆಂದು ಬಲಾತ್ಕರಿಸಲೂ ಇಲ್ಲ. 'ಗುಹ್ಯವಾದ ಜ್ಞಾನವನ್ನು ನಿನಗೆ ಹೇಳಿದೆ. ಈಗ ನಿನಗೆ ಹೇಗೆ ತೋರುವುದೋ ಹಾಗೆ ಮಾಡು' ಎಂದು ಅವನ ಪಾಲಿಗೇ ಬಿಡುವನು.

ಶ್ರೀಕೃಷ್ಣನಂತಹ ಸೂಕ್ಷ್ಮಮತಿಯ ಉದಾರಚಿತ್ತದ ಅತಿ ಜಾಗರೂಕರಾದ ಸುಧಾರಕರು ಸಿಕ್ಕುವುದು ಬಹಳ ಕಷ್ಟ. ಅನೇಕ ವೇಳೆ ನಮ್ಮ ಕಣ್ಣ ಮುಂದೆ ಬಂದು ಹೋದ ಸುಧಾರಕರಲ್ಲಿ ಪರರಿಗಾಗಿ ಮರುಗುವ ಹೃದಯವೇನೋ ಇದೆ; ಆದರೆ ಅವರಲ್ಲಿ ಸಹನೆ ಇಲ್ಲ. ಎಲ್ಲಿ ತಮ್ಮ ದೃಷ್ಟಿಯಿಂದ ಅದು ತಪ್ಪೋ ಅದನ್ನು ಖಂಡಿಸಿ ಅದನ್ನು ನಾಶಮಾಡುವ ವರೆಗೂ ಅವರ ಚಿತ್ತಕ್ಕೆ ಶಾಂತಿಯಿಲ್ಲ. ಆದರೆ ಶ್ರೀಕೃಷ್ಣನು ಯಾವ ಮಾರ್ಗವನ್ನೂ ಖಂಡಿಸುವುದಿಲ್ಲ. ಅವನ ಎದುರಿಗೆ ಇಡೀ ಮಾನವಕೋಟಿಯ ವಿಕಾಸದ ಏಣಿ ಇದೆ. ಮಾನವನು ಪೂರ್ಣಾವಸ್ಥೆಗೆ ಬೆಳೆಯಬೇಕು. ಒಂದೇ ಸಲ ಮೇಲೆ ನೆಗೆಯುವುದಕ್ಕೆ ಆಗುವುದಿಲ್ಲ. ಹೂವು ಮಿಡಿಯಾಗಿ ಕಾಯಾಗಿ ಹಣ್ಣಾಗಬೇಕು. ನಮ್ಮ ಅವಸರಕ್ಕೆ ಅದು ಒಂದು ಸ್ಥಿತಿಯನ್ನು ಬಿಟ್ಟು ಮತ್ತೊಂದು ಸ್ಥಿತಿಯನ್ನು ಪಡೆಯಲಾರದು. ಮಗುವು ಹುಡುಗನಾಗಿ ಯುವಕನಾಗಿ ಜಗದ ಸುಖದುಃಖಗಳ ಪೆಟ್ಟನ್ನು ತಿಂದು ಮಾಗಬೇಕು. ಅಜ್ಞಾನಿಯೂ ಕೂಡ ನಾನಾ ಅನುಭವಗಳನ್ನು ಪಡೆದು ಜ್ಞಾನಿಯಾಗಬೇಕು. ಶ್ರೀಕೃಷ್ಣನು ಯಾರನ್ನೂ ದೂರುವುದಿಲ್ಲ. ಮೆಟ್ಟಿಲುಮೆಟ್ಟಿಲಾಗಿ ಅವರನ್ನು ಮೇಲಕ್ಕೆ ಎತ್ತಲು ಪ್ರಯತ್ನಪಡುವನು. ಗೀತೆ, ಆಧ್ಯಾತ್ಮಿಕಜೀವನದಲ್ಲಿ ಆಗಲೇ ಒಂದು ಮಟ್ಟವನ್ನು ಮುಟ್ಟಿರುವವನಿಗೆ ಮಾತ್ರ ನೆರವಾಗುವ ಗ್ರಂಥವಲ್ಲ. ಆಧ್ಯಾತ್ಮಿಕಜೀವನದಲ್ಲಿ ಆಗತಾನೇ ಕಣ್ತೆರದ ಎಳೆಯ ಹಸುಳೆಯಿಂದ ಹಿಡಿದು ಸಿದ್ಧಿಯ ಪರಮಪದವನ್ನು ಮುಟ್ಟಿದ ಪರಮಹಂಸನ ವರೆಗೆ ಅವರವರಿಗೆ ಬೇಕಾದ ಸಲಹೆಗಳಿವೆ.

ಶ್ರೀಕೃಷ್ಣನು ಚಾರಿತ್ರಿಕವ್ಯಕ್ತಿಯೋ ಅಥವಾ ಕಾಲ್ಪನಿಕವ್ಯಕ್ತಿಯೋ ಎಂದು ಕೆಲವರು ಸಂದೇಹಪಡಬಹುದು. ಕೃಷ್ಣ ಕಾಲ್ಪನಿಕವ್ಯಕ್ತಿಯಾದರೇನು? ಗೀತೆಯನ್ನು ಯಾರು ಬರೆದರೇನು? ಅದರ ತತ್ತ್ವಗಳು ಅಮರವಾಗಿವೆ. ಇದಕ್ಕೆ ಸಾಕ್ಷಿ ಗೀತಾಸಂದೇಶದಂತೆ ತಮ್ಮ ಜೀವನವನ್ನು ಅನುಗೊಳಿಸಿ ಸಿದ್ಧಿಯ ಪರಮಪದವನ್ನು ಮುಟ್ಟಿದ ಹಲವು ಸಾಧುಸಂತರ ಆಚಾರ್ಯರ ಜೀವನ.

ಗೀತೆ ಕಾಲಾನಂತರ ವ್ಯಕ್ತಿಗೆ ಮುಕ್ತಿಯನ್ನು ಕೊಡುವ ಗ್ರಂಥ ಮಾತ್ರವಲ್ಲ; ಇಹದಲ್ಲಿ ಜೀವರಿಗೆ ಸುಖವನ್ನೂ, ಇಡೀ ದೇಶದಲ್ಲಿ ಸಮಾಜಕ್ಕೆ ಸಕಲ ಕಾರ್ಯರಂಗದಲ್ಲಿಯೂ ಒಂದು ಹೊಸ ಹುರುಪನ್ನೂ ಕೊಡಬಲ್ಲುದು.

ವನ್ನು ತೋರಿರುವನು. ಶ್ರೀಕೃಷ್ಣನು ಉಪನಿಷತ್ತುಗಳನ್ನು ತ್ಯಜಿಸಲಿಲ್ಲ. ಅವುಗಳ ಸಾರವನ್ನೆಲ್ಲಾ ಗೀತೆಯಲ್ಲಿ ಹುದುಗಿಸಿಟ್ಟಿರುವನು. ಆದಕಾರಣ ಉಪನಿಷತ್ತಿಗೆ ಇರುವ ಪ್ರಾಧಾನ್ಯವೇ ಗೀತೆಗೂ ಇರುವುದು.

**'ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ'**

ಎಂದಿರುವರು. ಗೀತೆಯ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ

**'ಇತಿ ಶ್ರೀಮದ್ಭಗವದ್ಗೀತಾಸು ಉಪನಿಷತ್ಸು'**

ಎಂದು ಹೇಳಿದೆ. ಆದರೆ ಇದು ಉಪನಿಷತ್ತಿಗಿಂತಲೂ ಸುಲಭ. ಶ್ರೀಕೃಷ್ಣನು ಮಾತನಾಡುತ್ತಿರುವಾಗ ಅರ್ಜುನನು ಮಾತ್ರವಲ್ಲ ಇರುವುದು. ಅರ್ಜುನ ಮಾನವಕೋಟಿಯ ಒಬ್ಬ ಪ್ರತಿನಿಧಿ. ಆತನೊಂದು ನಿಮಿತ್ತಮಾತ್ರ. ಇಡೀ ಜಗದ ಬದ್ಧಜೀವಿಗಳಿಗೆ ದುಃಖಿಗಳಿಗೆ ನಿರಾಶ್ರಿತರಿಗೆ ಸಂಶಯ ತುಮುಲದಲ್ಲಿ ಸಿಕ್ಕಿ ನರಳುತ್ತಿರುವವರಿಗೆ ಅರ್ಜುನನ ಮೂಲಕ ಸಂದೇಶ ಬರುತ್ತದೆ. ಶ್ರೀ ಕೃಷ್ಣನ ಮುಂದೆ ದ್ವಾಪರಯುಗದ ಅಂತ್ಯ ಮಾತ್ರವಲ್ಲ ಇರುವುದು. ಅನೇಕ ಶತಮಾನಗಳನ್ನೊಳಗೊಂಡ ಕಾಲಚಕ್ರವೇ ಅವನ ಮುಂದೆ ತಿರುಗುತ್ತಿದೆ. ಎಲ್ಲಾ ದೇಶದಲ್ಲಿಯೂ, ಎಲ್ಲಾ ಕಾಲದಲ್ಲಿಯೂ, ಜೀವಿಗಳು ಯಾವ ವೃತ್ತಿ ಯನ್ನು ಅನುಸರಿಸುತ್ತಿರಲಿ, ಪಂಡಿತನಾಗಿರಲಿ, ಪಾಮರನಾಗಿರಲಿ, ಯತಿ ಯಾಗಿರಲಿ, ಗೃಹಸ್ಥನಾಗಿರಲಿ, ಎಲ್ಲರಿಗೂ ಉಪಯೋಗವಾಗುವಂತಹ ಅಮೃತವಿದೆ ಇಲ್ಲಿ. ಶ್ರೀಶಂಕರಾಚಾರ್ಯರು ಗೀತಾಭಾಷ್ಯವನ್ನು ಬರೆಯು ವಾಗ ಗೀತೆಯನ್ನು

**'ಸಮಸ್ತವೇದಾರ್ಥಸಾರಸಂಗ್ರಹಭೂತಂ',**
**'ತದರ್ಥವಿಜ್ಞಾನೇ ಸಮಸ್ತಪುರುಷಾರ್ಥಸಿದ್ಧಿಃ'**

ಎಂದಿರುವರು.

ಭಗವದ್ಗೀತೆಯಲ್ಲಿರುವುದು ಒಂದು ತತ್ತ್ವವಲ್ಲ, ಒಂದು ಸಂಪ್ರದಾಯ ವಲ್ಲ. ಇದೊಂದು ಹಿಮಾಲಯಪರ್ವತಸ್ತೋಮದಂತೆ ಹಲವು ತತ್ತ್ವಗಳ ಶ್ರೇಣಿ. ಇಲ್ಲಿ ಅತಿಮುಖ್ಯವಾದ ದ್ವೈತ ಅದ್ವೈತ ವಿಶಿಷ್ಟಾದ್ವೈತ ಎಂಬ ಮುಖ್ಯನದಿಗಳು ಉದ್ಭವಿಸಿ ಹರಿದು ಭಗವಂತನೆಂಬ ಮಹಾಸಾಗರವನ್ನು ಸೇರುವುವು. ಇಲ್ಲಿ ಇರುವುದು ಒಂದು ಯೋಗವಲ್ಲ. ಜೀವಿಯ ಯುಕ್ತಿ ಭಕ್ತಿಶಕ್ತಿಗಳನ್ನು ಪ್ರಚೋದಿಸುವುದಕ್ಕೆ ಯಾವಯಾವ ಸಂದೇಶಗಳು ಬೇಕೋ

ಅದೆಲ್ಲಾ ಇಲ್ಲಿರುವುದು. ಆ ಮಿಶ್ರವನ್ನು ಯಾವುದಾದರೊಂದು ಹೆಸರಿನಿಂದ ಕರೆಯಬಹುದು ಅಥವಾ ಕರೆಯದೆ ಇರಬಹುದು.

ಭಕ್ತರು ಬೇಕಾದರೆ ಸಾಕಾರವನ್ನು ಆರಾಧಿಸಬಹುದು, ಜ್ಞಾನಿಗಳು ನಿರಾಕಾರವನ್ನು ಧ್ಯಾನಿಸಬಹುದು. ಅವನೆಲ್ಲೆಡೆಯಲ್ಲಿಯೂ ಇರುವನು. ಅವನಿಚ್ಛೆಯಿಂದ ವಿಶ್ವ ಚಿಮ್ಮಿ ಬಂದಿದೆ. ಅವನೊಲುಮೆಯಿಂದ ಇದು ಬೆಳೆಯುತ್ತಿದೆ. ಅವನ ಮುನಿಸಿನಿಂದ ಇದು ನಾಶವಾಗುವುದು. ಎಲ್ಲೆಡೆಯಲ್ಲಿಯೂ ಅವನ ಕಾಲುಗಳೆ, ಎಲ್ಲೆಡೆಯಲ್ಲಿಯೂ ಅವನ ಕೈಗಳೆ, ಎಲ್ಲೆಡೆಯಲ್ಲಿಯೂ ಅವನ ಶಿರಸ್ಸುಗಳೆ! ಇಷ್ಟೇಕೆ, ಅನಂತ ತಾರೆನೀಹಾರಿಕೆಗಳನ್ನೊಳಗೊಂಡ ಬ್ರಹ್ಮಾಂಡವೆಲ್ಲವೂ ಅವನ ಒಂದು ಅಂಶದಿಂದ ಆಗಿದೆ. ಈ ವ್ಯಕ್ತದಲ್ಲೇ ಅವನು ಬರಿಯದಾಗುವುದಿಲ್ಲ. ಇದನ್ನೂ ಮೀರಿರುವನು. ಯಾವ ಹೆಸರಿನಿಂದ ಬೇಕಾದರೂ ಅವನನ್ನು ಕರೆಯಬಹುದು, ಯಾವ ರೂಪದಿಂದ ಬೇಕಾದರೂ ಅವನನ್ನು ಆರಾಧಿಸಬಹುದು, ಯಾವ ಭಾವದ ಮೂಲಕವಾಗಿ ಬೇಕಾದರೂ ನಾವು ಸಂಬಂಧವನ್ನು ಕಲ್ಪಿಸಿಕೊಳ್ಳಬಹುದು. ಶ್ರೀಕೃಷ್ಣನು ಇನ್ನೂ ಒಂದು ಹೆಜ್ಜೆ ಮುಂದುವರಿದು ಹೋಗುವನು. ಭಕ್ತನು ಯಾವ ನೆವದಿಂದಲಾದರೂ ಇವನ ಹತ್ತಿರ ಬರಬಹುದು. ಎಲ್ಲರನ್ನೂ ಮೆಟ್ಟಲುಮೆಟ್ಟಲಾಗಿ ಮುಕ್ತಿಗೆ ಸೆಳೆಯುವನು. ಭಕ್ತರಲ್ಲಿ ನಾಲ್ಕು ವಿಧ— ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ. ಅವರಲ್ಲಿ ಜ್ಞಾನಿಯು ಅತ್ಯಂತಪ್ರಿಯನಾದರೂ ಉಳಿದವರನ್ನು ಉದಾರಿಗಳೆನ್ನುವನು. ಏಕೆಂದರೆ ಕಾಮದಿಂದ ಪ್ರೇರಿತನಾಗಿ ಇಂದು ಭಕ್ತ ದೇವರ ಹತ್ತಿರ ಬಂದರೂ ಅವನ ಕಾಮವೆಲ್ಲ ಕ್ರಮೇಣ ಸೀದುಹೋಗಿ ಪೂರ್ಣ ಭಕ್ತಿಯೊಂದೇ ಕೊನೆಗೆ ನೆಲೆಸುವುದು.

ಆಧ್ಯಾತ್ಮಿಕಜೀವನದಲ್ಲಿ ಮುಂದುವರಿದು ಗುರಿಸೇರಬೇಕಾದರೆ ಹೆಜ್ಜೆ ಹೆಜ್ಜೆಗೆ ನಮ್ಮ ಹೀನಸಂಸ್ಕಾರಗಳೊಂದಿಗೆ ಹೋರಾಡಬೇಕು. ಬಾಹ್ಯಜಗತ್ತಿನಲ್ಲಿ ಮಾನವನು ಮಾಡುವ ಸಾಹಸವನ್ನೆಲ್ಲಾ ಮೀರಿದೆ ಆಂತರಿಕಜಗತ್ತಿನ ಸಾಹಸ. ಕಡಲಾಳಕ್ಕೆ ಮುಳುಗಬಹುದು. ಮುಗಿಲೆತ್ತರಕ್ಕೆ ಹಾರಬಹುದು. ಅಣುವನ್ನು ಭೇದಿಸಿ ಅದರ ರಹಸ್ಯವನ್ನು ಹೊರಗೆಡಬಹುದು. ಕಣ್ಣಿಗೆ ಕಾಣುವ ಅರಿಗಳ ಸೇನಾಸಮೂಹವನ್ನು ಹಲವಾರು ಶಸ್ತ್ರಾಸ್ತ್ರಗಳ ಸಹಾಯದಿಂದ ಗೆಲ್ಲುವುದು ಸುಲಭ. ಆದರೆ ಕಣ್ಣಿಗೆ ಕಾಣಿಸದ, ನಮ್ಮ ಮನಸ್ಸಿನ ಅಂತರಾಳದಲ್ಲಿದ್ದು ಆಸೆಯ ಬುದ್ಬುದಗಳನ್ನು ಹೊರಗೆಡಹುತ್ತಿರುವ ಬಡ

ಇದು ಪಾರಾಯಣಗ್ರಂಥವಾಗಿ ನಾಲಿಗೆಯ ಮೇಲೆ ನಲಿದಾಡಿದರೆ ಸಾಲದು. ಇದು ಮುಖ್ಯವಾಗಿ ಅನುಷ್ಠೇಯಗ್ರಂಥ. ಇದರ ಭಾವ ನಮ್ಮ ಹೃದಯದ ಆಳಕ್ಕೆ ಹೋಗಬೇಕು. ಗೀತಾಮೃತ ನಮ್ಮ ಜೀವನದ ತಾಯಿಬೇರಿಗೆ ತಾಗಬೇಕು. ಆಗ ಮಾತ್ರ ನಮ್ಮ ಆಲೋಚನೆ ಮತ್ತು ಕ್ರಿಯೆ ಪ್ರಗತಿ ಗಾಮಿಗಳಾಗುವುವು. ಗೀತೆ ನಿತ್ಯಕಾಲದ ಧರ್ಮಗ್ರಂಥ; ಕಾಲಕಳೆದಂತೆ ಮಾಸುವುದಿಲ್ಲ.

ನಮ್ಮ ಜೀವನವೇ ಒಂದು ಕುರುಕ್ಷೇತ್ರ. ಎಲ್ಲಾ ಮಾನವರೂ ಅರ್ಜುನನಂತೆ ಬಾಹ್ಯಶತ್ರುವಿನೊಂದಿಗೆ ಯುದ್ಧಮಾಡದೇ ಇದ್ದರೂ ಬೇರೆ ಬೇರೆ ಕಾರ್ಯಕ್ಷೇತ್ರದಲ್ಲಿ ನಿರತರಾಗಿರುವಾಗ ಅರ್ಜುನನ ಮನಸ್ಸಿನಲ್ಲಿ ಯಾವ ಯಾವ ಪ್ರಶ್ನೆಗಳೆದ್ದವೋ, ಅವನು ಯಾವ ದುಃಖಕ್ಕೆ ಈಡಾದನೋ, ಅವನು ಯಾವ ಧರ್ಮಸಂಕಟಕ್ಕೆ ಒಳಗಾದನೋ ಅದರಂತೆ ನಾವೆಲ್ಲರೂ ಒಂದಲ್ಲ ಒಂದು ದಿನ ಅನುಭವಿಸುವೆವು. ಶ್ರೀಕೃಷ್ಣ ಪಾರ್ಥನಿಗೆ ಮಾತ್ರ ಸಾರಥಿ ಯಲ್ಲ. ಎಲ್ಲಾ ಜೀವರ ರಥಕ್ಕೆ ಸಾರಥಿ ಅವನು. ಅವನನ್ನು ನಂಬಿ ನಮ್ಮ ಜೀವನರಥವನ್ನು ಮುಂದುವರಿಸಿದರೆ, ನಮ್ಮನ್ನು ಸಂಶಯಗಳಿಂದ ಪರಿಹರಿಸಿ ಕಷ್ಟನಷ್ಟಗಳ ಕೋಟಲೆಯಿಂದ ಮೇಲೆತ್ತಿ, ಶಾಶ್ವತ ಸಚ್ಚಿದಾನಂದವನ್ನು ನೀಡುವೆನೆಂದು ಭರವಸೆ ಕೊಟ್ಟಿರುವನು. ಶ್ರೀಕೃಷ್ಣ ಇಡೀ ಮಾನವಕೋಟಿಗೆ ಎಲ್ಲಾ ಕಾಲಕ್ಕೂ ಎಲ್ಲಾ ದೇಶಕ್ಕೂ ಕೊಟ್ಟ ಭರವಸೆಯನ್ನೊಳಗೊಂಡಿದೆ ಶ್ರೀಮದ್ಭಗವದ್ಗೀತೆ.

ಶ್ರೀರಾಮಕೃಷ್ಣ ಆಶ್ರಮ
ಮೈಸೂರು

ಸ್ವಾಮಿ ಸೋಮನಾಥಾನಂದ

# ಪ್ರಸ್ತಾವನೆ

ಶ್ರೀಮದ್ಭಗವದ್ಗೀತೆ ಕಳೆದ ೨೫೦೦ ವರ್ಷಗಳಿಂದ ತನ್ನ ಪ್ರಭಾವವನ್ನು ಹಿಂದೂಜನಾಂಗದ ಮೇಲೆ ಬೀರಿದೆ. ಭಾರತದ ಆಧ್ಯಾತ್ಮಿಕಭಾವಪ್ರಪಂಚ ದಲ್ಲಿ ಇದಕ್ಕಿಂತ ಜನಪ್ರಿಯವಾದ ಸರ್ವಾಂಗೀಕೃತವಾದ ಸಾಹಿತ್ಯವಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಈಗಲೂ ದಿನಕಳೆದಂತೆ ಜನಗಳಿಗೆ ಇದರ ಮೇಲೆ ಆದರ ಹೆಚ್ಚುತ್ತಿದೆ. ಗೀತೆಯ ಮಹತ್ತ್ವಕ್ಕೆ ಅನೇಕ ಕಾರಣಗಳುಂಟು: ಲೋಕವಿಶ್ರುತವಾದ ಮಹಾಭಾರತದ ಒಂದು ಅಂಗ ಇದು; ಗೀತೆಯ ಸಂವಾದಕ್ಕೆ ಕಾರಣರಾದ ಗುರುಶಿಷ್ಯರು ಜಗನ್ಮೋಹಕರಾದ ಕೇಶವಾರ್ಜು ನರು; ಹಿನ್ನೆಲೆ ಒಂದು ಪ್ರಕ್ಷುಬ್ಧವಾದ ಅಗಾಧವಾದ ರಣನದಿ; ಶಿಷ್ಯನು ಕೇಳುತ್ತಿರುವುದು ಸಾವುಬದುಕಿನ ಪ್ರಶ್ನೆಗಳು; ಸರಳವಾಗಿಯೂ ಸಮರಸ ವಾಗಿಯೂ ಮನೋಹರವಾಗಿಯೂ ಇರುವ ಶೈಲಿಯಲ್ಲಿ ಬರೆಯಲ್ಪಟ್ಟಿದೆ ಭಗವಂತನ ಗೀತೆ. ಗೀತೆಯ ಅಮೃತತ್ವಕ್ಕೆ ಇವೇನು ಅಷ್ಟು ಸಾಕಾದ ಕಾರಣಗಳಲ್ಲ. ಇನ್ನೂ ವಿಶೇಷ ಗುಣಗಳಿರಬೇಕು. ಒಂದು ಮಹದ್ಗ್ರಂಥ ವನ್ನು ಪರೀಕ್ಷೆಮಾಡಬೇಕಾದರೆ ಅದು ನಮ್ಮ ಮೂರು ನಿರೀಕ್ಷೆಗಳನ್ನು ಈಡೇರಿಸಬೇಕು: ಮೊದಲನೆಯದು, ಅದು ಆತ್ಮಾವಲೋಕನಕ್ಕೆ ಸಹಕಾರಿ ಯಾಗಿದೆಯೆ? ಎರಡನೆಯದು, ಸಾಮಾಜಿಕ ಹಿತನಿಷ್ಠೆಗೆ ಮನುಷ್ಯನನ್ನು ಪ್ರೇರಿಸುತ್ತಿದೆಯೆ? ಮೂರನೆಯದು, ಅದರಲ್ಲಿ ಬೋಧಿಸಲ್ಪಟ್ಟ ವಿಷಯಗಳು ಸಾರ್ವತ್ರಿಕವೆ? ಆತ್ಮಾವಲೋಕನದಿಂದ ಆಂತರಿಕ ಶಾಂತಿಯೂ ಮಾನವ ಹಿತನಿಷ್ಠೆಯಿಂದ ಹೊರಗಿನ ಶಾಂತಿಯೂ ಆಗುವುದೆಂಬುದು ಸ್ವತಃಸಿದ್ಧ. ಗೀತೆಯನ್ನು ಮೊದಲಿನಿಂದ ಕೊನೆಯ ವರೆಗೆ ಹುಡುಕಿದರೂ ಸಂಕುಚಿತ ಭಾವಗಳನ್ನು ಕಂಡುಹಿಡಿಯಲು ಕಷ್ಟವಾಗುತ್ತೆ. ಎಲ್ಲೆಲ್ಲಿ ನೋಡಿದರೂ ಎಲ್ಲ ಮನುಷ್ಯರಿಗೆ ಎಲ್ಲ ಸಂದರ್ಭಗಳಿಗೆ ಅನ್ವಯಿಸುವ ವಿಶಾಲವಾದ ಮನೋ ಭಾವನೆಗಳು. "ಅನ್ಯದೇವತಾಭಕ್ತರೂ ಕೂಡ ಶ್ರದ್ಧೆಯಿಂದ ಆಯಾ ದೇವತೆಗಳನ್ನು ಪೂಜಿಸಿದರೆ ನನ್ನನ್ನೇ ಅವಿಧಿಪೂರ್ವಕವಾಗಿ ಪೂಜಿಸುತ್ತಾರೆ" (೯, ೨೯) ಎಂದು ಪರಮಕಾರುಣಿಕನಾದ ಭಗವಂತನು ಸ್ವತಃ ಹೇಳಿರುತ್ತಾನೆ.

ಶ್ರದ್ಧಾಭಕ್ತಿಗಳು ಬೆಳಕಿನಂತೆ ಎಲ್ಲಿಂದ ಬಂದರೂ ಅವುಗಳಿಗೆ ನಿರಾಕರಣೆ ಯಿಲ್ಲ. ಈ ಮೂರು ದೃಷ್ಟಿಕೋನಗಳಿಂದಲೂ ಗೀತಾಚಾರ್ಯನು ನಮ್ಮ ಆಶಾಪ್ರತೀಕ್ಷೆಗಳನ್ನು ತೃಪ್ತಿಪಡಿಸಿರುತ್ತಾನೆ.

ಗೀತೆಯಲ್ಲಿ ಪ್ರತಿಪಾದಿತನಾಗಿರುವ ಈಶ್ವರನು ಅತ್ಯಂತ ದೂರದಲ್ಲಿರುವ ನಿರಂಕುಶನಾದ ಸ್ವೇಚ್ಛಾವರ್ತಿಯಾದ ಒಬ್ಬ ಮಹದ್ವ್ಯಕ್ತಿಯಲ್ಲ; ನಮ್ಮ ಹೃದ್ದೇಶದಲ್ಲಿ ಯಾವಾಗಲೂ ಅಂತರ್ಯಾಮಿಯಾಗಿರುವ ಸಚ್ಚಿದಾನಂದ ಸ್ವರೂಪನಾದ ಪುರುಷೋತ್ತಮ. ಮನುಷ್ಯರ ಬುದ್ಧಿಗೆ ವಿರುದ್ಧವಾಗಿ ಅಸಮಂಜಸವಾಗಿ ತೋರುವ ಕಲ್ಪನೆಗಳು ಇಲ್ಲಿ ಒಟ್ಟುಗೂಡುತ್ತವೆ. ಅವನು ವ್ಯಕ್ತಿಸ್ವರೂಪವುಳ್ಳವನು ವ್ಯಕ್ತಿಸ್ವರೂಪವಿಲ್ಲದವನು, ಸಗುಣಸವಿಶೇಷನು ನಿರ್ಗುಣನಿರ್ವಿಶೇಷನು, ಜಗತ್ತಿನ ಜನ್ಮಸ್ಥೇಮಭಂಗಾದಿಲೀಲೆಗಳಿಗೆ ಕಾರಣ ನಾಗಿದ್ದರೂ ನಿಷ್ಕ್ರಿಯನು ನಿರ್ವಿಕಾರನು; ಅವನೇ ಸರ್ವಯಜ್ಞಗಳ ಭೋಕ್ತೃ ಮತ್ತು ಪ್ರಭು. ಅವನ ಸ್ವರೂಪದಲ್ಲಿ ಗುಣಗಳಲ್ಲಿ ಕ್ರಿಯೆಗಳಲ್ಲಿ ಯಾವುದು ದೊಡ್ಡದು ಯಾವುದು ಚಿಕ್ಕದು ಎಂದು ನಿರ್ಧರಿಸಿ ಹೇಳಲು ನಮಗೆ ಸಾಧ್ಯವಿಲ್ಲ. ಅವತಾರವೆಂಬುದು ಭಗವತ್ಕೃಪೆಯ ಒಂದು ವಿಶಿಷ್ಟ ರೂಪ. ಮನುಷ್ಯರಿಗೆ ಪುರುಷಾರ್ಥದ ಪಥವನ್ನು ತೋರಿಸಲು ಪದೇ ಪದೇ ನಿರತಿಶಯವಾದ ಜ್ಞಾನಬಲಕ್ರಿಯೆಗಳಿಂದ ಕೂಡಿ ಭಗವಂತನು ಅವತರಿಸು ತ್ತಾನೆ. ಅವತಾರಕ್ಕೆ ಮೊದಲಿಲ್ಲ ಕೊನೆಯಿಲ್ಲ, ದೇಶಕಾಲಗಳ ಮಿತಿಯಿಲ್ಲ. ಭಗವಂತನ ಅವತಾರತತ್ತ್ವವನ್ನು ತಿಳಿದುಕೊಂಡು ಮನನಮಾಡುವುದು ಸಾಧನೆಯ ಅತ್ಯಂತ ಪರಿಣಾಮಕಾರಿಯಾದ ಒಂದು ಅಂಗ.

"ಯೋಗ" ಎಂಬ ಪದವು ಭಗವದ್ಗೀತಾಸ್ವರಪದ್ಧತಿಯ ಆಧಾರ ಸ್ವರ. ಗೀತೆಯ ಕಲ್ಪನೆಗಳೆಲ್ಲವೂ ಕೇಂದ್ರದಲ್ಲಿರುವ ಈ ಮೂಲಸ್ವರಕ್ಕೆ ಅನುಗುಣವಾಗಿವೆ. ಗೀತೆಯೇ ಯೋಗಶಾಸ್ತ್ರ, ಗೀತೆಯಲ್ಲಿ ಪ್ರತಿಪಾದ್ಯನಾದ ದೇವನೇ ಯೋಗೇಶ್ವರ, ಗೀತೆಯು ಬಾರಿಬಾರಿಗೂ ವರ್ಣಿಸುವ ಆದರ್ಶ ವ್ಯಕ್ತಿಯೇ ಯೋಗಿ. ಯೋಗಶಬ್ದಕ್ಕೆ ಯಾವ ವಿಧವಾದ ಸಂಕುಚಿತಾರ್ಥ ವಿಲ್ಲ. ಯೋಗವೆಂದರೆ ಚಿತ್ತವೃತ್ತಿನಿರೋಧರೂಪವಾದ ಧ್ಯಾನವಾಗಬಹುದು, ಭಗವಂತನೊಡನೆ ಹೊಂದುವ ಸಾಧರ್ಮ್ಯ ಸಾಯುಜ್ಯಗಳಾಗಬಹುದು. ತನ್ನ ಸ್ವಾರ್ಥವನ್ನು ಬಿಟ್ಟು ಮನುಷ್ಯನು ಉದಾತ್ತಭಾವನೆಯಿಂದ ಯಾವ ಕರ್ಮ ವನ್ನು ಮಾಡಿದರೂ ಅದು ಯೋಗವಾಗುತ್ತೆ. ಈ ದೃಷ್ಟಿಯಿಂದ ಒಂದು

ಪರಿಮಿತವಾದ ಅರ್ಥವಿಲ್ಲ. ಗೀತೆಯಲ್ಲಿ ಕರ್ಮಜ್ಞಾನಭಕ್ತಿಧ್ಯಾನಯೋಗ ಗಳು ಮುಖ್ಯವಾಗಿ ಪ್ರಸ್ತಾಪಿಸಲ್ಪಟ್ಟಿವೆ. ಆದರೆ ಯಾವ ಯೋಗವು ಎಲ್ಲಿಂದ ಪ್ರಾರಂಭವಾಗಿ ಎಲ್ಲಿ ಸಮಾಪ್ತವಾಗುತ್ತದೆ ಎಂದು ನಿರ್ಧರಿಸಲು ಕಷ್ಟವಾ ಗಿರುವಂತೆ ಯಾವ ಯೋಗವು ಇತರ ಯೋಗಗಳಿಗಿಂತ ಮುಖ್ಯವು ಎಂದು ಹೇಳುವುದು ಸಹ ಸುಲಭವಲ್ಲ. ಕೊನೆಕೊನೆಗೆ ಜ್ಞಾನವೇ ಭಕ್ತಿರೂಪಾಪನ್ನ ವಾದ ಧ್ಯಾನವಾಗುತ್ತೆ.

ಗೀತೆಯನ್ನು ಓದುತ್ತಿರುವಾಗ ನಮ್ಮ ಮನಸ್ಸಿಗೆ ಒಂದು ಸಂದೇಹ ವುಂಟಾಗಬಹುದು. ಗೀತೆಯು ಕೇವಲ ನೀತಿಶಾಸ್ತ್ರವೇ ಅಥವಾ ಅಧ್ಯಾತ್ಮ ಶಾಸ್ತ್ರವೆ? ಅರ್ಜುನನಿಗೆ ಧರ್ಮಾಧರ್ಮಗಳ ನ್ಯಾಯಾನ್ಯಾಯಗಳ ವಿವೇಚನೆ ಯಲ್ಲಿ ಸಂದೇಹವುಂಟಾಗಿತ್ತು; ಅದನ್ನು ಪರಿಹರಿಸಲು ಹೊರಟಿರುವ ಈ ಗ್ರಂಥವು ನೀತ್ಯುಪದೇಶಾತ್ಮಕವಾಗಿಯೇ ಇರಬೇಕು; ನೀತಿನಿಯಮದ ವಿಚಾರ ಮಾತನಾಡುವಾಗ ಆಧ್ಯಾತ್ಮಿಕವಿಷಯಗಳ ಚರ್ಚೆ ಪ್ರಾಸಂಗಿಕವಾಗಿ ಬರುತ್ತದೆ; ಹೀಗೆ ಕೆಲವರು ಅಭಿಪ್ರಾಯಪಡಬಹುದು. ಈ ಅಭಿಪ್ರಾಯಕ್ಕೆ ಯಾವ ಆಧಾರವೂ ಕಂಡುಬರುವುದಿಲ್ಲ. ಗೀತೆ ಮೋಕ್ಷೋಪದೇಶವನ್ನು ಪ್ರತಿಪಾದಿಸಲು ಪ್ರವೃತ್ತವಾಗಿದೆಯೆಂದು ನಮ್ಮ ಆಚಾರ್ಯರೆಲ್ಲ ಮುಕ್ತಕಂಠ ದಿಂದ ಘೋಷಿಸಿರುತ್ತಾರೆ. ಗೀತೆಯ ಗುರಿ ಬ್ರಹ್ಮವಿದ್ಯೆ, ನೀತಿವಿದ್ಯೆಯಲ್ಲ. "ನನ್ನಲ್ಲಿಯೇ ಆಸಕ್ತವಾದ ಮನಸ್ಸುಳ್ಳವನಾಗಿ . . . . ನನ್ನನ್ನು ಅಸಂಶಯ ವಾಗಿಯೂ ಸಮಗ್ರವಾಗಿಯೂ ಹೇಗೆ ತಿಳಿದುಕೊಳ್ಳಬಹುದೋ ಅದನ್ನು ಕೇಳು" (೭, ೧) ಎಂದು ಎಷ್ಟೋ ಸಲ ಭಗವಂತನೇ ಸ್ವಯಂ ಸೂಚಿಸಿ ದ್ದಾನೆ. ಅಧ್ಯಾತ್ಮರಹಿತವಾದ ನೀತ್ಯನುಷ್ಠಾನ ಕೃಷ್ಣನಿಗೆ, ಆಚಾರ್ಯರಿಗೆ, ಸನಾತನಸಂಪ್ರದಾಯಕ್ಕೆ ಅನಪೇಕ್ಷಣೀಯವಾದದ್ದು. ಗೀತೆ ಲೋಕ ಸಂಗ್ರಹಕ್ಕೆ ಒಂದು ಉಚ್ಚಸ್ಥಾನವನ್ನು ಕೊಟ್ಟಿದ್ದರೂ ಭಗವದನುಭವವು ಜೀವನದ ಅಂತಿಮಕರ್ತವ್ಯವೆಂದು ಸ್ಪಷ್ಟವಾಗಿ ಸಾರಿದೆ.

ಕೃಷ್ಣನು ಚಾರಿತ್ರಿಕವ್ಯಕ್ತಿಯೆಂದು ಊಹಿಸಲು ಬೇಕಾದಷ್ಟು ಪ್ರಮಾಣ ಗಳುಂಟು. ಛಾಂದೋಗ್ಯೋಪನಿಷತ್ತಿನಲ್ಲಿ (೩, ೧೭, ೧–೭) ಕೃಷ್ಣನು ದೇವಕಿಯ ಪುತ್ರನೆಂದು ಪ್ರಸಿದ್ಧನಾಗಿದ್ದಾನೆ. ಇವನು ಘೋರ ಆಂಗಿರಸ ನೆಂಬ ಋಷಿಯ ಶಿಷ್ಯನು. ಆಂಗಿರಸನು ಕೃಷ್ಣನಿಗೆ ಈ ರೀತಿ ಉಪದೇಶಿಸಿರು ತ್ತಾನೆ: "ತಪಸ್ಸು ದಾನ ಆರ್ಜವ ಅಹಿಂಸೆ ಸತ್ಯವಚನ— ಇವು ಪುರೋಹಿತ

ರಿಗೆ ಕೊಡುವ ದಕ್ಷಿಣೆಗಳು." ಪುನಃ "ಮರಣಕಾಲ ಬಂದಾಗ ಈ ಮೂರು ಭಾವನೆಗಳಲ್ಲಿ ಶರಣುಹೊಂದಬೇಕು: 'ನೀನು ನಾಶವಿಲ್ಲದವನು (ಅಕ್ಷಿತಮಸಿ), ಚ್ಯುತಿಯಿಲ್ಲದವನು (ಅಚ್ಯುತಮಸಿ), ನೀನು ಪ್ರಾಣದ ಸಾರ (ಪ್ರಾಣಸಂಶಿತ-ಮಸಿ)'." ಗೀತೆಯನ್ನು ತುಲನಾತ್ಮಕದೃಷ್ಟಿಯಿಂದ ಸ್ವಲ್ಪ ಓದಿದರೆ ಘೋರ ಆಂಗಿರಸನ ಉಪದೇಶಕ್ಕೂ ಗೀತೆಯ ಉಪದೇಶಕ್ಕೂ ಇರುವ ನಿಕಟ ಸಂಬಂಧವು ವ್ಯಕ್ತವಾಗುವುದು.

ಪಾಣಿನಿಯ ಕಾಲದಲ್ಲಿ (ಕ್ರಿ.ಪೂ. ೭೦೦) ಕೃಷ್ಣಾರ್ಜುನರು ಪೂಜನೀಯರಾದ ವ್ಯಕ್ತಿಗಳಾಗಿದ್ದರು (೪, ೩, ೯೮); ಬೌದ್ಧರ ನಿದ್ದೇಸದಲ್ಲಿ (ಕ್ರಿ.ಪೂ. ೪೦೦) ಕೃಷ್ಣಬಲರಾಮರ ಉಪಾಸಕರು ಉಲ್ಲೇಖಿಸಲ್ಪಟ್ಟಿದ್ದಾರೆ; ಶೂರಸೇನದೇಶದ ಜನರು ಕೃಷ್ಣನನ್ನು ಪೂಜಿಸುತ್ತಿದ್ದರೆಂದು ಮೆಗಾಸ್ತನೀಸನು (ಕ್ರಿ. ಪೂ. ೩೨೦) ಹೇಳಿದ್ದಾನೆ. ಹೀಲಿಯೋಡೋರಸ್ ಎಂಬ ತಕ್ಷಶಿಲೆಯ ಯವನ-ಭಾಗವತನು ವಾಸುದೇವನನ್ನು "ದೇವದೇವನು" ಎಂದು ತನ್ನ ಶಿಲಾಶಾಸನದಲ್ಲಿ (ಕ್ರಿ.ಪೂ. ೧೮೦) ಕರೆದಿದ್ದಾನೆ. ಮಹಾಭಾರತ ಕೃಷ್ಣನನ್ನು ಚಾರಿತ್ರಿಕವ್ಯಕ್ತಿಯೆಂದೂ ಅವತಾರಪುರುಷನೆಂದೂ ಎಣಿಸಿದೆ. ಕುರು-ಪಾಂಡವರು ಯುದ್ಧಮಾಡಲು ಸೇರಿದ್ದಾಗ ಭಗವಂತನು ಗೀತೆಯನ್ನು "ವಿಮನಸ್ಕನಾದ" ಅರ್ಜುನನಿಗೆ ಸ್ವತಃ ಉಪದೇಶಿಸಿದನೆಂದು ಶಾಂತಿಪರ್ವವು ಹೇಳಿದೆ.

ಗೀತೆಯ ಅನೇಕ ಭಾಷಾಂತರಗಳು ಕನ್ನಡದಲ್ಲಿದ್ದರೂ ಹೊಸ ಭಾಷಾಂತರಗಳಿಗೆ ಇನ್ನೂ ಸ್ಥಾನವಿದೆಯೆಂಬ ನಂಬಿಕೆಯಿಂದ ಈ ಪುಸ್ತಕವನ್ನು ಪ್ರಕಟಿಸಲಾಗಿದೆ. ಇದು ಕೇವಲ ಭಾಷಾಂತರವಲ್ಲ. ಮೂಲ ಪ್ರತಿಪದಾರ್ಥ ತಾತ್ಪರ್ಯ ಇವುಗಳೊಡನೆ ಟಿಪ್ಪಣಿಯನ್ನೂ ಸೇರಿಸಿದೆ. ಗೀತೆಯ ರಚನಾಚಾತುರ್ಯವನ್ನು ತಿಳಿದುಕೊಳ್ಳಲು ಪ್ರತಿಪದಾರ್ಥವು ಅನುಕೂಲವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಶ್ಲೋಕಗಳಲ್ಲಿ ಸೂಕ್ಷ್ಮವಾಗಿ ಅಡಗಿರುವ ಭಾವನೆಗಳನ್ನು ಕೇವಲ ತಾತ್ಪರ್ಯದಿಂದಲೇ ಗ್ರಹಿಸುವುದು ಕಷ್ಟ. ಆದುದರಿಂದಲೇ ಟಿಪ್ಪಣಿಯ ಆವಶ್ಯಕತೆ. ಗೀತೆಯ ಹಲವು ಆಧುನಿಕ ವ್ಯಾಖ್ಯಾನಕಾರರು ಈ ರೀತಿ ಅಭಿಪ್ರಾಯಪಟ್ಟಿರುತ್ತಾರೆ: ಪ್ರಾಚೀನ ಭಾಷ್ಯಕಾರರು ಆಗಿನ ದೇಶಕಾಲಸಂದರ್ಭಗಳಿಗೆ ಅನುಸಾರವಾಗಿ ವ್ಯಾಖ್ಯಾನಮಾಡಿರುತ್ತಾರೆ; ಕಾಲಸಂದರ್ಭಗಳು ಬದಲಾಗಿರುವುದರಿಂದ ನಾವೂ ಕೂಡ ನವಯುಗದ ಸಮಸ್ಯೆಗಳಿಗೆ ತಕ್ಕಂತೆ ಗೀತೆಯ ಮೇಲೆ ವ್ಯಾಖ್ಯಾನಮಾಡಬಹುದು. ಈ

ಅಭಿಪ್ರಾಯವು ನಿಜವಾದರೆ ಗೀತೆಗೆ ಯಾವ ಮಹತ್ತ್ವವೂ ಇರುವುದಿಲ್ಲ. ಅಕ್ಷಯವಾದ ನಿತ್ಯವಾದ ಸತ್ಯವು ಎಲ್ಲ ದೇಶಕಾಲಗಳಿಗೂ ಅನ್ವಯಿಸಬೇಕು, ಇಲ್ಲದಿದ್ದರೆ ಅದು ಕಾಲಿಕ ಮತ್ತು ಪ್ರಾದೇಶಿಕ ಸತ್ಯವಾಗುತ್ತದೆ. ಈ ನಿತ್ಯ ಸತ್ಯದ ಅರ್ಥವನ್ನೇ ನಮ್ಮ ಹಿಂದಿನ ಭಾಷ್ಯಕಾರರು ತಮಗೆ ಸಾಂಪ್ರದಾಯಿಕ ವಾಗಿ ಬಂದ ಉಪದೇಶದ ಸಾಮರ್ಥ್ಯದಿಂದ ನಮಗೆ ಅನುಗ್ರಹಿಸಿರುತ್ತಾರೆ. ಈಗಿನ ಕಾಲಕ್ಕೆ ಅನುಗುಣವಾಗಿ ನಾವು ಭಾಷೆಯ ಶಬ್ದರೂಪಗಳನ್ನು ನುಡಿ ಗಟ್ಟನ್ನು ಪದಯೋಜನೆಗಳನ್ನು ಪ್ರಯೋಗಿಸಬಹುದು; ಆದರೆ ಮೂಲತತ್ತ್ವ ಗಳ ಅರ್ಥಾಂತರವನ್ನು ಕಲ್ಪಿಸಲು ಹೊರಟರೆ ಶಾಸ್ತ್ರದ ಅರ್ಥವನ್ನು ತಪ್ಪಾಗಿ ಗ್ರಹಿಸುವ ಪರಿಸ್ಥಿತಿ ಒದಗಬಹುದು. ಆದುದರಿಂದ ಟೀಕೆಯ ಆವಶ್ಯಕತೆ ಒದಗಿದಾಗ ಆಚಾರ್ಯರ ಮಹಾಭಾಷ್ಯಗಳಿಗೆ ಅನುಗುಣವಾಗಿಯೇ ಟಿಪ್ಪ ಣಿಯು ಬರೆಯಲ್ಪಟ್ಟಿದೆ. ತಾತ್ಪರ್ಯಟೀಕೆಗಳಲ್ಲಿ ಶ್ರೀಶಂಕರಾಚಾರ್ಯರ ಭಾಷ್ಯವನ್ನು ಮುಖ್ಯವಾಗಿ ಅನುಸರಿಸಿದ್ದರೂ ಅಲ್ಲಲ್ಲಿ ಶ್ರೀರಾಮಾನುಜಾಚಾ ರ್ಯರ ಭಾಷ್ಯದ ಪ್ರಕಾರ ಅರ್ಥವನ್ನು ಕೊಟ್ಟಿದೆ.

ಈ ಕಾರ್ಯದಲ್ಲಿ ಹಲವು ವಿಧಗಳಲ್ಲಿ ನೆರವಾಗಿದ್ದ ಮಂಗಳೂರು ರಾಮಕೃಷ್ಣ ಮಿಷನ್ ಬಾಲಕಾಶ್ರಮದ ವಿದ್ಯಾರ್ಥಿಯಾದ ಶ್ರೀ। ಈಳಂತೋಡಿ ರಾಮಕೃಷ್ಣ ಭಟ್ಟನಿಗೂ ಮತ್ತು ಈ ಪುಸ್ತಕವನ್ನು ಸೊಗಸಾಗಿ ಮುದ್ರಿಸಿ ಕೊಟ್ಟ ಶಾರದಾ ಛಾಪಖಾನೆಯ ಶ್ರೀ। ಅಚ್ಯುತ ಕಾಮತ್ ಅವರಿಗೂ ನಾನು ಕೃತಜ್ಞನಾಗಿರುತ್ತೇನೆ.

ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ ।

ಶ್ರೀರಾಮಕೃಷ್ಣ ಆಶ್ರಮ
ಮಂಗಳೂರು

ಸ್ವಾಮಿ ಆದಿದೇವಾನಂದ

# ಧ್ಯಾನ

**ಪಾರ್ಥಾಯ ಪ್ರತಿಬೋಧಿತಾಂ ಭಗವತಾ**
**ನಾರಾಯಣೇನ ಸ್ವಯಂ**
**ವ್ಯಾಸೇನ ಗ್ರಥಿತಾಂ ಪುರಾಣಮುನಿನಾ**
**ಮಧ್ಯೇಮಹಾಭಾರತಮ್ ।**
**ಅದ್ವೈತಾಮೃತವರ್ಷಿಣೀಂ ಭಗವತೀಂ**
**ಅಷ್ಟಾದಶಾಧ್ಯಾಯಿನೀಂ**
**ಅಂಬ ತ್ವಾಮನುಸಂದಧಾಮಿ ಭಗವದ್-**
**ಗೀತೇ ಭವದ್ವೇಷಿಣೀಮ್ ॥ ೧ ॥**

೧. ಅಮ್ಮ ಭಗವದ್ಗೀತೆ, ಭಗವಂತನಾದ ಶ್ರೀಮನ್ನಾರಾಯಣನಿಂದ ಪಾರ್ಥನಿಗೆ ಸ್ವತಃ ಉಪದೇಶಿಸಲ್ಪಟ್ಟ, ಪ್ರಾಚೀನಮಹರ್ಷಿಗಳಾದ ವ್ಯಾಸರಿಂದ ಮಹಾಭಾರತಮಧ್ಯದಲ್ಲಿ ಸೇರಿಸಲ್ಪಟ್ಟ, ಅದ್ವೈತಾಮೃತವನ್ನು ವರ್ಷಿಸುತ್ತಿರುವ, ಸಂಸಾರನಾಶಿನಿಯಾದ, ಅಷ್ಟಾದಶಾಧ್ಯಾಯಗಳುಳ್ಳ, ಭಗವತಿಯಾದ ನಿನ್ನನ್ನು ಧ್ಯಾನಿಸುತ್ತೇನೆ.

**ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ**
**ಫುಲ್ಲಾರವಿಂದಾಯತಪತ್ರನೇತ್ರ ।**
**ಯೇನ ತ್ವಯಾ ಭಾರತತೈಲಪೂರ್ಣಃ**
**ಪ್ರಜ್ವಾಲಿತೋ ಜ್ಞಾನಮಯಪ್ರದೀಪಃ ॥ ೨ ॥**

೨. ಅರಳಿದ ಕೆಂದಾವರೆಯ ದಳದಂತೆ ವಿಶಾಲವಾದ ಕಣ್ಣುಗಳುಳ್ಳ ಮಹಾಮತಿಯಾದ ವ್ಯಾಸನೆ, ಭಾರತತೈಲದಿಂದ ತುಂಬಿರುವ ಜ್ಞಾನಮಯವಾದ ಪ್ರದೀಪವನ್ನು ಪ್ರಜ್ವಲಿಸಿದ ನಿನಗೆ ನಮಸ್ಕಾರ.

**ಪ್ರಪನ್ನಪಾರಿಜಾತಾಯ ತೋತ್ರವೇತ್ರೈಕಪಾಣಯೇ ।**
**ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ ॥ ೩ ॥**

೩. ಪ್ರಪನ್ನರಿಗೆ ಕಲ್ಪವೃಕ್ಷದಂತಿರುವ, ಒಂದು ಕೈಯಲ್ಲಿ ವೇತ್ರವನ್ನು ಧರಿಸಿರುವ, ಜ್ಞಾನಮುದ್ರೆಯಿಂದ ಕೂಡಿರುವ, ಗೀತಾಮೃತವನ್ನು ಕರೆಯುತ್ತಿರುವ ಕೃಷ್ಣನಿಗೆ ನಮಸ್ಕಾರ.

**ಸರ್ವೋಪನಿಷದೋ ಗಾವೋ**
**ದೋಗ್ಧಾ ಗೋಪಾಲನಂದನಃ ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ**
**ದುಗ್ಧಂ ಗೀತಾಮೃತಂ ಮಹತ್ ॥ ೪ ॥**

೪. ಎಲ್ಲಾ ಉಪನಿಷತ್ತುಗಳು ಗೋವುಗಳು; ಗೋಪಾಲನಂದನನು ಹಾಲು ಕರೆಯುವವನು; ಪಾರ್ಥನು ಕರು; ಮಹತ್ ಗೀತಾಮೃತವೇ ಹಾಲು; ಜ್ಞಾನಿಗಳು ಅದನ್ನು ಕುಡಿಯುವವರು.

**ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।**
**ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ॥ ೫ ॥**

೫. ವಸುದೇವನ ಸುತನೂ ಕಂಸಚಾಣೂರರನ್ನು ಮರ್ದಿಸಿದವನೂ ದೇವಕಿಗೆ ಪರಮಾನಂದವನ್ನು ಉಂಟುಮಾಡುವವನೂ ಜಗದ್ಗುರುವೂ ದೇವನೂ ಆದ ಕೃಷ್ಣನನ್ನು ನಮಿಸುತ್ತೇನೆ.

**ಭೀಷ್ಮದ್ರೋಣತಟಾ ಜಯದ್ರಥಜಲಾ**
**ಗಾಂಧಾರನೀಲೋಪಲಾ**
**ಶಲ್ಯಗ್ರಾಹವತೀ ಕೃಪೇಣ ವಹನೀ**
**ಕರ್ಣೇನ ವೇಲಾಕುಲಾ ।**
**ಅಶ್ವತ್ಥಾಮವಿಕರ್ಣಘೋರಮಕರಾ**
**ದುರ್ಯೋಧನಾವರ್ತಿನೀ**
**ಸೋತ್ತೀರ್ಣಾ ಖಲು ಪಾಂಡವೈ ರಣನದೀ**
**ಕೈವರ್ತಕಃ ಕೇಶವಃ ॥ ೬ ॥**

೬. ಭೀಷ್ಮದ್ರೋಣರು ದಡಗಳಾಗಿಯೂ, ಜಯದ್ರಥನು ಜಲವಾಗಿಯೂ, ಗಾಂಧಾರರಾಜನು ಕರಿಯ ಬಂಡೆಯಾಗಿಯೂ, ಶಲ್ಯನು ಮೊಸಳೆಯಾಗಿಯೂ, ಕೃಪನು ಪ್ರವಾಹವಾಗಿಯೂ, ಕರ್ಣನು ಕ್ಷೋಭೆಗೊಂಡ ಅಲೆಯಾಗಿಯೂ, ಅಶ್ವತ್ಥಾಮವಿಕರ್ಣರು ಘೋರಮಕರಗಳಾಗಿಯೂ, ದುರ್ಯೋಧನನು ಸುಳಿಯಾಗಿಯೂ ಉಳ್ಳ ರಣನದಿಯು ಪಾಂಡವರಿಂದ ದಾಟಲ್ಪಟ್ಟಿತು. ಇದನ್ನು ದಾಟಲು ಶ್ರೀಕೃಷ್ಣನೇ ಅಂಬಿಗನಾಗಿದ್ದನು.

**ಪಾರಾಶರ್ಯವಚಃಸರೋಜಮಮಲಂ**
**ಗೀತಾರ್ಥಗಂಧೋತ್ಕಟಂ**
**ನಾನಾಖ್ಯಾನಕಕೇಸರಂ ಹರಿಕಥಾ-**
**ಸಂಬೋಧನಾಬೋಧಿತಮ್ ।**
**ಲೋಕೇ ಸಜ್ಜನಷಟ್ಪದೈರಹರಹಃ**
**ಪೇಪೀಯಮಾನಂ ಮುದಾ**
**ಭೂಯಾದ್ಭಾರತಪಂಕಜಂ ಕಲಿಮಲ-**
**ಪ್ರಧ್ವಂಸಿ ನಃ ಶ್ರೇಯಸೇ ॥ ೭ ॥**

೭. ಪರಾಶರಪುತ್ರರಾದ ವ್ಯಾಸರ ವಚನವೆಂಬ ಸರೋವರದಲ್ಲಿ ಹುಟ್ಟಿದ, ನಾನಾಬಗೆಯ ಆಖ್ಯಾನಗಳೆಂಬ ಕೇಸರಗಳಿಂದ ಕೂಡಿದ, ಹರಿಕಥೆ ಯೆಂಬ ಬೋಧನೆಯಿಂದ ವಿಕಸಿತವಾದ, ಸಜ್ಜನರೆಂಬ ಭ್ರಮರಗಳಿಂದ ಪ್ರತಿ ದಿನವೂ ಸಂತೋಷದಿಂದ ಸೇವಿಸಲ್ಪಡುತ್ತಿರುವ, ಕಲಿಕಲ್ಮಷವನ್ನು ನಾಶ ಮಾಡುವ, ಗೀತಾರ್ಥವೆಂಬ ಉತ್ಕಟಪರಿಮಳದಿಂದ ಕೂಡಿರುವ, ನಿರ್ಮಲ ವಾದ ಮಹಾಭಾರತವೆಂಬ ಪಂಕಜವು ನಮಗೆ ಶ್ರೇಯಸ್ಸನ್ನುಂಟುಮಾಡಲಿ.

**ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್ ।**
**ಯತ್ಕೃಪಾ ತಮಹಂ ವಂದೇ ಪರಮಾನಂದಮಾಧವಮ್ ॥ ೮ ॥**

೮. ಯಾರ ಕೃಪೆಯು ಮೂಕನನ್ನು ವಾಚಾಳಿಯನ್ನಾಗಿ ಮಾಡು ವುದೋ, ಕುಂಟನು ಪರ್ವತವನ್ನು ಲಂಘಿಸುವಂತೆ ಮಾಡುವುದೋ ಅಂತಹ ಪರಮಾನಂದಸ್ವರೂಪನಾದ ಮಾಧವನನ್ನು ವಂದಿಸುತ್ತೇನೆ.

**ಯಂ ಬ್ರಹ್ಮಾವರುಣೇಂದ್ರರುದ್ರಮರುತಃ**
**ಸ್ತುನ್ವಂತಿ ದಿವ್ಯೈಃ ಸ್ತವೈ-**
**ರ್ವೇದೈಃ ಸಾಂಗಪದಕ್ರಮೋಪನಿಷದೈ-**
**ರ್ಗಾಯಂತಿ ಯಂ ಸಾಮಗಾಃ ।**
**ಧ್ಯಾನಾವಸ್ಥಿತತದ್ಗತೇನ ಮನಸಾ**
**ಪಶ್ಯಂತಿ ಯಂ ಯೋಗಿನೋ**
**ಯಸ್ಯಾಂತಂ ನ ವಿದುಃ ಸುರಾಸುರಗಣಾ**
**ದೇವಾಯ ತಸ್ಮೈ ನಮಃ ॥ ೯ ॥**

೯. ಯಾವನನ್ನು ಬ್ರಹ್ಮ ವರುಣ ಇಂದ್ರ ರುದ್ರ ಮರುದ್ಗಣಗಳು ದಿವ್ಯಸ್ತವಗಳಿಂದ ಸ್ತುತಿಸುತ್ತಾರೆಯೋ, ಯಾವನನ್ನು ಸಾಮಗರು ಅಂಗ ಪದಕ್ರಮ ಉಪನಿಷತ್ತು ಇವುಗಳಿಂದ ಕೂಡಿದ ವೇದಗಳಿಂದ ಗಾನಮಾಡು ತ್ತಾರೆಯೋ, ಯಾವನನ್ನು ಯೋಗಿಗಳು ಧ್ಯಾನದಲ್ಲಿ ತಲ್ಲೀನವಾದ ಮನಸ್ಸಿನಿಂದ ನೋಡುತ್ತಾರೆಯೋ, ಯಾವನ ಅಂತವನ್ನು ಸುರಾಸುರಗಣಗಳು ತಿಳಿಯಲಾರವೋ ಅಂತಹ ದೇವನಿಗೆ ನಮಸ್ಕಾರ.

# ಶ್ರೀಮದ್ಭಗವದ್ಗೀತಾ

## ಮೊದಲನೆಯ ಅಧ್ಯಾಯ

### ಅರ್ಜುನನ ವಿಷಾದ

ಧೃತರಾಷ್ಟ್ರ ಉವಾಚ

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ . ॥ ೧ ॥**

ಧೃತರಾಷ್ಟ್ರಃ (ಧೃತರಾಷ್ಟ್ರನು) ಉವಾಚ (ಹೇಳಿದನು)— ಸಂಜಯ (ಎಲೈ ಸಂಜಯನೆ) ಧರ್ಮಕ್ಷೇತ್ರೇ (ಧರ್ಮಕ್ಷೇತ್ರವಾದ) ಕುರುಕ್ಷೇತ್ರೇ (ಕುರುಕ್ಷೇತ್ರ ದಲ್ಲಿ) ಯುಯುತ್ಸವಃ (ಯುದ್ಧಮಾಡಬೇಕೆಂದು) ಸಮವೇತಾಃ (ಸೇರಿರುವ) ಮಾಮಕಾಃ (ನಮ್ಮವರೂ) ಚ (ಮತ್ತು) ಪಾಂಡವಾಃ (ಪಾಂಡವರೂ) ಕಿಂ ಏವ (ಏನನ್ನು) ಅಕುರ್ವತ (ಮಾಡಿದರು).

ಧೃತರಾಷ್ಟ್ರನು ಹೇಳಿದನು

೧. ಎಲೈ ಸಂಜಯ, ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧ ಮಾಡಬೇಕೆಂದು ಸೇರಿರುವ ನಮ್ಮವರೂ ಮತ್ತು ಪಾಂಡವರೂ ಏನನ್ನು ಮಾಡಿದರು?

ಸಂಜಯ ಉವಾಚ

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ ೨ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)—ತದಾ ತು (ಆ ಸಮಯ ದಲ್ಲಿ) ರಾಜಾ ದುರ್ಯೋಧನಃ (ರಾಜನಾದ ದುರ್ಯೋಧನನು) ವ್ಯೂಢಂ (ವ್ಯೂಹಾ ಕಾರವಾಗಿ ರಚಿಸಲ್ಪಟ್ಟ) ಪಾಂಡವಾನೀಕಂ (ಪಾಂಡವರ ಸೈನ್ಯವನ್ನು) ದೃಷ್ಟ್ವಾ (ನೋಡಿ) ಆಚಾರ್ಯಂ ಉಪಸಂಗಮ್ಯ (ದ್ರೋಣಾಚಾರ್ಯರ ಸಮೀಪಕ್ಕೆ ಬಂದು) ವಚನಂ ([ಈ] ಮಾತನ್ನು) ಅಬ್ರವೀತ್ (ಹೇಳಿದನು).

ಸಂಜಯನು ಹೇಳಿದನು

೨. ಆ ಸಮಯದಲ್ಲಿ ರಾಜನಾದ ದುರ್ಯೋಧನನು ವ್ಯೂಹಾಕಾರವಾಗಿ ರಚಿಸಲ್ಪಟ್ಟ ಪಾಂಡವರ ಸೈನ್ಯವನ್ನು ನೋಡಿ ದ್ರೋಣಾಚಾರ್ಯರ ಸಮೀಪಕ್ಕೆ ಬಂದು (ಈ) ಮಾತನ್ನು ಹೇಳಿದನು.

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**

ಆಚಾರ್ಯ (ಎಲೈ ಆಚಾರ್ಯನೆ) ಧೀಮತಾ (ಬುದ್ಧಿವಂತನಾದ) ತವ (ನಿನ್ನ) ಶಿಷ್ಯೇಣ (ಶಿಷ್ಯ) ದ್ರುಪದಪುತ್ರೇಣ (ದ್ರುಪದಪುತ್ರನಾದ ಧೃಷ್ಟದ್ಯುಮ್ನನಿಂದ) ವ್ಯೂಢಾಂ (ವ್ಯೂಹಾಕಾರವಾಗಿ ರಚಿಸಲ್ಪಟ್ಟ) ಪಾಂಡುಪುತ್ರಾಣಾಂ (ಪಾಂಡುಪುತ್ರರ) ಏತಾಂ (ಈ) ಮಹತೀಂ (ದೊಡ್ಡ) ಚಮೂಂ (ಸೇನೆಯನ್ನು) ಪಶ್ಯ (ನೋಡು).

೩. ಎಲೈ ಆಚಾರ್ಯನೆ, ನಿನ್ನ ಶಿಷ್ಯನೂ ಬುದ್ಧಿವಂತನೂ ದ್ರುಪದಪುತ್ರನೂ ಆದ ಧೃಷ್ಟದ್ಯುಮ್ನನಿಂದ ವ್ಯೂಹಾಕಾರವಾಗಿ ರಚಿಸಲ್ಪಟ್ಟ ಪಾಂಡುಪುತ್ರರ ಈ ದೊಡ್ಡ ಸೇನೆಯನ್ನು ನೋಡು.

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**

**ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।**
**ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥**

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥**

ಅತ್ರ (ಇಲ್ಲಿ) ಮಹೇಷ್ವಾಸಾಃ (ದೊಡ್ಡ ಬಿಲ್ಲುಗಾರರೂ) ಯುಧಿ (ಯುದ್ಧದಲ್ಲಿ) ಭೀಮಾರ್ಜುನಸಮಾಃ (ಭೀಮ ಮತ್ತು ಅರ್ಜುನರಿಗೆ ಸಮಾನರೂ) ಶೂರಾಃ (ಶೂರರೂ ಆದ) ಯುಯುಧಾನಃ (ಯುಯುಧಾನ) ವಿರಾಟಃ ಚ (ಮತ್ತು ವಿರಾಟ) ಮಹಾರಥಃ ದ್ರುಪದಃ ಚ (ಮತ್ತು ಮಹಾರಥನಾದ ದ್ರುಪದನೂ) [ಸಂತಿ] (ಇದ್ದಾರೆ.) ಧೃಷ್ಟಕೇತುಃ (ಧೃಷ್ಟಕೇತು) ಚೇಕಿತಾನಃ (ಚೇಕಿತಾನ) ಚ (ಮತ್ತು) ವೀರ್ಯವಾನ್ (ವೀರ್ಯವಂತನಾದ) ಕಾಶೀರಾಜಃ (ಕಾಶೀರಾಜ) ಪುರುಜಿತ್ (ಪುರುಜಿತ್ತು) ಕುಂತಿಭೋಜಃ ಚ (ಮತ್ತು ಕುಂತಿಭೋಜ) ನರಪುಂಗವಃ ಶೈಬ್ಯಃ ಚ (ಮತ್ತು ನರಶ್ರೇಷ್ಠನಾದ ಶೈಬ್ಯ); ವಿಕ್ರಾಂತಃ ಯುಧಾಮನ್ಯುಃ ಚ (ಮತ್ತು ಪರಾಕ್ರಮಶಾಲಿಯಾದ ಯುಧಾಮನ್ಯು) ವೀರ್ಯವಾನ್ ಉತ್ತಮೌಜಾಃ ಚ (ಮತ್ತು ವೀರ್ಯವಂತ

ನಾದ ಉತ್ತಮೌಜಸ್ಸು) ಸೌಭದ್ರಃ (ಸುಭದ್ರೆಯ ಮಗ) ದ್ರೌಪದೇಯಾಃ ಚ (ಮತ್ತು ದ್ರೌಪದಿಯ ಮಕ್ಕಳು) ಸರ್ವೇ ಏವ (ಇವರೆಲ್ಲರೂ) ಮಹಾರಥಾಃ (ಮಹಾರಥರು).

೪—೬. ಈ ಪಾಂಡವಸೇನೆಯ ಮಧ್ಯದಲ್ಲಿ ದೊಡ್ಡ ಬಿಲ್ಲುಗಾರರೂ, ಭೀಮ ಮತ್ತು ಅರ್ಜುನರಿಗೆ ಸಮಾನರೂ, ಶೂರರೂ ಆದ ಯುಯುಧಾನ,[1] ವಿರಾಟರಾಜ, ಮಹಾರಥನಾದ[2] ದ್ರುಪದ, ಧೃಷ್ಟಕೇತು,[3] ಚೇಕಿತಾನ,[4] ವೀರ್ಯವಂತನಾದ ಕಾಶೀರಾಜ, ಪುರುಜಿತ್ತು, ಕುಂತಿಭೋಜ,[5] ನರಶ್ರೇಷ್ಠನಾದ ಶೈಬ್ಯ, ಪರಾಕ್ರಮಶಾಲಿಯಾದ ಯುಧಾಮನ್ಯು, ವೀರ್ಯವಂತನಾದ ಉತ್ತಮೌಜಸ್ಸು ಮತ್ತು ಸುಭದ್ರೆಯ ಮಗನೂ,[6] ದ್ರೌಪದಿಯ ಮಕ್ಕಳೂ[7] ಇರುವರು. ಇವರೆಲ್ಲರೂ ಮಹಾರಥರೇ.

1 ಯದುವಂಶದ ಸಾತ್ಯಕಿ.

2 ಯಾವನು ಹತ್ತುಸಾವಿರ ಬಿಲ್ಲುಗಾರರೊಂದಿಗೆ ಒಬ್ಬನೇ ಯುದ್ಧಮಾಡಲು ಸಮರ್ಥನಾಗಿ ಅಸ್ತ್ರಶಸ್ತ್ರಗಳಲ್ಲಿ ಪ್ರವೀಣನಾಗಿರುತ್ತಾನೋ ಅವನಿಗೆ ಮಹಾರಥನೆಂದುಹೆಸರು.

3 ಶಿಶುಪಾಲನ ಮಗ.

4 ಯದುವಂಶದ ವೀರ.

5 ಕುಂತಿಯ ಸಾಕುತಂದೆ.

6 ಅಭಿಮನ್ಯು.

7 ಪ್ರತಿವಿಂಧ್ಯ, ಸುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತವರ್ಮ.

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥ ೭ ॥**

ದ್ವಿಜೋತ್ತಮ (ಎಲೈ ಬ್ರಾಹ್ಮಣನೆ) ಅಸ್ಮಾಕಂ ತು (ನಮ್ಮ ಪಕ್ಷದಲ್ಲಿಯೂ) ಯೇ (ಯಾರು) ವಿಶಿಷ್ಟಾಃ (ಪ್ರಧಾನರೋ) ಮಮ (ನನ್ನ) ಸೈನ್ಯಸ್ಯ (ಸೇನೆಯ) ನಾಯಕಾಃ (ನಾಯಕರೋ) ತಾನ್ (ಅವರನ್ನು) ನಿಬೋಧ (ತಿಳಿದುಕೊ) ತೇ (ನಿನ್ನ) ಸಂಜ್ಞಾರ್ಥಂ (ಜ್ಞಾಪಕಕ್ಕೋಸ್ಕರ) ತಾನ್ (ಅವರ ಹೆಸರುಗಳನ್ನು) ಬ್ರವೀಮಿ (ಹೇಳುತ್ತೇನೆ).

೭. ಎಲೈ ಬ್ರಾಹ್ಮಣನೆ, ನಮ್ಮ ಪಕ್ಷದಲ್ಲಿಯೂ ಯಾರು ಪ್ರಧಾನರೋ ಮತ್ತು ಸೇನಾಪತಿಗಳೋ, ಅವರನ್ನು ತಿಳಿದುಕೊ. ನಿನ್ನ ಜ್ಞಾಪಕಕ್ಕೋಸ್ಕರ ಅವರ ಹೆಸರುಗಳನ್ನು ಹೇಳುತ್ತೇನೆ.

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿರ್ಜಯದ್ರಥಃ ॥ ೮ ॥**

ಭವಾನ್ (ನೀನು) ಭೀಷ್ಮಃ ಚ (ಮತ್ತು ಭೀಷ್ಮನು) ಕರ್ಣಃ (ಕರ್ಣನು) ಸಮಿತಿಂಜಯಃ (ಸಮರಜಯಿಯಾದ) ಕೃಪಃ (ಕೃಪನು) ಅಶ್ವತ್ಥಾಮಾ ಚ (ಮತ್ತು ಅಶ್ವತ್ಥಾಮನು) ವಿಕರ್ಣಃ ಚ (ಮತ್ತು ವಿಕರ್ಣನು) ಸೌಮದತ್ತಿಃ (ಸೋಮದತ್ತನ ಮಗನು) ಜಯದ್ರಥಃ ಚ (ಮತ್ತು ಜಯದ್ರಥನು).

೮. ನೀನು, ಭೀಷ್ಮ, ಸಮರಜಯಿಯಾದ ಕೃಪ, ಅಶ್ವತ್ಥಾಮ, ವಿಕರ್ಣ,[1] ಸೋಮದತ್ತನ ಮಗನಾದ ಭೂರಿಶ್ರವಸ್ಸು ಮತ್ತು ಜಯದ್ರಥ.

[1] ದುರ್ಯೋಧನನ ತಮ್ಮ.

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥ ೯ ॥**

ಅನ್ಯೇ ಚ (ಮತ್ತು ಇನ್ನೂ) ಬಹವಃ (ಅನೇಕ) ಶೂರಾಃ (ಶೂರರು) ಮದರ್ಥೇ (ನನಗೋಸ್ಕರ) ತ್ಯಕ್ತಜೀವಿತಾಃ (ಪ್ರಾಣತ್ಯಾಗಮಾಡಲು ಕೃತಸಂಕಲ್ಪರು) ಸರ್ವೇ (ಇವರೆಲ್ಲರೂ) ನಾನಾಶಸ್ತ್ರಪ್ರಹರಣಾಃ (ನಾನಾವಿಧವಾದ ಶಸ್ತ್ರಪ್ರಹಾರಗಳಲ್ಲಿ ದಕ್ಷರು) ಯುದ್ಧವಿಶಾರದಾಃ (ಯುದ್ಧದಲ್ಲಿ ನಿಪುಣರು).

೯. ಮತ್ತು ನನಗೋಸ್ಕರ ಪ್ರಾಣತ್ಯಾಗಮಾಡಲು ಕೃತಸಂಕಲ್ಪರಾದ ಇನ್ನೂ ಅನೇಕ ಶೂರರು ಇದ್ದಾರೆ. ಇವರೆಲ್ಲರೂ ನಾನಾ ವಿಧವಾದ ಶಸ್ತ್ರ ಪ್ರಹಾರಗಳಲ್ಲಿ ದಕ್ಷರು ಮತ್ತು ಯುದ್ಧದಲ್ಲಿ ನಿಪುಣರು.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥ ೧೦ ॥**

ಭೀಷ್ಮಾಭಿರಕ್ಷಿತಂ (ಭೀಷ್ಮನಿಂದ ರಕ್ಷಿತವಾದ) ಅಸ್ಮಾಕಂ (ನಮ್ಮ) ತತ್ (ಆ) ಬಲಂ (ಸೇನೆಯು) ಅಪರ್ಯಾಪ್ತಂ (ಪರಿಮಿತವು, ಅಸಮರ್ಥವು) ತು (ಆದರೆ) ಭೀಮಾಭಿರಕ್ಷಿತಂ (ಭೀಮನಿಂದ ರಕ್ಷಿತವಾದ) ಏತೇಷಾಂ (ಇವರ, ಪಾಂಡವರ) ಇದಂ (ಈ) ಬಲಂ (ಸೇನೆಯು) ಪರ್ಯಾಪ್ತಂ (ಅಪರಿಮಿತವು, ಸಮರ್ಥವು).

೧೦. ಭೀಷ್ಮನಿಂದ ರಕ್ಷಿತವಾದ ಆ ನಮ್ಮ ಸೇನೆಯು ಅಸಮರ್ಥವಾದುದು.[1] ಆದರೆ ಭೀಮನಿಂದ ರಕ್ಷಿತವಾದ ಪಾಂಡವರ ಈ ಸೇನೆಯಾದರೋ ಅಪರಿಮಿತವಾಗಿರುವುದು.

[1] ಅಪರ್ಯಾಪ್ತಂ, ಪರ್ಯಾಪ್ತಂ ಎಂಬ ಶಬ್ದಗಳಿಗೆ ಮೇಲೆ ಕೊಟ್ಟಿರುವ ಅರ್ಥವು ಶ್ರೀರಾಮಾನುಜಾಚಾರ್ಯರ ಭಾಷ್ಯದ ಪ್ರಕಾರ. ಭೀಮರಕ್ಷಿತವಾದ

ಸೇನೆಯನ್ನು ನೋಡಿ ದುರ್ಯೋಧನನು ಅಧೈರ್ಯಪಟ್ಟಹಾಗೆ ಕಾಣುತ್ತೆ. ಹಾಗಿಲ್ಲ ದಿದ್ದರೆ, 'ನೀವೆಲ್ಲರೂ ಭೀಷ್ಮನನ್ನೇ ರಕ್ಷಿಸಬೇಕು' ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಿರಲಿಲ್ಲ. ದುರ್ಯೋಧನನ ವಿಷಾದವನ್ನು ನೋಡಿ ಭೀಷ್ಮನು ಅವನಿಗೆ ಉತ್ಸಾಹವನ್ನು ಉಂಟುಮಾಡಲು ಸಿಂಹನಾದ ಶಂಖನಾದಗಳನ್ನು ಮಾಡಿದನೆಂದು ೧೨ನೇ ಶ್ಲೋಕದಲ್ಲಿ ತಿಳಿಯುತ್ತದೆ. ಶ್ರೀರಾಮಾನುಜರು ಈ ಪ್ರಕಾರ ೧೦ನೇ ಶ್ಲೋಕದ ಮೇಲೆ ವ್ಯಾಖ್ಯಾನಮಾಡಿದ್ದಾರೆ: "ದುರ್ಯೋಧನಃ ಸ್ವಯಮೇವ ಭೀಮಾಭಿರಕ್ಷಿತಂ ಪಾಂಡವಾನಾಂ ಬಲಂ, ಆತ್ಮೀಯಂ ಚ ಭೀಷ್ಮಾಭಿರಕ್ಷಿತಂ ಬಲಮವಲೋಕ್ಯ, ಆತ್ಮ-ವಿಜಯೇ ತಸ್ಯ ಬಲಸ್ಯ ಪರ್ಯಾಪ್ತತಾಂ, ಆತ್ಮೀಯಸ್ಯ ಬಲಸ್ಯ ತದ್ವಿಜಯೇ ಚ ಅಪರ್ಯಾಪ್ತತಾಂ ಆಚಾರ್ಯಾಯ ನಿವೇದ್ಯ ಅಂತರ್ವಿಷಣ್ಣೋಽಭವತ್."

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ ೧೧ ॥**

ಸರ್ವೇಷು (ಸಮುಸ್ತ) ಅಯನೇಷು (ವ್ಯೂಹದ್ವಾರಗಳಲ್ಲಿ) ಯಥಾಭಾಗಂ(ನಿಮ್ಮ ನಿಮ್ಮ ಭಾಗಗಳಲ್ಲಿ) ಅವಸ್ಥಿತಾಃ (ಅವಸ್ಥಿತರಾಗಿ, ಇದ್ದುಕೊಂಡು) ಭವಂತಃ (ನೀವು) ಸರ್ವ ಏವ ಹಿ (ಎಲ್ಲರೂ) ಭೀಷ್ಮಂ ಏವ (ಭೀಷ್ಮನನ್ನೇ) ಅಭಿರಕ್ಷಂತು (ರಕ್ಷಿಸಬೇಕು).

೧೧. ನೀವೆಲ್ಲರೂ ಸೇನೆಯ ಸಮಸ್ತ ವ್ಯೂಹದ್ವಾರಗಳಲ್ಲಿ ನಿಮ್ಮ ನಿಮ್ಮ ಭಾಗಗಳಲ್ಲಿ ಇದ್ದುಕೊಂಡು ಭೀಷ್ಮನನ್ನೇ ರಕ್ಷಿಸಬೇಕು.

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥ ೧೨ ॥**

ಪ್ರತಾಪವಾನ್ (ಪ್ರತಾಪಶಾಲಿಯೂ) ಕುರುವೃದ್ಧಃ (ಕುರುಕುಲಕ್ಕೆ ಹಿರಿಯನೂ) ಪಿತಾಮಹಃ (ಭೀಷ್ಮನು) ತಸ್ಯ (ಅವನಿಗೆ, ದುರ್ಯೋಧನನಿಗೆ) ಹರ್ಷಂ (ಉತ್ಸಾಹವನ್ನು) ಸಂಜನಯನ್ (ಹುಟ್ಟಿಸಲು) ಉಚ್ಚೈಃ (ಉಚ್ಚಸ್ವರದಿಂದ) ಸಿಂಹನಾದಂ (ಸಿಂಹನಾದವನ್ನು) ವಿನದ್ಯ (ಮಾಡಿ) ಶಂಖಂ (ಶಂಖವನ್ನು) ದಧ್ಮೌ (ಊದಿದನು).

೧೨. ಕುರುಕುಲಕ್ಕೆ ಹಿರಿಯನೂ ಪ್ರತಾಪಶಾಲಿಯೂ ಆದ ಭೀಷ್ಮ ಪಿತಾಮಹನು ದುರ್ಯೋಧನನಿಗೆ ಉತ್ಸಾಹವನ್ನು ಉಂಟುಮಾಡಲು ಉಚ್ಚ ಸ್ವರದಿಂದ ಸಿಂಹನಾದವನ್ನು ಮಾಡಿ ಶಂಖವನ್ನು ಊದಿದನು.

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ ೧೩ ॥**

ತತಃ (ಅನಂತರ) ಶಂಖಾಃ (ಶಂಖಗಳೂ) ಭೇರ್ಯಃ ಚ (ಮತ್ತು ಭೇರಿಗಳೂ) ಪಣವ–ಆನಕ–ಗೋಮುಖಾಃ (ಡೋಲು, ಮೃದಂಗ ಮತ್ತು ಗೋಮುಖಾದಿಗಳೂ) ಸಹಸಾ ಏವ (ಒಂದೇ ಸಲ) ಅಭ್ಯಹನ್ಯಂತ (ಮೊಳಗಿದುವು) ಸಃ (ಆ) ಶಬ್ದಃ (ರಣ ಶಬ್ದವು) ತುಮುಲಃ (ಭೀಷಣ, ಭಯಂಕರ) ಅಭವತ್ (ಆಗಿತ್ತು).

೧೩. ಅನಂತರ ಶಂಖಗಳೂ, ಭೇರಿಗಳೂ ಮತ್ತು ಡೋಲು ಮೃದಂಗ ಗೋಮುಖ ಮುಂತಾದ ವಾದ್ಯಗಳೂ ಒಂದೇಸಲ ಮೊಳಗಿದುವು. ಆ ರಣ ಶಬ್ದವು ಭೀಷಣವಾಗಿತ್ತು.

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥**

ತತಃ (ಅನಂತರ) ಶ್ವೇತೈಃ (ಬಿಳಿಯ) ಹಯೈಃ (ಕುದುರೆಗಳಿಂದ) ಯುಕ್ತೇ (ಕಟ್ಟಿರುವ) ಮಹತಿ ಸ್ಯಂದನೇ (ಮಹಾರಥದಲ್ಲಿ) ಸ್ಥಿತೌ (ಅವಸ್ಥಿತರಾದ) ಮಾಧವಃ (ಶ್ರೀಕೃಷ್ಣನೂ) ಪಾಂಡವಃ ಏವ ಚ (ಮತ್ತು ಅರ್ಜುನನೂ) ದಿವ್ಯೌ (ಅಲೌಕಿಕ ವಾದ) ಶಂಖೌ (ಶಂಖಗಳನ್ನು) ಪ್ರದಧ್ಮತುಃ (ಊದಿದರು).

೧೪. ಅನಂತರ ಬಿಳಿಯ ಕುದುರೆಗಳಿಂದ ಕಟ್ಟಿರುವ ಮಹಾರಥದಲ್ಲಿ ಅವಸ್ಥಿತರಾದ ಶ್ರೀಕೃಷ್ಣಾರ್ಜುನರು ತಮ್ಮ ಅಲೌಕಿಕವಾದ ಶಂಖಗಳನ್ನು ಊದಿದರು.

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥ ೧೫ ॥**

ಹೃಷೀಕೇಶಃ (ಶ್ರೀಕೃಷ್ಣನು) ಪಾಂಚಜನ್ಯಂ (ಪಾಂಚಜನ್ಯವನ್ನೂ) ಧನಂಜಯಃ (ಅರ್ಜುನನು) ದೇವದತ್ತಂ (ದೇವದತ್ತವನ್ನೂ) ಭೀಮಕರ್ಮಾ (ಭಯಂಕರ ಕರ್ಮ ವನ್ನು ಮಾಡಬಲ್ಲ) ವೃಕೋದರಃ (ಭೀಮನು) ಮಹಾಶಂಖಂ ಪೌಂಡ್ರಂ (ಪೌಂಡ್ರ ವೆಂಬ ಮಹಾಶಂಖವನ್ನೂ) ದಧ್ಮೌ (ಊದಿದರು).

೧೫. ಹೃಷೀಕೇಶನು[1] ಪಾಂಚಜನ್ಯವನ್ನೂ, ಅರ್ಜುನನು ದೇವದತ್ತ ವನ್ನೂ, ಭಯಂಕರಕರ್ಮವನ್ನು ಮಾಡಬಲ್ಲ ಭೀಮನು ಪೌಂಡ್ರವೆಂಬ ಮಹಾಶಂಖವನ್ನೂ ಊದಿದರು.

[1] ಹೃಷೀಕ (ಇಂದ್ರಿಯ) + ಈಶ (ಒಡೆಯ); ಇಂದ್ರಿಯಗಳ ಪ್ರೇರಕನಾದ ಅಥವಾ ನಿಯಾಮಕನಾದ ಪರಮಾತ್ಮನು ಎಂದರ್ಥ.

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬ ॥**

ಕುಂತೀಪುತ್ರಃ (ಕುಂತೀಪುತ್ರನಾದ) ರಾಜಾ ಯುಧಿಷ್ಠಿರಃ (ಯುಧಿಷ್ಠಿರ ರಾಜನು) ಅನಂತವಿಜಯಂ (ಅನಂತವಿಜಯುವನ್ನೂ) ನಕುಲಃ ಸಹದೇವಃ ಚ (ನಕುಲ ಮತ್ತು ಸಹದೇವರು) ಸುಘೋಷಮಣಿಪುಷ್ಪಕೌ (ಸುಘೋಷ-ಮಣಿ ಪುಷ್ಪಕಗಳನ್ನೂ) [ಊದಿದರು].

೧೬. ಕುಂತೀಪುತ್ರನಾದ ಯುಧಿಷ್ಠಿರರಾಜನು ಅನಂತವಿಜಯವೆಂಬ ಶಂಖವನ್ನೂ, ನಕುಲನು ಮತ್ತು ಸಹದೇವನು ಸುಘೋಷ-ಮಣಿಪುಷ್ಪಕ ಗಳೆಂಬ ಶಂಖಗಳನ್ನೂ ಊದಿದರು.

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭ ॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥ ೧೮ ॥**

ಪೃಥಿವೀಪತೇ (ಎಲೈ ಪೃಥಿವೀಪತಿಯೆ) ಪರಮೇಷ್ವಾಸಃ (ದೊಡ್ಡ ಬಿಲ್ಲುಗಾ ರನಾದ) ಕಾಶ್ಯಃ ಚ (ಕಾಶೀರಾಜನು) ಮಹಾರಥಃ ಶಿಖಂಡೀ ಚ ಧೃಷ್ಟದ್ಯುಮ್ನಃ (ಮಹಾರಥನಾದ ಶಿಖಂಡಿಯೂ ಮತ್ತು ಧೃಷ್ಟದ್ಯುಮ್ನನು) ವಿರಾಟಃ ಚ (ವಿರಾಟನು) ಅಪರಾಜಿತಃ (ಅಜಿತನಾದ) ಸಾತ್ಯಕಿಃ ಚ (ಸಾತ್ಯಕಿಯೂ) ದ್ರುಪದಃ (ದ್ರುಪದ ರಾಜನು) ದ್ರೌಪದೇಯಾಃ ಚ (ದ್ರೌಪದಿಯ ಪಂಚಪುತ್ರರು) ಮಹಾಬಾಹುಃ ಚ ಸೌಭದ್ರಃ (ಮಹಾಶೂರನಾದ ಅಭಿಮನ್ಯುವು) ಸರ್ವಶಃ (ಇವರೆಲ್ಲರೂ) ಪೃಥಕ್ ಪೃಥಕ್ (ಬೇರೆಬೇರೆಯಾಗಿ) ಶಂಖಾನ್ (ಶಂಖಗಳನ್ನು) ದಧ್ಮುಃ (ಊದಿದರು).

೧೭-೧೮. ಎಲೈ ಪೃಥಿವೀಪತಿಯೆ, ದೊಡ್ಡಬಿಲ್ಲುಗಾರನಾದ ಕಾಶೀ ರಾಜ, ಮಹಾರಥನಾದ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟ, ಅಜಿತನಾದ ಸಾತ್ಯಕಿ, ದ್ರುಪದರಾಜ, ದ್ರೌಪದಿಯ ಪಂಚಪುತ್ರರಾದ ಪ್ರತಿವಿಂಧ್ಯ ಮೊದಲಾ ದವರು, ಮಹಾಶೂರನಾದ ಅಭಿಮನ್ಯು — ಇವರೆಲ್ಲರೂ ಬೇರೆಬೇರೆಯಾಗಿ (ತಮ್ಮ ತಮ್ಮ) ಶಂಖಗಳನ್ನು ಊದಿದರು.

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥**

ಚ (ಮತ್ತು) ಸಃ (ಆ) ತುಮುಲಃ (ಭಯಂಕರ) ಘೋಷಃ (ಶಂಖಧ್ವನಿ) ನಭಃ (ಆಕಾಶವನ್ನೂ) ಪೃಥಿವೀಂ ಚ ಏವ (ಭೂಮಿಯನ್ನೂ ಸಹ) ವ್ಯನುನಾದ-ಯನ್ (ಪ್ರತಿಧ್ವನಿಮಾಡಿ) ಧಾರ್ತರಾಷ್ಟ್ರಾಣಾಂ (ಕೌರವರ) ಹೃದಯಾನಿ (ಹೃದಯುಗಳನ್ನು) ವ್ಯದಾರಯತ್ (ಸೀಳಿತು).

೧೯. ಮತ್ತು ಆ ಭಯಂಕರ ಶಂಖಧ್ವನಿ ಆಕಾಶದಲ್ಲಿಯೂ ಭೂಮಿಯಲ್ಲಿಯೂ ಸಹ ಪ್ರತಿಧ್ವನಿಮಾಡುತ್ತಾ ಕೌರವರ ಹೃದಯಗಳನ್ನು ಸೀಳಿತು.

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦ ॥**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

ಮಹೀಪತೇ (ಎಲೈ ಮಹೀಪತಿಯೆ) ಅಥ (ಅನಂತರ) ಕಪಿಧ್ವಜಃ (ಕಪಿಧ್ವಜನಾದ) ಪಾಂಡವಃ (ಅರ್ಜುನನು) ವ್ಯವಸ್ಥಿತಾನ್ (ಯುದ್ಧಕ್ಕಾಗಿ ಸನ್ನದ್ಧರಾಗಿರುವ) ಧಾರ್ತರಾಷ್ಟ್ರಾನ್ (ಕೌರವರನ್ನು) ದೃಷ್ಟ್ವಾ (ನೋಡಿ) ಶಸ್ತ್ರಸಂಪಾತೇ (ಶಸ್ತ್ರನಿಕ್ಷೇಪಕ್ಕೆ) ಪ್ರವೃತ್ತೇ ([ಸಮಯವು] ಬಂದಿದ್ದರಿಂದ) ಧನುಃ (ಧನುಸ್ಸನ್ನು) ಉದ್ಯಮ್ಯ (ಎತ್ತಿ ಹಿಡಿದು) ತದಾ (ಆಗ) ಹೃಷೀಕೇಶಂ (ಶ್ರೀಕೃಷ್ಣನನ್ನು ಕುರಿತು) ಇದಂ (ಈ) ವಾಕ್ಯಂ (ಮಾತನ್ನು) ಆಹ (ಹೇಳಿದನು).

೨೦-೨೧. ಎಲೈ ಮಹೀಪತಿಯೆ, ಅನಂತರ ಕಪಿಧ್ವಜನಾದ[1] ಅರ್ಜುನನು ಯುದ್ಧಕ್ಕಾಗಿ ಸನ್ನದ್ಧರಾಗಿರುವ ಕೌರವರನ್ನು ನೋಡಿ, ಶಸ್ತ್ರನಿಕ್ಷೇಪಕ್ಕೆ ಸಮಯವು ಬಂದಿದ್ದರಿಂದ, ಧನುಸ್ಸನ್ನು ಎತ್ತಿಹಿಡಿದು, ಶ್ರೀಕೃಷ್ಣನನ್ನು ಕುರಿತು ಈ ಮಾತನ್ನು ಹೇಳಿದನು.

[1] ಅರ್ಜುನನ ರಥದಲ್ಲಿ ಆಂಜನೇಯ-ಚಿಹ್ನಿತವಾದ ಒಂದು ಪತಾಕೆಯಿತ್ತು.

ಅರ್ಜುನ ಉವಾಚ

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥ ೨೧ ॥**
**ಯಾವದೇತಾನ್ ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥ ೨೨ ॥**

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥ ೨೩ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ಯಾವತ್ (ಎಷ್ಟು ಕಾಲ) ಅಹಂ (ನಾನು) ಯೋದ್ಧುಕಾಮಾನ್ (ಯುದ್ಧಾಕಾಂಕ್ಷೆಯುಳ್ಳವರಾಗಿ)

ಅವಸ್ಥಿತಾನ್ (ನಿಂತಿರುವ) ಏತಾನ್ (ಇವರನ್ನು) ನಿರೀಕ್ಷೇ (ನೋಡುತ್ತೇನೆಯೋ) [ಮತ್ತು] ಅಸ್ಮಿನ್ (ಈ) ರಣಸಮುದ್ಯಮೇ (ಯುದ್ಧೋದ್ಯೋಗದಲ್ಲಿ) ಕೈಃ ಸಹ (ಯಾರೊಡನೆ) ಮಯಾ (ನನ್ನಿಂದ) ಯೋದ್ಧವ್ಯಂ (ಯುದ್ಧಮಾಡತಕ್ಕದ್ದು) [ಮತ್ತು] ಯುದ್ಧೇ (ಯುದ್ಧದಲ್ಲಿ) ದುರ್ಬುದ್ಧೇಃ (ದುರ್ಬುದ್ಧಿಯಾದ) ಧಾರ್ತ-ರಾಷ್ಟ್ರಸ್ಯ (ದುರ್ಯೋಧನನಿಗೆ) ಪ್ರಿಯಚಿಕೀರ್ಷವಃ (ಪ್ರಿಯವನ್ನುಂಟುಮಾಡ ಬೇಕೆಂದು) ಯೇ ಏತೇ (ಯಾವ ವೀರರು) ಅತ್ರ (ಈ ರಣಕ್ಷೇತ್ರದಲ್ಲಿ) ಸಮಾ ಗತಾಃ (ಸೇರಿರುತ್ತಾರೋ) [ತಾನ್ (ಅಂತಹ)] ಯೋತ್ಸ್ಯಮಾನಾನ್ (ಯುದ್ಧಾಭಿ-ಲಾಷಿಗಳನ್ನು) ಅಹಂ (ನಾನು) ಅವೇಕ್ಷೇ (ನೋಡುತ್ತೇನೆಯೋ) [ತಾವತ್ (ಅಷ್ಟರ ವರೆಗೆ)] ಅಚ್ಯುತ (ಎಲೈ ಕೃಷ್ಣನೆ) ಉಭಯೋಃ (ಎರಡು) ಸೇನಯೋಃ (ಸೇನೆಗಳ) ಮಧ್ಯೇ (ನಡುವೆ) ರಥಂ (ರಥವನ್ನು) ಸ್ಥಾಪಯ (ನಿಲ್ಲಿಸು).

ಅರ್ಜುನನು ಹೇಳಿದನು

೨೧–೨೩. ಯುದ್ಧಾಕಾಂಕ್ಷೆಯುಳ್ಳವರಾಗಿ (ಮುಂದೆ) ನಿಂತಿರುವ ಇವರನ್ನು ನಾನು ಎಷ್ಟುಕಾಲ (ಸರಿಯಾಗಿ) ನೋಡುತ್ತೇನೆಯೋ, (ಮತ್ತು) ಈ ಯುದ್ಧೋದ್ಯೋಗದಲ್ಲಿ ಯಾರೊಡನೆ ನನ್ನಿಂದ ಯುದ್ಧಮಾಡತಕ್ಕದ್ದೆಂದು (ನಿರ್ಣಯಿಸುವ ವರೆಗೆ), (ಮತ್ತು) ದುರ್ಬುದ್ಧಿಯಾದ ದುರ್ಯೋಧನನಿಗೆ ಯುದ್ಧದಲ್ಲಿ ಪ್ರಿಯವನ್ನುಂಟುಮಾಡಬೇಕೆಂದು ಯಾವ ಯಾವ ವೀರರು ಈ ರಣಕ್ಷೇತ್ರದಲ್ಲಿ ಸೇರಿರುತ್ತಾರೋ ಅಂತಹ ಯುದ್ಧಾಭಿಲಾಷಿಗಳನ್ನು ನಾನು ನೋಡುವ ವರೆಗೆ, ಎಲೈ ಕೃಷ್ಣ, ನನ್ನ ರಥವನ್ನು ಎರಡು ಸೇನೆಗಳ ನಡುವೆ ನಿಲ್ಲಿಸು.

ಸಂಜಯ ಉವಾಚ

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥ ೨೪ ॥**

**ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥ ೨೫ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)– ಭಾರತ (ಎಲೈ ಧೃತ-ರಾಷ್ಟ್ರನೆ) ಗುಡಾಕೇಶೇನ [1] (ಅರ್ಜುನನಿಂದ) ಏವಂ (ಈ ಪ್ರಕಾರ) ಉಕ್ತಃ (ಹೇಳಲ್ಪಟ್ಟವನಾಗಿ) ಹೃಷೀಕೇಶಃ (ಶ್ರೀಕೃಷ್ಣನು) ಉಭಯೋಃ (ಎರಡು) ಸೇನಯೋಃ (ಸೇನೆಗಳ) ಮಧ್ಯೇ (ನಡುವೆ) ಭೀಷ್ಮದ್ರೋಣಪ್ರಮುಖತಃ (ಭೀಷ್ಮ

ದ್ರೋಣರ ಮುಂದೆ) ಸರ್ವೇಷಾಂ ಚ (ಮತ್ತು ಸಮಸ್ತ) ಮಹೀಕ್ಷಿತಾಮ್ (ರಾಜರ ಎದುರಿಗೆ) ರಥೋತ್ತಮಂ (ಉತ್ತಮ ರಥವನ್ನು) ಸ್ಥಾಪಯಿತ್ವಾ (ನಿಲ್ಲಿಸಿ) ಪಾರ್ಥ (ಎಲೈ ಅರ್ಜುನನೆ) ಸಮವೇತಾನ್ (ಸೇರಿರುವ) ಏತಾನ್ (ಈ) ಕುರೂನ್ (ಕೌರವರನ್ನು) ಪಶ್ಯ (ನೋಡು) ಇತಿ (ಹೀಗೆಂದು) ಉವಾಚ (ಹೇಳಿದನು).

ಸಂಜಯನು ಹೇಳಿದನು

೨೪–೨೫. ಎಲೈ ಧೃತರಾಷ್ಟ್ರ, ಅರ್ಜುನನು ಈ ಪ್ರಕಾರ ಹೇಳಲು ಶ್ರೀಕೃಷ್ಣನು ಎರಡು ಸೇನೆಗಳ ನಡುವೆ, ಭೀಷ್ಮ ದ್ರೋಣ ಮತ್ತು ಇತರ ರಾಜರ ಮುಂದೆ, ತನ್ನ ಉತ್ತಮರಥವನ್ನು ನಿಲ್ಲಿಸಿ, 'ಎಲೈ ಅರ್ಜುನ, (ಯುದ್ಧಕ್ಕಾಗಿ) ಸೇರಿರುವ ಈ ಸಮಸ್ತ ಕೌರವರನ್ನು ನೋಡು' ಎಂದನು.

[1] ಗುಡಾಕಾ (ನಿದ್ರೆ) + ಈಶ (ಜಯಿಸಿದವನು), ನಿದ್ರಾಜಯವನ್ನು ಮಾಡಿದವನು ಎಂದರ್ಥ.

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ॥ ೨೬ ॥**

ಅಥ (ಅನಂತರ) ಪಾರ್ಥಃ (ಅರ್ಜುನನು) ತತ್ರ (ಅಲ್ಲಿ) ಉಭಯೋಃ (ಎರಡು) ಸೇನಯೋಃ ಅಪಿ (ಸೇನೆಗಳಲ್ಲಿಯೂ) ಸ್ಥಿತಾನ್ (ಇದ್ದ) ಪಿತೄನ್ (ತಂದೆಯರನ್ನೂ) ಪಿತಾಮಹಾನ್ (ತಾತಂದಿರನ್ನೂ) ಆಚಾರ್ಯಾನ್ (ಗುರುಗಳನ್ನೂ) ಮಾತುಲಾನ್ (ಸೋದರಮಾವಂದಿರನ್ನೂ) ಭ್ರಾತೄನ್ (ಅಣ್ಣತಮ್ಮಂದಿರನ್ನೂ) ಪುತ್ರಾನ್ (ಮಕ್ಕಳನ್ನೂ) ಪೌತ್ರಾನ್ (ಮೊಮ್ಮಕ್ಕಳನ್ನೂ) ತಥಾ (ಮತ್ತು) ಸಖೀನ್ (ಮಿತ್ರರನ್ನೂ) ಶ್ವಶುರಾನ್ (ಮಾವಂದಿರನ್ನೂ) ಸುಹೃದಃ ಚ ಏವ (ಮತ್ತು ಸ್ನೇಹಿತರನ್ನೂ) ಅಪಶ್ಯತ್ (ನೋಡಿದನು).

೨೬. ಅನಂತರ ಅರ್ಜುನನು ಅಲ್ಲಿ ಎರಡು ಸೈನ್ಯಗಳಲ್ಲಿಯೂ ಇದ್ದ ತಂದೆಯರನ್ನೂ (ಚಿಕ್ಕಪ್ಪ ದೊಡ್ಡಪ್ಪರು) ತಾತಂದಿರನ್ನೂ ಗುರುಗಳನ್ನೂ ಸೋದರಮಾವಂದಿರನ್ನೂ ಅಣ್ಣತಮ್ಮಂದಿರನ್ನೂ ಮಕ್ಕಳನ್ನೂ ಮೊಮ್ಮಕ್ಕಳನ್ನೂ ಸಮವಯಸ್ಕರಾದ ಮಿತ್ರರನ್ನೂ ಮಾವಂದಿರನ್ನೂ ಮತ್ತು ಸ್ನೇಹಿತರನ್ನೂ ನೋಡಿದನು.

**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ।**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ॥ ೨೭ ॥**

ಸಃ (ಆ) ಕೌಂತೇಯಃ (ಕುಂತೀಪುತ್ರನಾದ ಅರ್ಜುನನು) ಅವಸ್ಥಿತಾನ್ (ಸನ್ನದ್ಧರಾದ) ತಾನ್ (ಆ) ಸರ್ವಾನ್ (ಸಮಸ್ತ) ಬಂಧೂನ್ (ಬಂಧುಗಳನ್ನು) ಸಮೀಕ್ಷ್ಯ (ಚೆನ್ನಾಗಿ ನೋಡಿ) ಪರಯಾ (ಅತಿಶಯ) ಕೃಪಯಾ (ದಯೆಯಿಂದ) ಆವಿಷ್ಟಃ (ತುಂಬಿ) ವಿಷೀದನ್ (ವಿಷಣ್ಣನಾಗಿ) ಇದಂ (ಈ ಮಾತನ್ನು) ಅಬ್ರವೀತ್ (ಹೇಳಿದನು).

**೨೭.** ಅರ್ಜುನನು ಅಲ್ಲಿ ಸನ್ನದ್ಧರಾಗಿದ್ದ ಆ ಸಮಸ್ತ ಬಂಧುಗಳನ್ನು ಚೆನ್ನಾಗಿ ನೋಡಿ ಅತಿಶಯ ದಯೆಯಿಂದ ತುಂಬಿ ವಿಷಣ್ಣನಾಗಿ ಈ ಮಾತನ್ನು ಹೇಳಿದನು.

ಅರ್ಜುನ ಉವಾಚ

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ।**
**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ॥ ೨೮ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)-- ಕೃಷ್ಣ (ಎಲೈ ಕೃಷ್ಣನೆ) ಯುಯುತ್ಸುಂ (ಯುದ್ಧಾಭಿಲಾಷೆಯಿಂದ) ಸಮುಪಸ್ಥಿತಂ (ನಿಂತಿರುವ) ಇಮಂ (ಈ) ಸ್ವಜನಂ (ಸ್ವಜನಪನ್ನು) ದೃಷ್ಟ್ವಾ (ನೋಡಿ) ಮಮ (ನನ್ನ) ಗಾತ್ರಾಣಿ (ಅವಯುವಗಳು) ಸೀದಂತಿ (ಕುಂದುತ್ತಿವೆ) ಮುಖಂ ಚ (ಮತ್ತು ಮುಖವೂ) ಪರಿಶುಷ್ಯತಿ (ಬಾಡುತ್ತಿದೆ).

ಅರ್ಜುನನು ಹೇಳಿದನು

**೨೮.** ಎಲೈ ಕೃಷ್ಣ, ಯುದ್ಧಾಭಿಲಾಷೆಯಿಂದ (ಸಮವೇತರಾಗಿ) ನಿಂತಿರುವ ಈ ಸ್ವಜನರನ್ನು ನೋಡಿ ನನ್ನ ಅವಯುವಗಳು ಕುಂದುತ್ತಿವೆ ಮತ್ತು ಮುಖವೂ ಬಾಡುತ್ತಿದೆ.

**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ।**
**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ॥ ೨೯ ॥**

ಚ ಮೇ (ಮತ್ತು ನನ್ನ) ಶರೀರೇ (ಶರೀರದಲ್ಲಿ) ವೇಪಥುಃ (ಕಂಪನವೂ) ರೋಮಹರ್ಷಃ ಚ (ಮತ್ತು ರೋಮಾಂಚವೂ) ಜಾಯತೇ (ಉಂಟಾಗುತ್ತಿದೆ) ಹಸ್ತಾತ್ (ಕೈಯಿಂದ) ಗಾಂಡೀವಂ (ಗಾಂಡೀವವು) ಸ್ರಂಸತೇ (ಜಾರಿ ಬೀಳುತ್ತಿದೆ) ತ್ವಕ್ ಏವ ಚ (ಮತ್ತು ಚರ್ಮವೂ ಸಹ) ಪರಿದಹ್ಯತೇ (ಬಹಳ ಸುಡುತ್ತಿದೆ).

೨೯. ನನ್ನ ಶರೀರದಲ್ಲಿ ಕಂಪನವೂ ರೋಮಾಂಚವೂ ಉಂಟಾಗುತ್ತಿವೆ; ಕೈಯಿಂದ ಗಾಂಡೀವವು ಜಾರಿ ಬೀಳುತ್ತಿದೆ ಮತ್ತು ಚರ್ಮವೂ ಸಹ ಬಹಳ ಸುಡುತ್ತಿದೆ.

**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ।**
**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ॥ ೩೦ ॥**

ಕೇಶವ (ಎಲೈ ಕೇಶವನೆ) ಅವಸ್ಥಾತುಂ (ನಿಲ್ಲುವುದಕ್ಕೂ) ನ ಶಕ್ನೋಮಿ (ಆಗುತ್ತಿಲ್ಲ) ಚ ಮೇ (ಮತ್ತು ನನ್ನ) ಮನಃ (ಮನಸ್ಸು) ಭ್ರಮತಿ ಇವ (ಸುತ್ತುತ್ತಿರುವ ಹಾಗೆ ಇದೆ) ವಿಪರೀತಾನಿ (ಅಮಂಗಳ ಸೂಚಕ) ನಿಮಿತ್ತಾನಿ (ಶಕುನಗಳನ್ನು) ಪಶ್ಯಾಮಿ (ನೋಡುತ್ತಿದ್ದೇನೆ).

೩೦. ಎಲೈ ಕೇಶವ, ನನಗೆ ನಿಲ್ಲುವುದಕ್ಕೂ ಆಗುತ್ತಿಲ್ಲ; ಮತ್ತು ನನ್ನ ಮನಸ್ಸು (ಚಾಂಚಲ್ಯದಿಂದ) ಸುತ್ತುತ್ತಿರುವ ಹಾಗೆ ಇದೆ; ಮತ್ತು ಅಮಂಗಳಸೂಚಕ ಶಕುನಗಳನ್ನೂ ನೋಡುತ್ತಿದ್ದೇನೆ.

**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ।**
**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ॥ ೩೧ ॥**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥ ೩೨ ॥**

ಕೃಷ್ಣ (ಎಲೈ ಕೃಷ್ಣನೆ) ಆಹವೇ (ಯುದ್ಧದಲ್ಲಿ) ಸ್ವಜನಂ( ಸ್ವಜನವನ್ನು) ಹತ್ವಾ (ಕೊಂದು) ಶ್ರೇಯಃ ಚ (ಶ್ರೇಯಸ್ಸನ್ನೂ) ನ ಅನುಪಶ್ಯಾಮಿ (ನೋಡಲಾರೆನು) ವಿಜಯಂ (ಜಯವನ್ನು) ನ ಕಾಂಕ್ಷೇ (ಕೋರುವುದಿಲ್ಲ) ರಾಜ್ಯಂ ಚ (ರಾಜ್ಯವನ್ನೂ) ಸುಖಾನಿ ಚ (ಮತ್ತು ಸುಖಗಳನ್ನೂ) ನ [ಕಾಂಕ್ಷೇ] (ಕೋರುವುದಿಲ್ಲ) ಗೋವಿಂದ (ಎಲೈ ಗೋವಿಂದನೆ) ನಃ (ನಮಗೆ) ರಾಜ್ಯೇನ (ರಾಜ್ಯದಿಂದ) ಕಿಂ (ಏನು) ಭೋಗೈಃ (ಭೋಗಗಳಿಂದಾಗಲೀ) ಜೀವಿತೇನ ವಾ (ಅಥವಾ ಜೀವನ ಧಾರಣದಿಂದಾಗಲೀ) ಕಿಂ (ಏನು).

೩೧-೩೨. ಎಲೈ ಕೃಷ್ಣ, ಯುದ್ಧದಲ್ಲಿ ಸ್ವಜನರನ್ನು ಕೊಂದರೆ (ಯಾವ) ಶ್ರೇಯಸ್ಸನ್ನೂ ನಾನು ನೋಡಲಾರೆನು. ನಾನು (ಯುದ್ಧದಲ್ಲಿ) ಜಯವನ್ನು ಕೋರುವುದಿಲ್ಲ, ರಾಜ್ಯವನ್ನೂ ಸುಖಗಳನ್ನೂ ಅಪೇಕ್ಷಿಸುವುದಿಲ್ಲ. ಎಲೈ ಗೋವಿಂದ, ನಮಗೆ ರಾಜ್ಯದಿಂದೇನು? ಭೋಗಗಳಿಂದಾಗಲೀ ಅಥವಾ ಜೀವನಧಾರಣದಿಂದಾಗಲೀ ಏನು ಪ್ರಯೋಜನ?

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾಃ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩ ॥**

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥ ೩೪ ॥**

ಯೇಷಾಂ ಅರ್ಥೇ (ಯಾರಿಗೋಸ್ಕರ) ನಃ (ನಮಗೆ) ರಾಜ್ಯಂ (ರಾಜ್ಯವು) ಭೋಗಾಃ (ಭೋಗಗಳೂ) ಸುಖಾನಿ ಚ (ಮತ್ತು ಸುಖಗಳೂ) ಕಾಂಕ್ಷಿತಂ (ಅಪೇಕ್ಷಿತವಾಗಿರುವುವೋ) ತೇ ಇಮೇ (ಅಂತಹ ಇವರೇ, ಈ) ಆಚಾರ್ಯಾಃ (ಆಚಾರ್ಯರು) ಪಿತರಃ (ಚಿಕ್ಕಪ್ಪ ದೊಡ್ಡಪ್ಪರು) ಪುತ್ರಾಃ (ಮಕ್ಕಳು) ತಥಾ ಚ (ಮತ್ತು) ಪಿತಾಮಹಾಃ ಏವ (ತಾತಂದಿರೂ ಸಹ) ಮಾತುಲಾಃ (ಸೋದರ ಮಾವಂದಿರು) ಶ್ವಶುರಾಃ (ಮಾವಂದಿರು) ಪೌತ್ರಾಃ (ಮೊಮ್ಮಕ್ಕಳು) ಶ್ಯಾಲಾಃ (ಭಾವ ಮೈದಂದಿರು) ತಥಾ (ಮತ್ತು) ಸಂಬಂಧಿನಃ (ನಂಟರು) ಪ್ರಾಣಾನ್ (ಪ್ರಾಣವನ್ನೂ) ಧನಾನಿ ಚ (ಮತ್ತು ಧನವನ್ನೂ) ತ್ಯಕ್ತ್ವಾ (ತ್ಯಾಗಮಾಡಿ) ಯುದ್ಧೇ (ರಣರಂಗದಲ್ಲಿ) ಅವಸ್ಥಿತಾಃ (ನಿಂತಿರುತ್ತಾರೆ).

**೩೩-೩೪.** ಯಾರಿಗೋಸ್ಕರ ರಾಜ್ಯವೂ ಭೋಗಗಳೂ ಸುಖಗಳೂ ನಮಗೆ ಅಪೇಕ್ಷಿತವಾಗಿರುವುವೋ ಅಂತಹ ಈ ಆಚಾರ್ಯರೂ ಚಿಕ್ಕಪ್ಪ ದೊಡ್ಡಪ್ಪರು ಮಕ್ಕಳು ಮತ್ತು ತಾತಂದಿರು ಸೋದರಮಾವಂದಿರು ಮಾವಂದಿರು ಮೊಮ್ಮಕ್ಕಳು ಭಾವಮೈದಂದಿರು ಮತ್ತು (ಇತರ) ನಂಟರು ಪ್ರಾಣವನ್ನೂ ಧನವನ್ನೂ ತ್ಯಾಗಮಾಡಿ ರಣರಂಗದಲ್ಲಿ ನಿಂತಿರುತ್ತಾರೆ.

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫ ॥**

ಮಧುಸೂದನ (ಎಲೈ ಮಧುಸೂದನನೆ) ಘ್ನತಃ ಅಪಿ (ಕೊಲ್ಲಲ್ಪಟ್ಟರೂ) ತ್ರೈಲೋಕ್ಯರಾಜ್ಯಸ್ಯ (ತ್ರೈಲೋಕ್ಯ ರಾಜ್ಯದ) ಹೇತೋಃ ಅಪಿ (ನಿಮಿತ್ತವಾಗಿಯೂ) ಏತಾನ್ (ಇವರನ್ನು) ಹಂತುಂ (ವಧಿಸಲು) ನ ಇಚ್ಛಾಮಿ (ಇಚ್ಛಿಸುವುದಿಲ್ಲ) ಮಹೀಕೃತೇ (ಈ ಭೂಮಿಗಾಗಿ) ಕಿಂ ನು (ಏನು ಹೇಳಲಿ).

**೩೫.** ಎಲೈ ಮಧುಸೂದನ, ನಾನು ಕೊಲ್ಲಲ್ಪಟ್ಟರೂ ತ್ರೈಲೋಕ್ಯ ರಾಜ್ಯದ ನಿಮಿತ್ತವಾಗಿಯೂ ಇವರನ್ನು ವಧಿಸಲು ಇಚ್ಛಿಸುವುದಿಲ್ಲ. ಈ ಭೂಮಿಗಾಗಿ ಏನು ಹೇಳಲಿ?

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬ ॥**

ಜನಾರ್ದನ (ಎಲೈ ಜನಾರ್ದನನೆ) ಧಾರ್ತರಾಷ್ಟ್ರಾನ್ (ಕೌರವರನ್ನು) ನಿಹತ್ಯ (ಕೊಂದರೆ) ನಃ (ನಮಗೆ) ಕಾ (ಯಾವ) ಪ್ರೀತಿಃ (ಪ್ರಿಯವು) ಸ್ಯಾತ್ (ಉಂಟಾದೀತು) ಏತಾನ್ (ಈ) ಆತತಾಯಿನಃ (ಪಾತಕಿಗಳನ್ನು) ಹತ್ವಾ (ಕೊಂದರೆ) ಅಸ್ಮಾನ್ (ನಮ್ಮನ್ನು) ಪಾಪಂ ಏವ (ಪಾಪವೇ) ಆಶ್ರಯೇತ್ (ಆಶ್ರಯಿಸುತ್ತದೆ).

೩೬. ಎಲೈ ಜನಾರ್ದನ, ಈ ಕೌರವರನ್ನು ಕೊಂದರೆ ನಮಗೆ ಯಾವ ಪ್ರಿಯವು ಉಂಟಾದೀತು? ಈ ಪಾತಕಿಗಳನ್ನು ಕೊಂದರೆ ನಮ್ಮನ್ನು ಪಾಪವೇ ಆಶ್ರಯಿಸುತ್ತದೆ.

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭ ॥**

ತಸ್ಮಾತ್ (ಆದ್ದರಿಂದ) ಸ್ವಬಾಂಧವಾನ್ (ನಮ್ಮ ನಂಟರಾದ) ಧಾರ್ತ-ರಾಷ್ಟ್ರಾನ್ (ಕೌರವರನ್ನು) ಹಂತುಂ (ಕೊಲ್ಲಲು) ವಯಂ (ನಾವು) ನ ಅರ್ಹಾಃ (ಯೋಗ್ಯರಲ್ಲವು) ಮಾಧವ (ಎಲೈ ಮಾಧವನೆ) ಹಿ (ಏಕೆಂದರೆ) ಸ್ವಜನಂ (ಸ್ವಜನವನ್ನು) ಹತ್ವಾ (ಕೊಂದು) ಕಥಂ (ಹೇಗೆ) ಸುಖಿನಃ (ಸುಖಿಗಳು) ಸ್ಯಾಮ (ಆದೇವು).

೩೭. ಆದುದರಿಂದ ನಮ್ಮ ನಂಟರಾದ ಕೌರವರನ್ನು ಕೊಲ್ಲಲು ನಾವು ಯೋಗ್ಯರಲ್ಲ. ಏಕೆಂದರೆ, ಎಲೈ ಮಾಧವ, ಸ್ವಜನರನ್ನು ಕೊಂದು ಹೇಗೆ ತಾನೆ ನಾವು ಸುಖಿಗಳಾದೇವು?

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥ ೩೮ ॥**
**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**

ಯದ್ಯಪಿ (ಆದರೂ) ಲೋಭ–ಉಪಹತ–ಚೇತಸಃ (ಲೋಭದಿಂದ ಅಭಿಭೂತಚಿತ್ತರಾದ) ಏತೇ (ಇವರು) ಕುಲಕ್ಷಯಕೃತಂ (ಕುಲನಾಶದಿಂದಾಗುವ) ದೋಷಂ (ದೋಷವನ್ನೂ) ಮಿತ್ರದ್ರೋಹೇ ಚ (ಮತ್ತು ಮಿತ್ರದ್ರೋಹದಲ್ಲಿರುವ) ಪಾತಕಂ (ಪಾಪವನ್ನೂ) ನ ಪಶ್ಯಂತಿ (ನೋಡುವುದಿಲ್ಲವು) ಜನಾರ್ದನ (ಎಲೈ ಜನಾರ್ದನ) ಕುಲಕ್ಷಯಕೃತಂ ದೋಷಂ (ಕುಲನಾಶದಿಂದುಂಟಾಗುವ ದೋಷವನ್ನು)

ಪ್ರಪಶ್ಯದ್ಭಿಃ (ನೋಡುವ, ತಿಳಿದಿರುವ) ಅಸ್ಮಾಭಿಃ (ನಮ್ಮಿಂದ) ಅಸ್ಮಾತ್ (ಈ) ಪಾಪಾತ್ (ಪಾಪಕಾರ್ಯದಿಂದ) ನಿವರ್ತಿತುಂ (ಹಿಂತಿರುಗುವುದಕ್ಕೆ) ಕಥಂ (ಹೇಗೆ) ನ ಜ್ಞೇಯಮ್ (ತಿಳಿಯಬಾರದು).

೩೮-೩೯. ರಾಜ್ಯಲೋಭದಿಂದ ಅಭಿಭೂತಚಿತ್ತರಾದ ಇವರು ಕುಲ ನಾಶದಿಂದಾಗುವ ದೋಷವನ್ನೂ ಮಿತ್ರದ್ರೋಹದಲ್ಲಿರುವ ಪಾಪವನ್ನೂ ನೋಡದೇ ಇರುವರಾದರೂ, ಎಲೈ ಜನಾರ್ದನ, ಕುಲನಾಶದಿಂದಾಗುವ ದೋಷವನ್ನು ಅರಿತ ನಾವು ಈ ಪಾಪಕಾರ್ಯದಿಂದ ಹಿಂತಿರುಗಬೇಕೆಂದು ಏಕೆ ತಿಳಿಯಬಾರದು?

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦ ॥**

ಕುಲಕ್ಷಯೇ (ಕುಲವು ಕ್ಷಯವಾದರೆ) ಸನಾತನಾಃ (ಶಾಶ್ವತವಾದ) ಕುಲ-ಧರ್ಮಾಃ (ಕುಲಧರ್ಮಗಳು) ಪ್ರಣಶ್ಯಂತಿ (ನಾಶವಾಗುವುವು) ಉತ (ಮತ್ತು) ಧರ್ಮೇ ನಷ್ಟೇ (ಧರ್ಮವು ನಷ್ಟವಾದರೆ) ಅಧರ್ಮಃ (ಅಧರ್ಮವು) ಕೃತ್ಸ್ನಂ (ಸಮಸ್ತ) ಕುಲಂ (ಕುಲವನ್ನೂ) ಅಭಿಭವತಿ (ಅಧೀನಪಡಿಸಿಕೊಳ್ಳುವುದು).

೪೦. ಕುಲವು ಕ್ಷಯವಾದರೆ ಶಾಶ್ವತವಾದ ಕುಲಧರ್ಮಗಳು ನಾಶ ವಾಗುವುವು; ಮತ್ತು ಧರ್ಮವು ನಷ್ಟವಾದರೆ ಸಮಸ್ತ ಕುಲಗಳನ್ನೂ ಅಧರ್ಮವು ಅಧೀನಪಡಿಸಿಕೊಳ್ಳುವುದು.

**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥ ೪೧ ॥**

ಕೃಷ್ಣ (ಎಲೈ ಕೃಷ್ಣನೆ) ಅಧರ್ಮ-ಅಭಿಭವಾತ್ (ಅಧರ್ಮವು ಹೆಚ್ಚಾಗುವು ದರಿಂದ) ಕುಲಸ್ತ್ರಿಯಃ (ಕುಲಸ್ತ್ರೀಯರು) ಪ್ರದುಷ್ಯಂತಿ (ಕೆಟ್ಟುಹೋಗುವರು) ಸ್ತ್ರೀಷು (ಸ್ತ್ರೀಯರು) ದುಷ್ಟಾಸು (ದುಷ್ಟರಾದರೆ) ವಾರ್ಷ್ಣೇಯ (ವೃಷ್ಣಿವಂಶಜ ನಾದ ಕೃಷ್ಣನೆ) ವರ್ಣಸಂಕರಃ (ವರ್ಣಗಳ ಸಾಂಕರ್ಯವು) ಜಾಯತೇ (ಉಂಟಾ ಗುವುದು).

೪೧. ಎಲೈ ಕೃಷ್ಣ, ಅಧರ್ಮವು ಹೆಚ್ಚಾಗುವುದರಿಂದ ಕುಲಸ್ತ್ರೀಯರು ಕೆಟ್ಟುಹೋಗುವರು. ಎಲೈ ವಾರ್ಷ್ಣೇಯ, ಸ್ತ್ರೀಯರು ದುಷ್ಟರಾದರೆ ವರ್ಣಗಳ ಸಾಂಕರ್ಯವು ಉಂಟಾಗುವುದು.

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ ೪೨ ॥**

ಸಂಕರಃ (ವರ್ಣಸಂಕರವು) ಕುಲಘ್ನಾನಾಂ (ಕುಲವನ್ನು ನಾಶಮಾಡಿದವರಿಗೂ) ಕುಲಸ್ಯ ಚ (ಮತ್ತು ಕುಲಕ್ಕೂ) ನರಕಾಯ ಏವ (ನರಕವನ್ನು ಉಂಟುಮಾಡುವುದು) ಏಷಾಂ (ಇವರ) ಪಿತರಃ (ಪಿತೃಗಳು) ಲುಪ್ತ–ಪಿಂಡ–ಉದಕ–ಕ್ರಿಯಾಃ (ಶ್ರಾದ್ಧತರ್ಪಣ ಕ್ರಿಯೆಗಳಿಲ್ಲದೆ) ಪತಂತಿ (ಕೆಳಕ್ಕೆ ಬೀಳುವರು).

**೪೨.** ವರ್ಣಸಂಕರವು ಕುಲನಾಶಮಾಡಿದವರಿಗೂ ಕುಲಕ್ಕೂ ನರಕಪ್ರಾಪ್ತಿಯನ್ನು ಉಂಟುಮಾಡುವುದು. ಇವರ ಪಿತೃಗಳು ಶ್ರಾದ್ಧ ತರ್ಪಣ ಕ್ರಿಯೆಗಳಿಲ್ಲದೆ (ಪಿತೃಲೋಕದಿಂದ) ಕೆಳಕ್ಕೆ ಬೀಳುವರು.

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥**

ಏತೈಃ (ಈ ಮೇಲೆ ಹೇಳಿದ) ವರ್ಣಸಂಕರಕಾರಕೈಃ (ವರ್ಣಗಳ ಸಾಂಕರ್ಯವನ್ನುಂಟುಮಾಡುವ) ದೋಷೈಃ (ದೋಷಗಳಿಂದ) ಕುಲಘ್ನಾನಾಂ (ಕುಲನಾಶಕರ) ಜಾತಿಧರ್ಮಾಃ (ಜಾತಿಧರ್ಮಗಳೂ) ಕುಲಧರ್ಮಾಃ ಚ (ಮತ್ತು ಕುಲಧರ್ಮಗಳೂ) ಉತ್ಸಾದ್ಯಂತೇ (ನಾಶವಾಗುವುವು).

**೪೩.** ಈ ಮೇಲೆ ಹೇಳಿದ ವರ್ಣಸಂಕರವನ್ನುಂಟುಮಾಡುವ ದೋಷಗಳಿಂದ ಕುಲನಾಶಕರ ಶಾಶ್ವತವಾದ ಜಾತಿಧರ್ಮಗಳೂ ಕುಲಧರ್ಮಗಳೂ ನಾಶವಾಗುವುವು.

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪ ॥**

ಜನಾರ್ದನ (ಎಲೈ ಜನಾರ್ದನನೆ) ಉತ್ಸನ್ನಕುಲಧರ್ಮಾಣಾಂ (ಕುಲಧರ್ಮಗಳನ್ನು ನಾಶಮಾಡಿಕೊಂಡಿರುವ) ಮನುಷ್ಯಾಣಾಂ (ಮನುಷ್ಯರಿಗೆ) ನರಕೇ (ನರಕದಲ್ಲಿ) ನಿಯತಂ (ದೀರ್ಘಕಾಲ) ವಾಸಃ (ವಾಸವು) ಇತಿ (ಎಂದು) ಅನುಶುಶ್ರುಮ (ಕೇಳಿರುವೆವು).

**೪೪.** ಎಲೈ ಜನಾರ್ದನ, ಕುಲಧರ್ಮಗಳನ್ನು ನಾಶಮಾಡಿಕೊಂಡಿರುವ ಮನುಷ್ಯರಿಗೆ ನರಕದಲ್ಲಿ ದೀರ್ಘಕಾಲ ವಾಸವಾಗುವುದೆಂದು (ನಾವು) ಕೇಳಿರುವೆವು.

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ ೪೫ ॥**

ಯತ್ (ಯಾವ ಕಾರಣದಿಂದ) ರಾಜ್ಯಸುಖಲೋಭೇನ (ರಾಜ್ಯಸುಖದ ದುರಾಶೆಯಿಂದ, ರಾಜ್ಯಸುಖವನ್ನು ಅಪೇಕ್ಷಿಸಿ) ಸ್ವಜನಂ (ಸ್ವಜನವನ್ನು) ಹಂತುಂ (ಕೊಲ್ಲಲು) ಉದ್ಯತಾಃ (ಪ್ರಯತ್ನಿಸಿದೆವೋ) [ತತ್ (ಅದೇ ಕಾರಣದಿಂದ)] ವಯಂ (ನಾವು) ಮಹತ್ (ಮಹಾ) ಪಾಪಂ (ಪಾಪವನ್ನು) ಕರ್ತುಂ (ಮಾಡಲು) ವ್ಯವಸಿತಾಃ (ನಿಶ್ಚಯಿಸಿದ್ದೇವೆ).

**೪೫.** ಯಾವ ಕಾರಣದಿಂದ ರಾಜ್ಯಸುಖವನ್ನು ಅಪೇಕ್ಷಿಸಿ ಸ್ವಜನರನ್ನು ಕೊಲ್ಲಲು ಪ್ರಯತ್ನಿಸಿದೆವೋ (ಅದೇ ಕಾರಣದಿಂದ) ನಾವು ಮಹಾಪಾಪವನ್ನು ಮಾಡಲು ನಿಶ್ಚಯಿಸಿದ್ದೇವೆ.

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥**

ಅಪ್ರತೀಕಾರಂ (ಪ್ರತಿಕ್ರಿಯೆಯನ್ನು ಮಾಡದಿರುವ) ಅಶಸ್ತ್ರಂ (ನಿಶ್ಶಸ್ತ್ರನಾದ) ಮಾಂ (ನನ್ನನ್ನು) ಶಸ್ತ್ರಪಾಣಯಃ (ಶಸ್ತ್ರಪಾಣಿಗಳಾದ) ಧಾರ್ತರಾಷ್ಟ್ರಾಃ (ಕೌರವರು) ರಣೇ (ಯುದ್ಧದಲ್ಲಿ) ಹನ್ಯುಃ ಯದಿ (ಕೊಂದರೆ) ತತ್ (ಅದು, ಕೊಲ್ಲಿಸಿಕೊಳ್ಳುವುದು) ಕ್ಷೇಮತರಂ (ಅಧಿಕ ಕ್ಷೇಮವು) ಭವೇತ್ (ಆಗುವುದು).

**೪೬.** ಯಾವ ಪ್ರತಿಕ್ರಿಯೆಯನ್ನೂ ಮಾಡದಿರುವ ನಿಶ್ಶಸ್ತ್ರನಾದ ನನ್ನನ್ನು ಶಸ್ತ್ರಪಾಣಿಗಳಾದ ಕೌರವರು ಕೊಂದರೆ ಅದು ನನಗೆ ಅಧಿಕ ಕ್ಷೇಮವಾಗುವುದು.

ಸಂಜಯ ಉವಾಚ

**ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)– ಸಂಖ್ಯೇ (ರಣಭೂಮಿಯಲ್ಲಿ) ಶೋಕಸಂವಿಗ್ನಮಾನಸಃ (ಶೋಕದಿಂದ ವ್ಯಾಕುಲಚಿತ್ತನಾದ) ಅರ್ಜುನಃ (ಅರ್ಜುನನು) ಏವಂ (ಹೀಗೆ) ಉಕ್ತ್ವಾ (ಹೇಳಿ) ಸಶರಂ (ಬಾಣಸಹಿತವಾದ) ಚಾಪಂ (ಧನುಸ್ಸನ್ನು) ವಿಸೃಜ್ಯ (ತ್ಯಾಗಮಾಡಿ) ರಥೋಪಸ್ಥೇ (ರಥದ ಮೇಲೆ) ಉಪಾವಿಶತ್ (ಕುಳಿತುಕೊಂಡನು).

ಸಂಜಯನು ಹೇಳಿದನು

೪೭. ಯುದ್ಧರಂಗದಲ್ಲಿ ಶೋಕದಿಂದ ವ್ಯಾಕುಲಚಿತ್ತನಾದ ಅರ್ಜುನನು ಹೀಗೆ ನುಡಿದು ಧನುರ್ಬಾಣಗಳನ್ನು ತ್ಯಾಗಮಾಡಿ ರಥದ ಮೇಲೆ ಕುಳಿತುಕೊಂಡನು.

**ಇತಿ ಅರ್ಜುನವಿಷಾದಯೋಗೋ[1] ನಾಮ ಪ್ರಥಮೋಽಧ್ಯಾಯಃ ।**

ಅರ್ಜುನವಿಷಾದವೆಂಬ ಮೊದಲನೆಯ ಅಧ್ಯಾಯವು ಮುಗಿಯಿತು.

1 ಈ ಅಧ್ಯಾಯಕ್ಕೆ ವಿಷಾದಯೋಗವೆಂಬ ಹೆಸರು ಏಕೆ ಬಂದಿದೆಯೋ ತಿಳಿದಿಲ್ಲ. ಇಲ್ಲಿ ಅರ್ಜುನನ ವಿಷಾದವು ಸೂಚಿತವಾಗಿದೆಯೇ ವಿನಾ ವಿಷಾದರೂಪವಾದ ಅಥವಾ ವಿಷಾದವು ಕಾರಣವಾದ ಯಾವ ಯೋಗವೂ ಕಾಣಬರುತ್ತಿಲ್ಲ. ಭಾಷ್ಯಕಾರರ ಕಾಲದ ನಂತರ ಇತ್ತೀಚೆಗೆ ಯಾರಾದರೂ ಈ ಪದವನ್ನು ಸಮಾಪ್ತಿವಾಕ್ಯಕ್ಕೆ ಸೇರಿಸಿರಬಹುದು.

# ಎರಡನೆಯ ಅಧ್ಯಾಯ

## ಸಾಂಖ್ಯಯೋಗ

ಸಂಜಯ ಉವಾಚ

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ ೧ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)— ಮಧುಸೂದನಃ (ಕೃಷ್ಣನು) ತಥಾ (ಈ ಪ್ರಕಾರ) ಕೃಪಯಾ ಆವಿಷ್ಟಂ (ದಯಾರ್ದ್ರನೂ) ಅಶ್ರು-ಪೂರ್ಣ-ಆಕುಲ-ಈಕ್ಷಣಂ (ಕಂಬನಿ ತುಂಬಿ ಮಂಜಾದ ಕಣ್ಣುಳ್ಳವನೂ) ವಿಷೀ-ದಂತಂ (ಶೋಕಗ್ರಸ್ತನೂ) ತಂ (ಅರ್ಜುನನನ್ನು) ಇದಂ (ಈ) ವಾಕ್ಯಂ (ವಾಕ್ಯವನ್ನು) ಉವಾಚ (ಹೇಳಿದನು).

ಸಂಜಯನು ಹೇಳಿದನು

೧. ಈ ಪ್ರಕಾರ ದಯಾರ್ದ್ರನೂ ಕಂಬನಿ ತುಂಬಿ ಮಂಜಾದ ಕಣ್ಣುಳ್ಳವನೂ ಶೋಕಗ್ರಸ್ತನೂ ಆದ ಅರ್ಜುನನನ್ನು ಕುರಿತು ಮಧುಸೂದನನು ಈ ವಾಕ್ಯವನ್ನು ಹೇಳಿದನು.

ಶ್ರೀಭಗವಾನುವಾಚ

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಅರ್ಜುನ (ಎಲೈ ಅರ್ಜುನನೆ) ಅನಾರ್ಯಜುಷ್ಟಂ (ಅನಾರ್ಯರು ಸೇವಿಸತಕ್ಕ, ಆರ್ಯರಿಗೆ ಅಯೋಗ್ಯವಾದ) ಅಸ್ವರ್ಗ್ಯಂ (ಸ್ವರ್ಗಗತಿಗೆ ವಿರೋಧವಾದ) ಅಕೀರ್ತಿಕರಂ (ಅಪಕೀರ್ತಿಯನ್ನುಂಟುಮಾಡುವ) ಇದಂ (ಈ) ಕಶ್ಮಲಂ (ಮೋಹವು) ವಿಷಮೇ (ವಿಷಮಸಮಯದಲ್ಲಿ) ಕುತಃ (ಹೇಗೆ) ತ್ವಾ (ನಿನಗೆ) ಸಮುಪಸ್ಥಿತಂ (ಬಂದು ಸೇರಿತು).

ಶ್ರೀಕೃಷ್ಣನು ಹೇಳಿದನು

೨. ಎಲೈ ಅರ್ಜುನ, ಆರ್ಯರಿಗೆ ಅಯೋಗ್ಯವೂ ಸ್ವರ್ಗಗತಿಗೆ ವಿರೋಧವೂ ಅಪಕೀರ್ತಿಯನ್ನುಂಟುಮಾಡುವುದೂ ಆದ ಈ ಮೋಹವು ಇಂತಹ ವಿಷಮಸಮಯದಲ್ಲಿ ನಿನಗೆ ಹೇಗೆ ಬಂದಿತು?

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩ ॥**

ಪಾರ್ಥ (ಎಲೈ ಅರ್ಜುನನೆ) ಕ್ಲೈಬ್ಯಂ (ಷಂಡತನವನ್ನು) ಮಾ ಸ್ಮ ಗಮಃ (ಹೊಂದಬೇಡ) ಏತತ್ (ಇದು) ತ್ವಯಿ (ನಿನ್ನಲ್ಲಿ) ನ ಉಪಪದ್ಯತೇ (ಉಂಟಾಗ ತಕ್ಕದಲ್ಲ, ಯೋಗ್ಯವಲ್ಲ) ಪರಂತಪ (ಶತ್ರುತಾಪನನೆ) ಕ್ಷುದ್ರಂ (ತುಚ್ಛವಾದ) ಹೃದಯ–ದೌರ್ಬಲ್ಯಂ (ಮನಸ್ಸಿನ ದೌರ್ಬಲ್ಯವನ್ನು) ತ್ಯಕ್ತ್ವಾ (ಬಿಟ್ಟು) ಉತ್ತಿಷ್ಠ (ಏಳು).

೩. ಎಲೈ ಅರ್ಜುನ, ಷಂಡತನವನ್ನು ಹೊಂದಬೇಡ. ಇದು ನಿನಗೆ ಯೋಗ್ಯವಲ್ಲ. ಎಲೈ ಶತ್ರುತಾಪನನೆ, ತುಚ್ಛವಾದ ಮನಸ್ಸಿನ ದೌರ್ಬಲ್ಯ ವನ್ನು ಬಿಟ್ಟು ಏಳು.

ಅರ್ಜುನ ಉವಾಚ

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ಅರಿಸೂದನ (ಎಲೈ ಶತ್ರುಸಂಹಾರಕನೆ) ಮಧುಸೂದನ (ಮಧುಸೂದನನೆ) ಅಹಂ (ನಾನು) ಸಂಖ್ಯೇ (ಯುದ್ಧದಲ್ಲಿ) ಪೂಜಾರ್ಹೌ (ಪೂಜೆಗೆ ಯೋಗ್ಯರಾದ) ಭೀಷ್ಮಂ ದ್ರೋಣಂ ಚ (ಭೀಷ್ಮನನ್ನೂ ದ್ರೋಣನನ್ನೂ) ಇಷುಭಿಃ (ಬಾಣಗಳಿಂದ) ಕಥಂ (ಹೇಗೆ) ಪ್ರತಿ-ಯೋತ್ಸ್ಯಾಮಿ (ಎದುರಿಸಿ ಯುದ್ಧಮಾಡಲಿ).

ಅರ್ಜುನನು ಹೇಳಿದನು

೪. ಎಲೈ ಶತ್ರುಸಂಹಾರಕನೆ, ಮಧುಸೂದನ, ಪೂಜೆಗೆ ಯೋಗ್ಯ ರಾದ ಭೀಷ್ಮದ್ರೋಣರನ್ನು ನಾನು ಬಾಣಗಳಿಂದ ಹೇಗೆ ಎದುರಿಸಿ ಯುದ್ಧ ಮಾಡಲಿ?

**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥ ೫ ॥**

**ಮಹಾನುಭಾವಾನ್ (ಮಹಾನುಭಾವರಾದ) ಗುರೂನ್ (ಗುರುಗಳನ್ನು) ಅಹತ್ವಾ (ಕೊಲ್ಲದೆ) ಇಹ ಲೋಕೇ (ಈ ಲೋಕದಲ್ಲಿ) ಭೈಕ್ಷ್ಯಂ ಅಪಿ (ಭಿಕ್ಷಾನ್ನವನ್ನಾದರೂ) ಭೋಕ್ತುಂ (ತಿನ್ನುವುದು) ಶ್ರೇಯಃ (ಶ್ರೇಯಸ್ಕರವಾದದ್ದು) ತು (ಆದರೆ) ಅರ್ಥಕಾಮಾನ್ (ಅರ್ಥಾಪೇಕ್ಷಿಗಳಾದ) ಗುರೂನ್ (ಗುರುಗಳನ್ನು) ಹತ್ವಾ (ಕೊಂದು) ರುಧಿರಪ್ರದಿಗ್ಧಾನ್ (ರಕ್ತಲಿಪ್ತವಾದ) ಭೋಗಾನ್ (ಭೋಗಗಳನ್ನು) ಇಹ ಏವ (ಈ ಲೋಕದಲ್ಲಿ ಮಾತ್ರ) ಭುಂಜೀಯ (ಅನುಭವಿಸಬೇಕಾಗುವುದು).**

**೫.** ಮಹಾನುಭಾವರಾದ ಗುರುಗಳನ್ನು ಕೊಲ್ಲದೆ ಈ ಲೋಕದಲ್ಲಿ ಭಿಕ್ಷಾನ್ನವನ್ನಾದರೂ ತಿನ್ನುವುದು ಶ್ರೇಯಸ್ಕರವಾದದ್ದು. ಆದರೆ ಅರ್ಥಾಪೇಕ್ಷಿಗಳಾದ ಗುರುಗಳನ್ನು ಕೊಂದರೆ ರಕ್ತಲಿಪ್ತವಾದ ಭೋಗಗಳನ್ನು ಈ ಲೋಕದಲ್ಲಿ ಮಾತ್ರ ಅನುಭವಿಸಬೇಕಾಗುವುದು.

**ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನ ಜಿಜೀವಿಷಾಮ-**
**ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ ೬ ॥**

ಯದ್ವಾ (ಒಂದು ವೇಳೆ) [ನಾವೇ ಇವರನ್ನು] ಜಯೇಮ (ಜಯಿಸುವೆವೋ) ಯದಿ ವಾ (ಅಥವಾ) ನಃ (ನಮ್ಮನ್ನೇ) [ಇವರು] ಜಯೇಯುಃ (ಜಯಿಸುತ್ತಾರೋ) [ಈ ಎರಡರಲ್ಲಿ] ನಃ (ನಮಗೆ) ಕತರತ್ (ಯಾವುದು) ಗರೀಯಃ (ಶ್ರೇಷ್ಠವೋ) ಏತತ್ ಚ (ಇದನ್ನೂ) ನ ವಿದ್ಮಃ (ನಾವು ಅರಿಯೆವು) ಯಾನ್ (ಯಾರನ್ನು) ಹತ್ವಾ (ಕೊಂದು) ನ ಜಿಜೀವಿಷಾಮಃ (ಬದುಕಲು ಇಷ್ಟವಿಲ್ಲವೋ) ತೇ (ಆ) ಧಾರ್ತರಾಷ್ಟ್ರಾಃ ಏವ (ಕೌರವರೇ) ಪ್ರಮುಖೇ (ಇದಿರಿನಲ್ಲಿ) ಅವಸ್ಥಿತಾಃ (ನಿಂತಿದ್ದಾರೆ).

೬. ನಾವೇ ಒಂದು ವೇಳೆ ಜಯಿಸುತ್ತೇವೋ ಅಥವಾ ನಮ್ಮನ್ನೇ ಇವರು ಜಯಿಸುತ್ತಾರೋ — ಈ ಎರಡರಲ್ಲಿ ಯಾವುದು ಶ್ರೇಷ್ಠವೋ ಇದನ್ನೂ ನಾವು ಅರಿಯೆವು; ಯಾರನ್ನು ಕೊಂದು ಬದುಕಲು ನಮಗೆ ಇಷ್ಟವಿಲ್ಲವೋ ಆ ಕೌರವರೇ ನಮ್ಮಿದಿರಿನಲ್ಲಿ ನಿಂತಿದ್ದಾರೆ.

**ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ೭ ॥**

ಕಾರ್ಪಣ್ಯದೋಷೋಪಹತಸ್ವಭಾವಃ (ದೈನ್ಯವೆಂಬ ದೋಷದಿಂದ ಕುಂದಿದ ಸ್ವಭಾವವುಳ್ಳವನಾಗಿ) ಧರ್ಮಸಂಮೂಢಚೇತಾಃ (ಧರ್ಮವಿಷಯದಲ್ಲಿ ಮೂಢಮನಸ್ಸುಳ್ಳವನಾಗಿ) ತ್ವಾಂ (ನಿನ್ನನ್ನು) ಪೃಚ್ಛಾಮಿ (ಪ್ರಶ್ನೆ ಮಾಡುತ್ತೇನೆ) ಮೇ (ನನಗೆ) ಯತ್ (ಯಾವುದು) ಶ್ರೇಯಃ (ಶ್ರೇಯಸ್ಕರವೋ) ತತ್ (ಅದನ್ನು) ನಿಶ್ಚಿತಂ (ನಿಶ್ಚಯಪೂರ್ವಕ) ಬ್ರೂಹಿ (ಹೇಳು) ಅಹಂ (ನಾನು) ತೇ (ನಿನ್ನ) ಶಿಷ್ಯಃ (ಶಿಷ್ಯನು) ತ್ವಾಂ (ನಿನ್ನನ್ನೇ) ಪ್ರಪನ್ನಂ (ಶರಣುಹೊಂದಿದ) ಮಾಂ (ನನ್ನನ್ನು) ಶಾಧಿ (ಶಿಕ್ಷಿಸು).

೭. ದೈನ್ಯವೆಂಬ ದೋಷದಿಂದ ಕುಂದಿದ ಸ್ವಭಾವವುಳ್ಳವನಾಗಿ ಧರ್ಮ ವಿಷಯದಲ್ಲಿ ಮೂಢವಾದ ಮನಸ್ಸುಳ್ಳವನಾಗಿ ನಿನ್ನನ್ನು ಪ್ರಶ್ನೆ ಮಾಡುತ್ತೇನೆ. ಯಾವುದು ನನಗೆ ಶ್ರೇಯಸ್ಕರವೋ ಅದನ್ನು ನಿಶ್ಚಯಪೂರ್ವಕವಾಗಿ ಹೇಳು. ನಾನು ನಿನ್ನ ಶಿಷ್ಯನು. ನಿನ್ನನ್ನೇ ಶರಣುಹೊಂದಿದ ನನಗೆ ಬೋಧಿಸು.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ-**
**ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥ ೮ ॥**

ಭೂಮೌ (ಭೂಮಿಯಲ್ಲಿ) ಅಸಪತ್ನಂ (ಶತ್ರುಶೂನ್ಯವಾದ) ಋದ್ಧಂ (ಸಮೃದ್ಧವಾದ) ರಾಜ್ಯಂ (ರಾಜ್ಯವನ್ನು) ಸುರಾಣಾಂ (ದೇವತೆಗಳ ಮೇಲೆ) ಆಧಿಪತ್ಯಂ ಚ (ಒಡೆತನವನ್ನು) ಅವಾಪ್ಯ ಅಪಿ (ಹೊಂದಿದರೂ) ಇಂದ್ರಿಯಾಣಾಂ (ಇಂದ್ರಿಯಗಳನ್ನು) ಉಚ್ಛೋಷಣಂ (ಸೊರಗಿಸುತ್ತಿರುವ) ಮಮ (ನನ್ನ) ಶೋಕಂ (ಶೋಕವನ್ನು) ಯತ್ (ಯಾವುದು) ಅಪನುದ್ಯಾತ್ (ಹೋಗಲಾಡಿಸುವುದೋ) [ತತ್] (ಅಂತಹ ಉಪಾಯವನ್ನು) ನ ಹಿ ಪ್ರಪಶ್ಯಾಮಿ (ಕಾಣೆನು).

೮. ಈ ಭೂಮಿಯಲ್ಲಿ ಶತ್ರುಶೂನ್ಯವಾದ ಸಮೃದ್ಧರಾಜ್ಯವನ್ನು ಹೊಂದಿದರೂ ಮತ್ತು ದೇವತೆಗಳ ಮೇಲೆ ಒಡೆತನವನ್ನು ಪಡೆದರೂ, ಇಂದ್ರಿಯಗಳನ್ನು ಸೊರಗಿಸುತ್ತಿರುವ ನನ್ನ ಈ ಶೋಕವನ್ನು ಯಾವುದು ಹೋಗಲಾಡಿಸುವುದೋ ಅಂತಹ ಉಪಾಯವನ್ನು ಕಾಣೆನು.

ಸಂಜಯ ಉವಾಚ

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥ ೯ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)— ಪರಂತಪಃ (ಶತ್ರುತಾಪನನಾದ) ಗುಡಾಕೇಶಃ (ಜಿತನಿದ್ರನು, ಅರ್ಜುನನು) ಹೃಷೀಕೇಶಂ (ಇಂದ್ರಿಯೇಶನನ್ನು, ಶ್ರೀಕೃಷ್ಣನನ್ನು ಕುರಿತು) ಏವಂ (ಈ ಪ್ರಕಾರ) ಉಕ್ತ್ವಾ (ಹೇಳಿ) ನ ಯೋತ್ಸ್ಯೇ (ನಾನು ಯುದ್ಧಮಾಡುವುದಿಲ್ಲ) ಇತಿ (ಎಂದು) ಗೋವಿಂದಂ (ಗೋವಿಂದನನ್ನು ಕುರಿತು) ಉಕ್ತ್ವಾ (ಹೇಳಿ) ತೂಷ್ಣೀಂ ಬಭೂವ ಹ (ಸುಮ್ಮನಾದನು).

ಸಂಜಯನು ಹೇಳಿದನು

೯. ಶತ್ರುತಾಪನನಾದ ಅರ್ಜುನನು ಈ ಪ್ರಕಾರ ಶ್ರೀಕೃಷ್ಣನಿಗೆ ತಿಳಿಸಿ (ಪುನಃ) 'ನಾನು ಯುದ್ಧಮಾಡುವುದಿಲ್ಲ' ಎಂದು ಗೋವಿಂದನಿಗೆ ಹೇಳಿ ಸುಮ್ಮನಾದನು.

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦ ॥**

ಭಾರತ (ಎಲೈ ಧೃತರಾಷ್ಟ್ರನೆ) ಉಭಯೋಃ ಸೇನಯೋಃ (ಎರಡು ಸೇನೆಗಳ) ಮಧ್ಯೇ (ಮಧ್ಯದಲ್ಲಿ) ವಿಷೀದಂತಂ (ವಿಷಾದಪಡುತ್ತಿರುವ) ತಂ (ಅರ್ಜುನನನ್ನು ಕುರಿತು) ಹೃಷೀಕೇಶಃ (ಶ್ರೀಕೃಷ್ಣನು) ಪ್ರಹಸನ್ ಇವ (ನಗುತ್ತಿರುವವನಂತೆ) ಇದಂ (ಈ) ವಚಃ (ಮಾತನ್ನು) ಉವಾಚ (ಹೇಳಿದನು).

೧೦. ಎಲೈ ಧೃತರಾಷ್ಟ್ರ, ಎರಡು ಸೇನೆಗಳ ಮಧ್ಯದಲ್ಲಿ ವಿಷಾದಪಡುತ್ತಿರುವ ಅರ್ಜುನನನ್ನು ಕುರಿತು ಶ್ರೀಕೃಷ್ಣನು ನಗುತ್ತಿರುವವನಂತೆ ಈ ಮಾತನ್ನು ಹೇಳಿದನು.

ಶ್ರೀಭಗವಾನ್ ಉವಾಚ

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥**

ಶ್ರೀಭಗವಾನ್ (ಶ್ರೀಭಗವಂತನು) ಉವಾಚ (ಹೇಳಿದನು)— ತ್ವಂ (ನೀನು) ಅಶೋಚ್ಯಾನ್ (ಶೋಕಿಸಲು ಯೋಗ್ಯರಲ್ಲದವರನ್ನು ಕುರಿತು) ಅನು-ಅಶೋಚಃ (ಶೋಕಿಸುತ್ತೀಯೆ) ಚ (ಮತ್ತು) ಪ್ರಜ್ಞಾವಾದಾನ್ (ಜ್ಞಾನಿಗಳ ಮಾತುಗಳನ್ನು) ಭಾಷಸೇ (ಆಡುತ್ತಿರುವೆ) ಪಂಡಿತಾಃ (ಪಂಡಿತರು) ಗತ-ಅಸೂನ್ (ಸತ್ತವರನ್ನಾಗಲಿ) ಅಗತ-ಅಸೂನ್ ಚ (ಮತ್ತು ಬದುಕಿರುವವರನ್ನಾಗಲಿ ಕುರಿತು) ನ ಅನು-ಶೋಚಂತಿ (ಶೋಕಿಸುವುದಿಲ್ಲ).

ಶ್ರೀಭಗವಂತನು ಹೇಳಿದನು

೧೧. ನೀನು ಶೋಕಿಸಲು ಯೋಗ್ಯರಲ್ಲದವರನ್ನು ಕುರಿತು ಶೋಕಿಸು ತ್ತೀಯೆ ಮತ್ತು ಜ್ಞಾನಿಗಳ ಮಾತುಗಳನ್ನು ಆಡುತ್ತಿರುವೆ. ಪಂಡಿತರು ಸತ್ತವರನ್ನಾಗಲಿ ಬದುಕಿರುವವರನ್ನಾಗಲಿ ಕುರಿತು ಶೋಕಿಸುವುದಿಲ್ಲ.

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨ ॥**

ಅಹಂ (ನಾನು) ಜಾತು (ಯಾವ ಕಾಲದಲ್ಲಿಯೂ) ನ ತು ಆಸಂ [ಇತಿ] ಇರಲಿಲ್ಲವೆಂಬುದು) ನ (ಇಲ್ಲ) ತ್ವಂ (ನೀನೂ) ಇಮೇ (ಮತ್ತು ಈ) ಜನಾ-ಧಿಪಾಃ (ರಾಜರೂ) ನ [ಆಸನ್ ಇತಿ] (ಇರಲಿಲ್ಲವೆಂಬುದು) ನ (ಇಲ್ಲ) ಅತಃ ಪರಂ (ಇನ್ನು ಮುಂದೆಯೂ) ವಯಂ ಸರ್ವೇ (ನಾವೆಲ್ಲರೂ) ನ ಭವಿಷ್ಯಾಮಃ [ಇತಿ] (ಇರುವುದಿಲ್ಲವೆಂಬುದು) ಚ ನ ಏವ (ಇಲ್ಲ).

೧೨. ನಾನು ಯಾವ ಕಾಲದಲ್ಲಿಯೂ ಇರಲಿಲ್ಲವೆಂಬುದೇ ಇಲ್ಲ. ನೀನೂ ಮತ್ತು ಈ ರಾಜರೂ ಇರಲಿಲ್ಲವೆಂಬುದೇ ಇಲ್ಲ. ಇನ್ನು ಮುಂದೆಯೂ ನಾವೆಲ್ಲರೂ ಇರುವುದಿಲ್ಲವೆಂಬುದೇ ಇಲ್ಲ.

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥**

ದೇಹಿನಃ (ದೇಹವುಳ್ಳವನಿಗೆ) ಅಸ್ಮಿನ್ (ಈ) ದೇಹೇ (ದೇಹದಲ್ಲಿ) ಕೌಮಾರಂ (ಬಾಲ್ಯವು) ಯೌವನಂ (ಯೌವನವು) ಜರಾ (ಮುಪ್ಪು) ಯಥಾ (ಹೇಗೆಯೋ) ತಥಾ (ಹಾಗೆಯೇ) ದೇಹಾಂತರಪ್ರಾಪ್ತಿಃ (ಬೇರೆ ದೇಹದ ಪ್ರಾಪ್ತಿ), ತತ್ರ (ಅಲ್ಲಿ, ಆ ವಿಷಯದಲ್ಲಿ) ಧೀರಃ (ಜ್ಞಾನಿಯು) ನ ಮುಹ್ಯತಿ (ಮರುಳಾಗುವು ದಿಲ್ಲ).

೧೩. ದೇಹವುಳ್ಳ ಆತ್ಮನಿಗೆ ಈ ದೇಹದಲ್ಲಿ ಬಾಲ್ಯ ಯೌವನ ಜರಾವಸ್ಥೆ ಗಳು ಹೇಗೆ (ಉಂಟಾಗುವುವೋ), ಹಾಗೆಯೇ ಬೇರೆ ದೇಹದ ಪ್ರಾಪ್ತಿಯೂ (ಉಂಟಾಗುತ್ತದೆ). ಆ ವಿಷಯದಲ್ಲಿ ಜ್ಞಾನಿಯು ಮರುಳಾಗುವುದಿಲ್ಲ.

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

**ಕೌಂತೇಯ (ಎಲೈ ಕುಂತೀಪುತ್ರನೆ) ಮಾತ್ರಾಸ್ಪರ್ಶಾಃ ತು (ಇಂದ್ರಿಯ ವಿಷಯಗಳ ಸ್ಪರ್ಶಗಳು) ಶೀತ-ಉಷ್ಣ-ಸುಖ-ದುಃಖದಾಃ (ಶೀತೋಷ್ಣಗಳನ್ನೂ ಸುಖದುಃಖಗಳನ್ನೂ ಕೊಡತಕ್ಕವುಗಳು) ಆಗಮಾಪಾಯಿನಃ (ಬಂದುಹೋಗತಕ್ಕವುಗಳು) ಅನಿತ್ಯಾಃ (ಅನಿತ್ಯಗಳು) ಭಾರತ (ಎಲೈ ಅರ್ಜುನನೆ) ತಾನ್ (ಅವುಗಳನ್ನು) ತಿತಿಕ್ಷಸ್ವ (ಸಹಿಸಿಕೊ).**

**೧೪.** ಎಲೈ ಕುಂತೀಪುತ್ರನೆ, ಇಂದ್ರಿಯಗಳಿಗೂ ವಿಷಯಗಳಿಗೂ ಆಗುವ ಸ್ಪರ್ಶಗಳು[1] ಶೀತೋಷ್ಣಗಳನ್ನೂ ಸುಖದುಃಖಗಳನ್ನೂ ಕೊಡತಕ್ಕವುಗಳು. ಅವು ಬಂದುಹೋಗುವ ಸ್ವಭಾವವುಳ್ಳವುಗಳು, ಅನಿತ್ಯಗಳು. ಆದುದರಿಂದ ಎಲೈ ಅರ್ಜುನ, ಅವುಗಳನ್ನು ಸಹಿಸಿಕೊ.

1 ಇಂದ್ರಿಯಗಳು ಶಬ್ದಾದಿ ವಿಷಯಗಳನ್ನು ಅಳೆಯುವುದರಿಂದ ಅವುಗಳಿಗೆ 'ಮಾತ್ರೆಗಳು' ಎಂದು ಹೆಸರು. 'ಮಾ' ಎಂಬ ಧಾತುವಿಗೆ ಅಳೆಯುವುದು ಎಂದರ್ಥ.

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

ಪುರುಷರ್ಷಭ (ಎಲೈ ಪುರುಷಶ್ರೇಷ್ಠನೆ) ಹಿ (ಏಕೆಂದರೆ) ಸಮದುಃಖಸುಖಂ (ಸುಖದುಃಖಗಳನ್ನು ಸಮಾನವೆಂದು ಭಾವಿಸುವ) ಧೀರಂ (ಜ್ಞಾನಿಯಾದ) ಯಂ (ಯಾವ) ಪುರುಷಂ (ಪುರುಷನನ್ನು) ಏತೇ (ಇವು) ನ ವ್ಯಥಯಂತಿ (ವ್ಯಥೆಗೊಳಿಸುವುದಿಲ್ಲವೋ) ಸಃ (ಆತನು) ಅಮೃತತ್ವಾಯ (ಅಮೃತತ್ವಕ್ಕೆ) ಕಲ್ಪತೇ (ಯೋಗ್ಯನಾಗುವನು).

**೧೫.** ಏಕೆಂದರೆ, ಎಲೈ ಪುರುಷಶ್ರೇಷ್ಠನೆ, ಸುಖದುಃಖಗಳನ್ನು ಸಮಾನವೆಂದು ಭಾವಿಸುವ ಜ್ಞಾನಿಯಾದ ಯಾವ ಪುರುಷನನ್ನು ಇವು[1] ವ್ಯಥೆಗೊಳಿಸುವುದಿಲ್ಲವೋ ಆತನು ಅಮೃತತ್ವಕ್ಕೆ ಯೋಗ್ಯನಾಗುವನು.

1 ಸುಖದುಃಖಗಳಾದ ದ್ವಂದ್ವಗಳು.

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥**

ಅಸತಃ (ಅಸದ್ವಸ್ತುವಿಗೆ,—ವಿನ) ಭಾವಃ (ಅಸ್ತಿತ್ವವು) ನ ವಿದ್ಯತೇ (ಇಲ್ಲ) ಸತಃ (ಸದ್ವಸ್ತುವಿಗೆ) ಅಭಾವಃ (ನಾಶವು) ನ ವಿದ್ಯತೇ (ಇಲ್ಲ) ತು (ಆದರೆ) ತತ್ತ್ವದರ್ಶಿಭಿಃ (ತತ್ತ್ವಜ್ಞರಿಂದ) ಅನಯೋಃ (ಈ) ಉಭಯೋಃ ಅಪಿ (ಎರಡರ) ಅಂತಃ (ನಿರ್ಣಯವು) ದೃಷ್ಟಃ (ತಿಳಿಯಲ್ಪಟ್ಟಿರುತ್ತದೆ).

೧೬. ಅಸದ್ವಸ್ತುವಿಗೆ[1] ಅಸ್ತಿತ್ವವಿಲ್ಲ. ಸದ್ವಸ್ತುವಿಗೆ[2] ನಾಶವಿಲ್ಲ. ಇವೆರಡರ ನಿರ್ಣಯವನ್ನು ತತ್ತ್ವಜ್ಞರು ತಿಳಿದಿರುತ್ತಾರೆ.

1 ಕಾರಣವುಳ್ಳ ಶೀತೋಷ್ಣಾದಿಗಳು (ಶ್ರೀಶಂಕರ). ಅಚೇತನರೂಪವಾದ ದೇಹ (ಶ್ರೀರಾಮಾನುಜ).

2 ಆತ್ಮಾ.

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭ ॥**

ಯೇನ (ಯಾವುದರಿಂದ) ಇದಂ (ಈ) ಸರ್ವಂ (ಎಲ್ಲವೂ) ತತಂ (ವ್ಯಾಪ್ತವಾಗಿದೆಯೋ) ತತ್ ತು (ಅದನ್ನು) ಅವಿನಾಶಿ (ವಿನಾಶರಹಿತವೆಂದು) ವಿದ್ಧಿ (ತಿಳಿದುಕೊ) ಅಸ್ಯ (ಈ) ಅವ್ಯಯಸ್ಯ (ಅವ್ಯಯದ) ವಿನಾಶಂ (ವಿನಾಶವನ್ನು) ಕರ್ತುಂ (ಮಾಡಲು) ಕಶ್ಚಿತ್ (ಯಾವನೂ) ನ ಅರ್ಹತಿ (ಸಮರ್ಥನಾಗುವುದಿಲ್ಲ).

೧೭. ಯಾವುದರಿಂದ[1] ಇದೆಲ್ಲವೂ[2] ವ್ಯಾಪ್ತವಾಗಿದೆಯೋ ಅದನ್ನು ವಿನಾಶರಹಿತವೆಂದು ತಿಳಿದುಕೊ. ಈ ಅವ್ಯಯದ ವಿನಾಶವನ್ನು ಮಾಡಲು ಯಾವನೂ ಸಮರ್ಥನಾಗುವುದಿಲ್ಲ.

1 ಆತ್ಮವಸ್ತುವಿನಿಂದ.

2 ಇಡೀ ಜಗತ್ತು.

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ ಯುಧ್ಯಸ್ವ ಭಾರತ ॥ ೧೮ ॥**

ನಿತ್ಯಸ್ಯ (ನಿತ್ಯವೂ) ಅನಾಶಿನಃ (ಅವಿನಾಶಿಯೂ) ಅಪ್ರಮೇಯಸ್ಯ (ಅಪ್ರಮೇಯನೂ) ಶರೀರಿಣಃ (ಆತ್ಮನ) ಇಮೇ (ಈ) ದೇಹಾಃ (ದೇಹಗಳು) ಅಂತವಂತಃ (ಅಂತವುಳ್ಳವುಗಳು, ನಶ್ವರವಾದುವು) ಉಕ್ತಾಃ (ಹೇಳಲ್ಪಟ್ಟಿವೆ) ಭಾರತ (ಎಲೈ ಅರ್ಜುನನೆ) ತಸ್ಮಾತ್ (ಆದುದರಿಂದ) ಯುಧ್ಯಸ್ವ (ಯುದ್ಧಮಾಡು).

೧೮. ನಿತ್ಯನೂ ಅವಿನಾಶಿಯೂ ಅಪ್ರಮೇಯನೂ[1] ಆದ ಆತ್ಮನ ಈ ದೇಹಗಳು ನಶ್ವರವಾದುವೆಂದು (ಜ್ಞಾನಿಗಳು) ಹೇಳುತ್ತಾರೆ. ಆದುದರಿಂದ ಎಲೈ ಅರ್ಜುನ, ಯುದ್ಧಮಾಡು.

1 ಪ್ರತ್ಯಕ್ಷಾದಿಪ್ರಮಾಣಗಳ ಮೂಲಕ ಗ್ರಹಿಸಲು ಸಾಧ್ಯವಲ್ಲದವನು.

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥**

ಯಃ (ಯಾವನು) ಏನಂ (ಈತನನ್ನು) ಹಂತಾರಂ (ಕೊಲ್ಲುವವನನ್ನಾಗಿ) ವೇತ್ತಿ (ತಿಳಿಯುತ್ತಾನೋ) ಯಃ ಚ (ಮತ್ತು ಯಾವನು) ಏನಂ (ಈತನನ್ನು) ಹತಃ (ಕೊಲ್ಲಲ್ಪಟ್ಟವನನ್ನಾಗಿ) ಮನ್ಯತೇ (ಭಾವಿಸುತ್ತಾನೋ) ತೌ ಉಭೌ (ಆ ಇಬ್ಬರೂ) ನ ವಿಜಾನೀತಃ (ಅರಿಯರು) ಅಯಂ (ಈ ಆತ್ಮನು) ನ ಹಂತಿ (ಕೊಲ್ಲುವುದಿಲ್ಲ) ನ ಹನ್ಯತೇ (ಕೊಲ್ಲಲ್ಪಡುವುದೂ ಇಲ್ಲ).

೧೯. ಈತನು[1] ಕೊಲ್ಲುವವನೆಂದು ಯಾವನು ತಿಳಿಯುತ್ತಾನೋ ಮತ್ತು ಈತನು ಕೊಲ್ಲಲ್ಪಟ್ಟವನೆಂದು ಯಾವನು ಭಾವಿಸುತ್ತಾನೋ—ಆ ಇಬ್ಬರೂ ಅರಿಯರು. ಈ ಆತ್ಮನು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವುದೂ ಇಲ್ಲ.

[1] ಮೇಲೆ ಹೇಳಿದ ಸ್ವಭಾವವುಳ್ಳ ಆತ್ಮನು.

**ನ ಜಾಯತೇ ಮ್ರಿಯತೇ ವಾ ಕದಾಚಿತ್**
**ನಾಯಂ ಭೂತ್ವಾಽಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥**

ಅಯಂ (ಈತನು) ಕದಾಚಿತ್ (ಯಾವಾಗಲೂ) ನ ಜಾಯತೇ (ಹುಟ್ಟುವುದೂ ಇಲ್ಲ) ನ ವಾ ಮ್ರಿಯತೇ (ಸಾಯುವುದೂ ಇಲ್ಲ) [ಏಕೆಂದರೆ] ಭೂತ್ವಾ (ಉತ್ಪನ್ನನಾಗಿ) ಭೂಯಃ (ಪುನಃ) ಅಭವಿತಾ ನ (ಇಲ್ಲದಿರುವುದೂ ಇಲ್ಲ) ಅಯಂ (ಈತನು) ಅಜಃ (ಜನ್ಮರಹಿತನು) ನಿತ್ಯಃ (ನಿತ್ಯನು) ಶಾಶ್ವತಃ (ಶಾಶ್ವತನು) ಪುರಾಣಃ (ಪುರಾಣನು) ಶರೀರೇ (ಶರೀರವು) ಹನ್ಯಮಾನೇ (ನಾಶವಾಗುತ್ತಿದ್ದರೂ) ನ ಹನ್ಯತೇ (ನಾಶವಾಗುವುದಿಲ್ಲ).

೨೦. ಈತನು ಯಾವಾಗಲೂ ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಈತನು (ಹಿಂದೆ) ಉತ್ಪನ್ನನಾಗಿ[1] ಪುನಃ ಇಲ್ಲದಿರುವುದೂ ಇಲ್ಲ. ಈತನು ಜನ್ಮರಹಿತನು ನಿತ್ಯನು ಶಾಶ್ವತನು[2] ಪುರಾಣನು;[3] ಶರೀರವು ನಾಶವಾಗುತ್ತಿದ್ದರೂ ನಾಶವಾಗುವುದಿಲ್ಲ.

[1] 'ಇರುವಿಕೆ' ಎಂಬ ಕ್ರಿಯೆಯನ್ನು (ವಿಕಾರ) ಅನುಭವಿಸಿ ಪುನಃ ಅಭಾವವನ್ನು ಹೊಂದುವುದಿಲ್ಲ.

[2] ಯಾವಾಗಲೂ ಇರುವವನು. 'ಅಪಕ್ಷಯ' ಎಂಬ ವಿಕಾರವಿಲ್ಲ.

[3] ಅನಾದಿಕಾಲದಿಂದ ಇದ್ದರೂ ಹೊಸಬನು. 'ವೃದ್ಧಿ' ಎಂಬ ವಿಕಾರವಿಲ್ಲ.

[ಗೀತೆಯು ಶೋಕಮೋಹಾದಿ ಸಂಸಾರಕಾರಣಗಳನ್ನು ನಾಶಮಾಡುವುದಕ್ಕೆ ಇರುವುದೇ ಹೊರತು ಕರ್ಮಮಾರ್ಗದಲ್ಲಿ ಜನರನ್ನು ಪ್ರವರ್ತಿಸುವುದಕ್ಕಲ್ಲ ಎಂಬ ಅರ್ಥಕ್ಕೆ ಸಾಕ್ಷಿಯಾಗಿ ಭಗವಂತನು ಈ ಮೇಲೆ ಹೇಳಿದ ಎರಡು ಋಕ್ಕುಗಳನ್ನು (ಕಠೋಪನಿಷತ್ ೧-೨-೧೮, ೧೯) ಹೇಳಿರುತ್ತಾನೆ—ಶ್ರೀಶಂಕರ.]

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥ ೨೧ ॥**

ಯಃ (ಯಾವನು) ಏನಂ (ಈ ಆತ್ಮನನ್ನು) ಅವಿನಾಶಿನಂ (ಅವಿನಾಶಿಯು) ನಿತ್ಯಂ (ನಿತ್ಯನು) ಅಜಂ (ಜನ್ಮರಹಿತನು) ಅವ್ಯಯಂ (ಕ್ಷಯವಿಲ್ಲದವನು) ವೇದ (ತಿಳಿದಿರುವನೋ) ಸಃ ಪುರುಷಃ (ಆ ಪುರುಷನು) ಕಥಂ (ಹೇಗೆ) ಕಂ (ಯಾರನ್ನು) ಘಾತಯತಿ (ಕೊಲ್ಲಿಸುತ್ತಾನೆ) ಕಂ (ಯಾರನ್ನು) ಹಂತಿ (ಕೊಲ್ಲುತ್ತಾನೆ).

೨೧. ಎಲೈ ಪಾರ್ಥ, ಈ ಆತ್ಮನು ಅವಿನಾಶಿಯು ನಿತ್ಯನು ಜನ್ಮರಹಿತನು ಕ್ಷಯವಿಲ್ಲದವನು ಎಂದು ಯಾವನು ತಿಳಿದಿರುವನೋ ಆ ಪುರುಷನು ಯಾರನ್ನು ಹೇಗೆ ಕೊಲ್ಲಿಸುತ್ತಾನೆ, ಯಾರನ್ನು ಹೇಗೆ ಕೊಲ್ಲುತ್ತಾನೆ?

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

ಯಥಾ (ಹೇಗೆ) ನರಃ (ಮನುಷ್ಯನು) ಜೀರ್ಣಾನಿ (ಹಳೆಯ) ವಾಸಾಂಸಿ (ಬಟ್ಟೆಗಳನ್ನು) ವಿಹಾಯ (ಬಿಟ್ಟು) ಅಪರಾಣಿ (ಬೇರೆ) ನವಾನಿ (ಹೊಸ ವಸ್ತ್ರಗಳನ್ನು) ಗೃಹ್ಣಾತಿ (ತೆಗೆದುಕೊಳ್ಳುತ್ತಾನೋ) ತಥಾ (ಹಾಗೆಯೇ) ದೇಹೀ (ದೇಹವನ್ನು ಹೊಂದಿರುವ ಆತ್ಮನು) ಜೀರ್ಣಾನಿ (ಜೀರ್ಣವಾದ) ಶರೀರಾಣಿ (ಶರೀರಗಳನ್ನು) ವಿಹಾಯ (ಬಿಟ್ಟು) ಅನ್ಯಾನಿ (ಬೇರೆ) ನವಾನಿ (ಹೊಸ ಶರೀರಗಳನ್ನು) ಸಂಯಾತಿ (ಹೊಂದುತ್ತಾನೆ).

೨೨. ಮನುಷ್ಯನು ಹಳೆಯ ಬಟ್ಟೆಗಳನ್ನು ಹೇಗೆ ಬಿಟ್ಟು ಬೇರೆ ಹೊಸ ವಸ್ತ್ರಗಳನ್ನು ತೆಗೆದುಕೊಳ್ಳುತ್ತಾನೋ, ಹಾಗೆಯೇ ದೇಹವನ್ನು ಹೊಂದಿರುವ ಆತ್ಮನು ಜೀರ್ಣವಾದ ಶರೀರಗಳನ್ನು ಬಿಟ್ಟು ಬೇರೆ ಹೊಸ ಶರೀರಗಳನ್ನು ಹೊಂದುತ್ತಾನೆ.

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೨೩ ॥**

ಶಸ್ತ್ರಾಣಿ (ಶಸ್ತ್ರಗಳು) ಏನಂ (ಈ ಆತ್ಮನನ್ನು) ನ ಛಿಂದಂತಿ (ಕತ್ತರಿಸಲಾರವು) ಪಾವಕಃ (ಅಗ್ನಿಯು) ಏನಂ (ಈತನನ್ನು) ನ ದಹತಿ (ಸುಡಲಾರದು) ಆಪಃ (ನೀರು) ಏನಂ (ಈತನನ್ನು) ನ ಕ್ಲೇದಯಂತಿ (ನೆನೆಯಿಸಲಾರದು) ಚ ಮಾರುತಃ (ಮತ್ತು ಗಾಳಿಯು) [ಈತನನ್ನು] ನ ಶೋಷಯತಿ (ಒಣಗಿಸಲಾರದು).

**೨೩.** ಈ ಆತ್ಮನನ್ನು ಶಸ್ತ್ರಗಳು ಕತ್ತರಿಸಲಾರವು, ಈತನನ್ನು ಅಗ್ನಿಯು ಸುಡಲಾರದು, ಈತನನ್ನು ನೀರು ನೆನೆಯಿಸಲಾರದು ಮತ್ತು ಗಾಳಿಯು ಒಣಗಿಸಲಾರದು.

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥**

ಅಯಂ (ಈ ಆತ್ಮನು) ಅಚ್ಛೇದ್ಯಃ (ಕತ್ತರಿಸಲಾಗದವನು) ಅಯಂ (ಈತನು) ಅದಾಹ್ಯಃ (ದಹಿಸಲಾಗದವನು) ಅಕ್ಲೇದ್ಯಃ (ನೆನೆಯಿಸಲಾಗದವನು) ಅಶೋಷ್ಯಃ ಚ ಏವ (ಒಣಗಿಸಲೂ ಸಹ ಆಗದವನು); ಅಯಂ (ಈತನು) ನಿತ್ಯಃ (ನಿತ್ಯನು) ಸರ್ವಗತಃ (ಸರ್ವಗತನು) ಸ್ಥಾಣುಃ (ಸ್ಥಿರನು) ಅಚಲಃ (ಅಚಲನು) ಸನಾತನಃ (ಸನಾತನನು).

**೨೪.** ಈ ಆತ್ಮನು ಕತ್ತರಿಸಲಾಗದವನು, ದಹಿಸಲಾಗದವನು, ನೆನೆಯಿಸಲಾಗದವನು ಮತ್ತು ಒಣಗಿಸಲೂ ಸಹ ಆಗದವನು; ಈತನು ನಿತ್ಯನು ಸರ್ವಗತನು ಸ್ಥಿರನು ಅಚಲನು ಸನಾತನನು.

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥**

ಅಯಂ (ಈ ಆತ್ಮನು) ಅವ್ಯಕ್ತಃ (ಅವ್ಯಕ್ತನು) ಅಯಂ (ಈತನು) ಅಚಿಂತ್ಯಃ (ಅಚಿಂತ್ಯನು) ಅಯಂ (ಈತನು) ಅವಿಕಾರ್ಯಃ (ವಿಕಾರರಹಿತನು) ಉಚ್ಯತೇ (ಹೇಳಲ್ಪಟ್ಟಿರುತ್ತಾನೆ) ತಸ್ಮಾತ್ (ಆದುದರಿಂದ) ಏನಂ (ಈತನನ್ನು) ಏವಂ (ಹೀಗೆ) ವಿದಿತ್ವಾ (ತಿಳಿದುಕೊಂಡು) ಅನುಶೋಚಿತುಂ (ಶೋಕಿಸಲು) [ನೀನು] ನ ಅರ್ಹಸಿ (ಯೋಗ್ಯನಲ್ಲವು).

೨೫. ಈ ಆತ್ಮನು ಅವ್ಯಕ್ತನು[1] ಅಚಿಂತ್ಯನು[2] ವಿಕಾರರಹಿತನು ಎಂದು ಹೇಳಲ್ಪಟ್ಟಿರುತ್ತಾನೆ. ಆದುದರಿಂದ ಈತನನ್ನು ಹೀಗೆ ತಿಳಿದು ಕೊಂಡು ನೀನು ಶೋಕಿಸಬಾರದು.

[1] ಯಾವ ಕರಣಗಳಿಗೂ ವಿಷಯನಲ್ಲವಾದುದರಿಂದ ಅವ್ಯಕ್ತನು.
[2] ಯಾವ ಇಂದ್ರಿಯಗಳಿಗೂ ಗೋಚರನಲ್ಲವಾದುದರಿಂದ ಅಚಿಂತ್ಯನು.

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥ ೨೬ ॥**

ಅಥ ಚ (ಒಂದು ಪಕ್ಷ) ತ್ವಂ (ನೀನು) ಏನಂ (ಈ ಆತ್ಮನನ್ನು) ನಿತ್ಯಜಾತಂ (ಯಾವಾಗಲೂ ಹುಟ್ಟುತ್ತಿರುವನೆಂದೂ) ವಾ ನಿತ್ಯಂ ಮೃತಂ (ಅಥವಾ ಯಾವಾಗಲೂ ಸಾಯುತ್ತಿರುವನೆಂದೂ) ಮನ್ಯಸೇ (ತಿಳಿಯುವೆಯಾದರೆ) ತಥಾಪಿ (ಆಗಲೂ ಕೂಡ) ಮಹಾಬಾಹೋ (ಎಲೈ ಮಹಾಬಾಹುವೆ) ಏವಂ (ಹೀಗೆ) ಶೋಚಿತುಂ (ಶೋಕಿಸಲು) ನ ಅರ್ಹಸಿ (ಯೋಗ್ಯನಲ್ಲವು).

೨೬. ಒಂದು ಪಕ್ಷ ಈ ಆತ್ಮನು ಯಾವಾಗಲೂ ಹುಟ್ಟುತ್ತಿರುವನೆಂದೂ ಅಥವಾ ಯಾವಾಗಲೂ ಸಾಯುತ್ತಿರುವನೆಂದೂ ನೀನು ತಿಳಿಯುವೆಯಾದರೆ, ಎಲೈ ಮಹಾಬಾಹುವೆ, ಆಗಲೂ ಕೂಡ ಹೀಗೆ ಶೋಕಿಸಬಾರದು.

[ದೇಹಾತ್ಮವಾದಿಯ ದೃಷ್ಟಿಯಿಂದ ಆತ್ಮನು ಶರೀರದೊಂದಿಗೆ ಹುಟ್ಟುವನು ಶರೀರದೊಂದಿಗೆ ನಾಶವಾಗುವನೆಂದು ಭಾವಿಸಿದರೂ ಶೋಕಕ್ಕೆ ಕಾರಣವಿಲ್ಲ; ಏಕೆಂದರೆ ದೇಹಕ್ಕೆ ಜನನಮರಣಾದಿಗಳು ಸ್ವಾಭಾವಿಕವಾಗಿರುತ್ತವೆ. ಮುಂದಿನ ಎರಡು ಶ್ಲೋಕಗಳಲ್ಲಿಯೂ ಈ ಯುಕ್ತಿಯನ್ನೇ ನೋಡಬಹುದು.]

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥**

ಹಿ (ಏಕೆಂದರೆ) ಜಾತಸ್ಯ (ಹುಟ್ಟಿದವನಿಗೆ) ಮೃತ್ಯುಃ (ಮರಣವು) ಧ್ರುವಃ (ನಿಶ್ಚಯವು) ಮೃತಸ್ಯ ಚ (ಮತ್ತು ಸತ್ತವನಿಗೂ) ಜನ್ಮ (ಜನ್ಮವು) ಧ್ರುವಂ (ನಿಶ್ಚಯವು) ತಸ್ಮಾತ್ (ಆದುದರಿಂದ) ಅಪರಿಹಾರ್ಯೇ (ಪರಿಹರಿಸಲಾಗದ, ಅವಶ್ಯಂಭಾವೀ) ಅರ್ಥೇ (ವಿಷಯದಲ್ಲಿ) ತ್ವಂ (ನೀನು) ಶೋಚಿತುಂ (ಶೋಕಿಸಲು) ನ ಅರ್ಹಸಿ (ಯೋಗ್ಯನಲ್ಲವು).

೨೭. ಏಕೆಂದರೆ ಹುಟ್ಟಿದವನಿಗೆ ಮರಣವು ನಿಶ್ಚಯವು ಮತ್ತು ಸತ್ತವನಿಗೆ ಜನ್ಮವು ನಿಶ್ಚಯವು. ಆದುದರಿಂದ ಪರಿಹರಿಸಲಾಗದ ಈ ವಿಷಯದಲ್ಲಿ ನೀನು ಶೋಕಿಸಬಾರದು.

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**

ಭಾರತ (ಎಲೈ ಅರ್ಜುನನೆ) ಭೂತಾನಿ (ಪ್ರಾಣಿಗಳು) ಅವ್ಯಕ್ತ-ಆದೀನಿ (ಅವ್ಯಕ್ತವಾದ ಆದಿಯುಳ್ಳವುಗಳು) ವ್ಯಕ್ತಮಧ್ಯಾನಿ (ವ್ಯಕ್ತವಾದ ಮಧ್ಯವುಳ್ಳವುಗಳು) ಅವ್ಯಕ್ತನಿಧನಾನಿ ಏವ (ಅವ್ಯಕ್ತವಾದ ನಿಧನವುಳ್ಳವುಗಳು) ತತ್ರ (ಈ ಸಂದರ್ಭದಲ್ಲಿ) ಕಾ ಪರಿದೇವನಾ (ಶೋಕವೇನು?)

೨೮. ಎಲೈ ಅರ್ಜುನ, ಪ್ರಾಣಿಗಳು ಹುಟ್ಟುವುದಕ್ಕೆ ಮೊದಲು ಕಾಣಿಸುವುದಿಲ್ಲ, ಮಧ್ಯದಲ್ಲಿ ಹುಟ್ಟಿದ ನಂತರ ಕಾಣಿಸುತ್ತವೆ, ನಾಶವಾದ ಮೇಲೆ ಕೂಡ ಕಾಣಿಸುವುದಿಲ್ಲ; ಈ ಸಂದರ್ಭದಲ್ಲಿ ಶೋಕವೇನು?

**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನ-**
**ಮಾಶ್ಚರ್ಯವದ್ ವದತಿ ತಥೈವ ಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ**
**ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯ ॥**

ಕಶ್ಚಿತ್ (ಒಬ್ಬನು) ಏನಂ (ಈ ಆತ್ಮನನ್ನು) ಆಶ್ಚರ್ಯವತ್ (ಆಶ್ಚರ್ಯದ ಹಾಗೆ) ಪಶ್ಯತಿ (ನೋಡುತ್ತಾನೆ) ತಥಾ ಏವ ಚ (ಹಾಗೆಯೇ) ಅನ್ಯಃ (ಇನ್ನೊಬ್ಬನು) ಆಶ್ಚರ್ಯವತ್ (ಆಶ್ಚರ್ಯದ ಹಾಗೆ) ವದತಿ (ಹೇಳುತ್ತಾನೆ) ಅನ್ಯಃ ಚ (ಮತ್ತೊಬ್ಬನು) ಏನಂ (ಇವನನ್ನು) ಆಶ್ಚರ್ಯವತ್ (ಆಶ್ಚರ್ಯದ ಹಾಗೆ) ಶೃಣೋತಿ (ಕೇಳುತ್ತಾನೆ) ಕಶ್ಚಿತ್ ಚ (ಮತ್ತು ಬೇರೊಬ್ಬನು) ಏನಂ (ಇವನನ್ನು) ಶ್ರುತ್ವಾ ಅಪಿ (ಕೇಳಿದರೂ) ನ ಏವ ವೇದ (ತಿಳಿಯುಲೇ ಇಲ್ಲ).

೨೯. ಒಬ್ಬನು ಈ ಆತ್ಮನನ್ನು ಆಶ್ಚರ್ಯದಂತೆ ನೋಡುತ್ತಾನೆ, ಹಾಗೆಯೇ ಇನ್ನೊಬ್ಬನು ಆಶ್ಚರ್ಯದಂತೆ ಹೇಳುತ್ತಾನೆ, ಮತ್ತೊಬ್ಬನು ಇವನನ್ನು ಆಶ್ಚರ್ಯದಂತೆ ಕೇಳುತ್ತಾನೆ ಮತ್ತು ಬೇರೊಬ್ಬನು ಇವನನ್ನು ಕೇಳಿದರೂ ಅರಿಯಲೇ ಇಲ್ಲ.

[ಆತ್ಮನನ್ನು ಯಥಾರ್ಥವಾಗಿ ತಿಳಿದುಕೊಳ್ಳುವುದು ಕಷ್ಟವೆಂದು ಭಾವವು.]

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥**

ಭಾರತ (ಎಲೈ ಅರ್ಜುನನೆ) ಅಯಂ (ಈ) ದೇಹೀ (ಆತ್ಮನು) ಸರ್ವಸ್ಯ (ಎಲ್ಲರ) ದೇಹೇ (ದೇಹದಲ್ಲಿಯೂ) ನಿತ್ಯಂ (ಸರ್ವದಾ) ಅವಧ್ಯಃ (ಅವಧ್ಯನು) ತಸ್ಮಾತ್ (ಆದುದರಿಂದ) ತ್ವಂ (ನೀನು) ಸರ್ವಾಣಿ (ಸಮಸ್ತ) ಭೂತಾನಿ (ಪ್ರಾಣಿಗಳನ್ನು ಕುರಿತು) ಶೋಚಿತುಂ (ಶೋಕಿಸಲು) ನ ಅರ್ಹಸಿ (ಯೋಗ್ಯನಲ್ಲವು).

೩೦. ಎಲೈ ಅರ್ಜುನ, ಎಲ್ಲರ ದೇಹದಲ್ಲಿಯೂ ಇರುವ ಈ ಆತ್ಮನು ಎಂದಿಗೂ ನಾಶವಾಗುವುದಿಲ್ಲ; ಆದುದರಿಂದ ನೀನು ಸಮಸ್ತ ಪ್ರಾಣಿಗಳನ್ನು ಕುರಿತು ಶೋಕಿಸಬಾರದು.

[ಈ ಪ್ರಕರಣದ ಅರ್ಥವು ಈ ಶ್ಲೋಕದಲ್ಲಿ ಉಪಸಂಹಾರವಾಗಿದೆ.]

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥ ೩೧ ॥**

ಸ್ವಧರ್ಮಂ ಅಪಿ ಚ (ಮತ್ತು ಸ್ವಧರ್ಮವನ್ನು ಕೂಡ) ಅವೇಕ್ಷ್ಯ (ಲಕ್ಷಿಸಿ, ನೋಡಿ) ವಿಕಂಪಿತುಂ (ಭಯಪಡಲು) ನ ಅರ್ಹಸಿ (ಯೋಗ್ಯನಲ್ಲವು) ಹಿ (ಏಕೆಂದರೆ) ಧರ್ಮ್ಯಾತ್ ಯುದ್ಧಾತ್ (ಧರ್ಮಯುಕ್ತವಾದ ಯುದ್ಧಕ್ಕಿಂತ) ಕ್ಷತ್ರಿಯಸ್ಯ (ಕ್ಷತ್ರಿಯನಿಗೆ) ಅನ್ಯಃ (ಬೇರೆ) ಶ್ರೇಯಃ (ಶ್ರೇಯಸ್ಸು) ನ ವಿದ್ಯತೇ (ಇರುವುದಿಲ್ಲ).

೩೧. ಮತ್ತು ಸ್ವಧರ್ಮವನ್ನು ಲಕ್ಷಿಸಿದರೂ ನೀನು ಭಯಪಡಬಾರದು. ಏಕೆಂದರೆ ಧರ್ಮಯುಕ್ತವಾದ ಯುದ್ಧಕ್ಕಿಂತ ಕ್ಷತ್ರಿಯನಿಗೆ ಬೇರೆ ಯಾವ ಶ್ರೇಯಸ್ಸೂ ಇರುವುದಿಲ್ಲ.

[ಪರಮಾರ್ಥದೃಷ್ಟಿಯಿಂದ ಶೋಕಮೋಹಗಳು ಅಸಂಭವವೆಂದು ಹಿಂದಿನ ಶ್ಲೋಕದಲ್ಲಿ ಹೇಳಿದ್ದಾಯಿತು. ಸ್ವಧರ್ಮದ ಎಂದರೆ ಕ್ಷತ್ರಿಯಧರ್ಮದ ದೃಷ್ಟಿಯಿಂದಲೂ ಶೋಕಕ್ಕೆ ಕಾರಣವಿಲ್ಲವೆಂದು ಇಲ್ಲಿ ಹೇಳಿದೆ.]

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥ ೩೨ ॥**

ಪಾರ್ಥ (ಎಲೈ ಅರ್ಜುನನೆ) ಸುಖಿನಃ (ಭಾಗ್ಯಶಾಲಿಗಳಾದ) ಕ್ಷತ್ರಿಯಾಃ (ಕ್ಷತ್ರಿಯರು) ಯದೃಚ್ಛಯಾ (ಅಪ್ರಾರ್ಥಿತವಾಗಿ) ಉಪಪನ್ನಂ ಚ (ಬಂದಿರುವ)

ಅಪಾವೃತಂ (ತೆರೆದಿರುವ) ಸ್ವರ್ಗದ್ವಾರಂ (ಸ್ವರ್ಗದ ಬಾಗಿಲಾಗಿರುವ) ಈದೃಶಂ (ಇಂತಹ) ಯುದ್ಧಂ (ಯುದ್ಧವನ್ನು) ಲಭಂತೇ (ಪಡೆಯುತ್ತಾರೆ).

**೩೨.** ಎಲೈ ಅರ್ಜುನ, ಅಪ್ರಾರ್ಥಿತವಾಗಿ ಬಂದಿರುವ ಮತ್ತು ತೆರೆದಿರುವ ಸ್ವರ್ಗದ ಬಾಗಿಲಾಗಿರುವ ಇಂತಹ ಯುದ್ಧವನ್ನು ಭಾಗ್ಯಶಾಲಿಗಳಾದ ಕ್ಷತ್ರಿಯರು ಪಡೆಯುತ್ತಾರೆ.

**ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ　　॥ ೩೩ ॥**

ಅಥ (ಅನಂತರ, ಹಾಗಿಲ್ಲದೆ) ತ್ವಂ (ನೀನು) ಇಮಂ (ಈ) ಧರ್ಮ್ಯಂ (ಧರ್ಮಯುಕ್ತವಾದ) ಸಂಗ್ರಾಮಂ (ಯುದ್ಧವನ್ನು) ನ ಕರಿಷ್ಯಸಿ ಚೇತ್ (ಮಾಡದಿದ್ದರೆ), ತತಃ (ಅದರಿಂದ, ಆ ಕಾರಣದಿಂದ) ಸ್ವಧರ್ಮಂ (ಸ್ವಧರ್ಮವನ್ನೂ) ಕೀರ್ತಿಂ ಚ (ಮತ್ತು ಕೀರ್ತಿಯನ್ನೂ) ಹಿತ್ವಾ (ಕಳೆದುಕೊಂಡು) ಪಾಪಂ (ಪಾಪವನ್ನು), ಅವಾಪ್ಸ್ಯಸಿ (ಹೊಂದುತ್ತೀಯೆ).

**೩೩.** ಹಾಗಿಲ್ಲದೆ[1] ಈ ಧರ್ಮಯುಕ್ತವಾದ ಯುದ್ಧವನ್ನು ನೀನು ಮಾಡದಿದ್ದರೆ, ಆ ಕಾರಣದಿಂದ ಸ್ವಧರ್ಮವನ್ನೂ ಕೀರ್ತಿಯನ್ನೂ ನಾಶಮಾಡಿಕೊಂಡು ಪಾಪವನ್ನು ಹೊಂದುತ್ತೀಯೆ.

[1] ಧರ್ಮಯುದ್ಧವು ಕ್ಷತ್ರಿಯನಿಗೆ ಸ್ವಧರ್ಮವೆಂದು ತಿಳಿದ ಮೇಲೆಯೂ.

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ　　॥ ೩೪ ॥**

ಅಪಿ ಚ (ಮತ್ತು) ಭೂತಾನಿ (ಜನರು) ತೇ (ನಿನ್ನ) ಅವ್ಯಯಾಂ (ಅಕ್ಷಯವಾದ) ಅಕೀರ್ತಿಂ (ಅಪಕೀರ್ತಿಯನ್ನು) ಕಥಯಿಷ್ಯಂತಿ (ಹೇಳಿಕೊಳ್ಳುವರು), ಸಂಭಾವಿತಸ್ಯ (ಸಂಭಾವಿತನಾದವನಿಗೆ) ಅಕೀರ್ತಿಃ (ಅಪಕೀರ್ತಿಯು) ಮರಣಾತ್ ಚ (ಮರಣಕ್ಕಿಂತಲೂ) ಅತಿರಿಚ್ಯತೇ (ಹೆಚ್ಚಾಗಿರುತ್ತದೆ).

**೩೪.** ಇಷ್ಟೇ ಅಲ್ಲ, ಜನರು ನಿನ್ನ ಅಕ್ಷಯವಾದ ಅಪಕೀರ್ತಿಯನ್ನು ಹೇಳಿಕೊಳ್ಳುವರು; ಸಂಭಾವಿತನಾದ ಮನುಷ್ಯನಿಗೆ ಅಪಕೀರ್ತಿಯು ಮರಣಕ್ಕಿಂತಲೂ ಹೆಚ್ಚಾಗಿರುತ್ತದೆ.

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ**
**ಲಾಘವಮ್　　॥ ೩೫ ॥**

ಮಹಾರಥಾಃ (ಮಹಾರಥಿಕರು) ತ್ವಾಂ (ನಿನ್ನನ್ನು) ಭಯಾತ್ (ಭಯದ ದೆಶೆಯಿಂದ) ರಣಾತ್ (ಯುದ್ಧದಿಂದ) ಉಪರತಂ (ಹಿಮ್ಮೆಟ್ಟಿದವನನ್ನಾಗಿ) ಮಂಸ್ಯಂತೇ (ತಿಳಿಯುವರು) ಚ (ಮತ್ತು) ತ್ವಂ (ನೀನು) ಯೇಷಾಂ (ಯಾವ ಶೂರರಿಗೆ) ಬಹುಮತಃ ಭೂತ್ವಾ (ಬಹುಮಾನ್ಯನಾಗಿದ್ದು) [ಅವರ ಮುಂದೆಯೇ ಈಗ] ಲಾಘವಂ (ಲಾಘವವನ್ನು) ಯಾಸ್ಯಸಿ (ಹೊಂದುತ್ತೀಯೆ).

೩೫. ನೀನು ಭಯಪಟ್ಟು ಯುದ್ಧದಿಂದ ಹಿಮ್ಮೆಟ್ಟಿದೆಯೆಂದು ಮಹಾರಥಿಗಳು ತಿಳಿಯುವರು. ನೀನು ಯಾರಿಗೆ ಬಹುಮಾನ್ಯನಾಗಿದ್ದೆಯೋ (ಅವರ ಮುಂದೆಯೇ ಈಗ) ಲಾಘವವನ್ನು ಹೊಂದುತ್ತೀಯೆ.

**ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥ ೩೬ ॥**

ತವ ಚ (ಮತ್ತು ನಿನ್ನ) ಅಹಿತಾಃ (ಶತ್ರುಗಳು) ತವ (ನಿನ್ನ) ಸಾಮರ್ಥ್ಯಂ (ಸಾಮರ್ಥ್ಯವನ್ನು) ನಿಂದಂತಃ (ನಿಂದಿಸುತ್ತಾ) ಬಹೂನ್ (ಬಹುವಾದ) ಅವಾಚ್ಯವಾದಾನ್ (ಆಡಬಾರದ ಮಾತುಗಳನ್ನು) ವದಿಷ್ಯಂತಿ (ಆಡುವರು) ತತಃ (ಅದಕ್ಕಿಂತ) ದುಃಖತರಂ (ಹೆಚ್ಚು ದುಃಖವುಳ್ಳದ್ದು) ಕಿಂ ನು (ಏನು).

೩೬. ನಿನ್ನ ಶತ್ರುಗಳು ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತಾ ಬಹು ಆಡಬಾರದ ಮಾತುಗಳನ್ನು ಆಡುವರು. ಅದಕ್ಕಿಂತಲೂ ಹೆಚ್ಚು ದುಃಖವುಳ್ಳದ್ದು ಏನು ತಾನೇ ಉಂಟು?

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥**

ಕೌಂತೇಯ (ಎಲೈ ಅರ್ಜುನನೆ) ಹತಃ ವಾ (ಕೊಲ್ಲಲ್ಪಟ್ಟರೆ) ಸ್ವರ್ಗಂ (ಸ್ವರ್ಗವನ್ನು) ಪ್ರಾಪ್ಸ್ಯಸಿ (ಪಡೆಯುವೆ) ಜಿತ್ವಾ ವಾ (ಅಥವಾ ಗೆದ್ದರೆ) ಮಹೀಂ (ಭೂಮಂಡಲವನ್ನು) ಭೋಕ್ಷ್ಯಸೇ (ಅನುಭವಿಸುವೆ) ತಸ್ಮಾತ್ (ಆದುದರಿಂದ) ಯುದ್ಧಾಯ (ಯುದ್ಧವನ್ನು ಮಾಡಲು) ಕೃತನಿಶ್ಚಯಃ (ನಿಶ್ಚಯಿಸಿ) ಉತ್ತಿಷ್ಠ (ಏಳು).

೩೭. ಎಲೈ ಅರ್ಜುನ, ಕೊಲ್ಲಲ್ಪಟ್ಟರೆ ಸ್ವರ್ಗವನ್ನು ಪಡೆಯುವೆ ಅಥವಾ ಗೆದ್ದರೆ ಭೂಮಂಡಲವನ್ನು ಅನುಭವಿಸುವೆ. ಆದುದರಿಂದ ಯುದ್ಧವನ್ನು ಮಾಡಲು ನಿಶ್ಚಯಿಸಿ ಏಳು.

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮ ॥**

ಸುಖದುಃಖೇ (ಸುಖದುಃಖಗಳನ್ನೂ) ಲಾಭಾಲಾಭೌ (ಲಾಭನಷ್ಟಗಳನ್ನೂ) ಜಯಾಜಯೌ (ಜಯಾಪಜಯ:ಗಳನ್ನೂ) ಸಮೇ (ಸಮಾನವಾಗಿ) ಕೃತ್ವಾ (ಮಾಡಿ, ಭಾವಿಸಿ) ತತಃ (ಅನಂತರ) ಯುದ್ಧಾಯ (ಯುದ್ಧಮಾಡಲು) ಯುಜ್ಯಸ್ವ (ಸನ್ನದ್ಧನಾಗು) ಏವಂ (ಹೀಗಾದರೆ, ಈ ರೀತಿ ಮಾಡಿದರೆ) ಪಾಪಂ (ಪಾಪವನ್ನು) ನ ಅವಾಪ್ಸ್ಯಸಿ (ಹೊಂದುವುದಿಲ್ಲ).

೩೮. ಸುಖದುಃಖಗಳನ್ನೂ ಲಾಭನಷ್ಟಗಳನ್ನೂ ಜಯಾಪಜಯಗಳನ್ನೂ ಸಮಾನವಾಗಿ ಭಾವಿಸಿಕೊಂಡು ಅನಂತರ ಯುದ್ಧಮಾಡಲು ಸನ್ನದ್ಧನಾಗು. ಈ ರೀತಿ ಮಾಡಿದರೆ ನೀನು ಪಾಪವನ್ನು ಹೊಂದುವುದಿಲ್ಲ.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥ ೩೯ ॥**

ಪಾರ್ಥ (ಎಲೈ ಅರ್ಜುನನೆ) ಸಾಂಖ್ಯೇ (ಸಾಂಖ್ಯದಲ್ಲಿ) ಏಷಾ (ಈ) ಬುದ್ಧಿಃ (ಜ್ಞಾನವು) ತೇ (ನಿನಗೆ) ಅಭಿಹಿತಾ (ಹೇಳಲ್ಪಟ್ಟಿತು) ತು (ಆದರೆ) ಯೋಗೇ (ಯೋಗದ ವಿಷಯದಲ್ಲಿ) ಇಮಾಂ (ಈ ಮುಂದೆ ಹೇಳುವ ಬುದ್ಧಿಯನ್ನು) ಶೃಣು (ಕೇಳು) ಯಯಾ (ಯಾವ) ಬುದ್ಧ್ಯಾ (ಜ್ಞಾನದಿಂದ) ಯುಕ್ತಃ (ಕೂಡಿದವನಾಗಿ) ಕರ್ಮಬಂಧಂ (ಕರ್ಮರೂಪವಾದ ಬಂಧನವನ್ನು) ಪ್ರಹಾಸ್ಯಸಿ (ತ್ಯಾಗಮಾಡುವೆ).

೩೯. ಎಲೈ ಅರ್ಜುನ, ನಿನಗೆ ಸಾಂಖ್ಯದಲ್ಲಿ[1] ಈ ಬುದ್ಧಿಯು[2] ಹೇಳಲ್ಪಟ್ಟಿತು. ಯೋಗವಿಷಯದಲ್ಲಿ[3] ಇದನ್ನು ಕೇಳು. ಈ (ಕರ್ಮಯೋಗದ) ಜ್ಞಾನದಿಂದ ಕೂಡಿದವನಾದರೆ ನೀನು ಕರ್ಮರೂಪವಾದ ಬಂಧನವನ್ನು ತ್ಯಾಗಮಾಡುವೆ.

[1] ಪರಮಾರ್ಥವಸ್ತುವನ್ನು ವಿವೇಚಿಸಿ ತಿಳಿದುಕೊಳ್ಳುವ ವಿಷಯದಲ್ಲಿ.

[2] ಬುದ್ಧಿ ಎಂದರೆ ಶೋಕ ಮೋಹ ಮುಂತಾದ ಸಂಸಾರಕ್ಕೆ ಹೇತುವಾದ ದೋಷಗಳ ನಾಶಕ್ಕೆ ಕಾರಣವಾದ ಜ್ಞಾನ.

[3] ಯಾವ ಸಂಗವೂ ಇಲ್ಲದೆ ಸುಖದುಃಖಾದಿ ದ್ವಂದ್ವಗಳು ನಾಶವಾದ ನಂತರ ಈಶ್ವರನ ಆರಾಧನಕ್ಕಾಗಿ ಮಾಡುವ ಕರ್ಮಾನುಷ್ಠಾನರೂಪವಾದ ಕರ್ಮಯೋಗ ಮತ್ತು ಸಮಾಧಿಯೋಗಗಳಲ್ಲಿ.

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ ೪೦ ॥**

ಇಹ (ಇಲ್ಲಿ) ಅಭಿಕ್ರಮನಾಶಃ (ಪ್ರಾರಂಭಿಸಿದ ಕರ್ಮದ ನಾಶವು) ನ ಅಸ್ತಿ (ಇರುವುದಿಲ್ಲ) ಪ್ರತ್ಯವಾಯಃ ಚ (ಮತ್ತು ವೈಗುಣ್ಯದ ದೋಷವೂ) ನ ವಿದ್ಯತೇ (ಇರುವುದಿಲ್ಲ) ಅಸ್ಯ (ಈ) ಧರ್ಮಸ್ಯ (ಧರ್ಮದ) ಸ್ವಲ್ಪಂ ಅಪಿ (ಸ್ವಲ್ಪ ಮಾತ್ರವಾದರೂ) ಮಹತಃ ಭಯಾತ್ (ಮಹಾ ಭಯದಿಂದ) ತ್ರಾಯತೇ (ಕಾಪಾಡುತ್ತದೆ).

೪೦. ಈ ನಿಷ್ಕಾಮಕರ್ಮಯೋಗದಲ್ಲಿ ಪ್ರಾರಂಭಿಸಿದ ಕರ್ಮವು ನಾಶವಾಗುವುದಿಲ್ಲ; ಪ್ರಾರಂಭಿಸಿ ಬಿಟ್ಟುದುದಕ್ಕಾಗಿ ಯಾವ ದೋಷವೂ ಉಂಟಾಗುವುದಿಲ್ಲ. ಈ ಕರ್ಮಯೋಗವೆಂಬ ಧರ್ಮದ ಸ್ವಲ್ಪವಾದ ಅನುಷ್ಠಾನವೂ ಕೂಡ ಮಹಾಭಯದಿಂದ ಕಾಪಾಡುತ್ತದೆ.

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥ ೪೧ ॥**

ಕುರುನಂದನ (ಎಲೈ ಅರ್ಜುನನೆ) ಇಹ (ಇಲ್ಲಿ, ಈ ಕರ್ಮಯೋಗದಲ್ಲಿ) ವ್ಯವಸಾಯಾತ್ಮಿಕಾ (ನಿಶ್ಚಯಸ್ವಭಾವವುಳ್ಳ) ಬುದ್ಧಿಃ (ಬುದ್ಧಿ, ಜ್ಞಾನ) ಏಕಾ ಹಿ (ಏಕನಿಷ್ಠವಾಗಿರುತ್ತದೆ) ಅವ್ಯವಸಾಯಿನಾಂ (ನಿಶ್ಚಯಸ್ವಭಾವವಿಲ್ಲದವರ) ಬುದ್ಧಯಃ (ಬುದ್ಧಿಗಳು) ಬಹುಶಾಖಾಃ (ಅನೇಕ ಶಾಖೆಗಳುಳ್ಳವಾಗಿಯೂ) ಅನಂತಾಃ ಚ (ಅನಂತವಾಗಿಯೂ) [ಇರುತ್ತವೆ].

೪೧. ಎಲೈ ಅರ್ಜುನ, ಈ ಕರ್ಮಯೋಗದಲ್ಲಿ ನಿಶ್ಚಯಸ್ವಭಾವವುಳ್ಳ ಬುದ್ಧಿಯು[1] ಏಕನಿಷ್ಠವಾಗಿರುತ್ತದೆ. ನಿಶ್ಚಯಸ್ವಭಾವವಿಲ್ಲದವರ[2] ಬುದ್ಧಿಗಳು ಅನೇಕ ಶಾಖೆಗಳುಳ್ಳವಾಗಿಯೂ ಅನಂತವಾಗಿಯೂ ಇರುತ್ತವೆ.

[1] ವೇದಾಂತವಾಕ್ಯವೆಂಬ ಸಮ್ಯಕ್ಪ್ರಮಾಣದಿಂದ ಈ ಜ್ಞಾನವು ಉಂಟಾಗುತ್ತದೆ; ಕವಲುಕವಲಾಗಿ ಒಡೆದಿರುವ ಇತರ ವಿಪರೀತಜ್ಞಾನಗಳನ್ನು ಇದು ಬಾಧಿಸುತ್ತದೆ.

[2] ವೇದಾಂತಪ್ರಮಾಣದ ಅಭಾವದಿಂದ ವಿವೇಕಜ್ಞಾನವಿಲ್ಲದವರ.

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨ ॥**
**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩ ॥**
**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥**

ಪಾರ್ಥ (ಎಲೈ ಅರ್ಜುನನೆ) ಅವಿಪಶ್ಚಿತಃ (ಅವಿವೇಕಿಗಳೂ) ವೇದವಾದರತಾಃ (ವೇದವಾದಗಳಲ್ಲಿ ಆಸಕ್ತರೂ) ಅನ್ಯತ್ ನ ಅಸ್ತಿ ಇತಿ ವಾದಿನಃ (ಮತ್ತೇನೂ ಇಲ್ಲ ವೆಂದು ವಾದಿಸುವವರೂ) ಕಾಮಾತ್ಮಾನಃ (ಕಾಮಾತ್ಮರೂ) ಸ್ವರ್ಗಪರಾಃ (ಸ್ವರ್ಗವೇ ಮುಖ್ಯವೆಂದು ಭಾವಿಸುವವರೂ [ಆದ ಜನರು]) ಜನ್ಮಕರ್ಮ–ಫಲಪ್ರದಾಂ (ಜನ್ಮ ಕರ್ಮಫಲಗಳನ್ನು ಕೊಡುವ) ಭೋಗೈಶ್ವರ್ಯಗತಿಂ ಪ್ರತಿ (ಭೋಗ ಮತ್ತು ಐಶ್ವರ್ಯ ಗಳನ್ನು ಹೊಂದುವುದಕ್ಕೆ ಉಪಾಯವಾದ) ಕ್ರಿಯಾವಿಶೇಷ–ಬಹುಲಾಂ (ವಿವಿಧ ಕ್ರಿಯಾಕಲಾಪಗಳಿಂದ ಕೂಡಿದ) ಯಾಂ (ಯಾವ) ಇಮಾಂ (ಈ) ಪುಷ್ಪಿತಾಂ (ಆಪಾತಮನೋಹರವಾದ) ವಾಚಂ (ಮಾತನ್ನು) ಪ್ರವದಂತಿ (ನುಡಿಯುತ್ತಾರೋ) ತಯಾ (ಆ ಮಾತಿನಿಂದ) ಅಪಹೃತಚೇತಸಾಂ (ಅಪಹರಿಸಲ್ಪಟ್ಟ ಮನಸ್ಸುಳ್ಳವರಾಗಿ) ಭೋಗೈಶ್ವರ್ಯಪ್ರಸಕ್ತಾನಾಂ (ಭೋಗೈಶ್ವರ್ಯಗಳಲ್ಲಿ ಆಸಕ್ತರಾಗಿರುವವರಿಗೆ) ವ್ಯವಸಾಯಾತ್ಮಿಕಾ ಬುದ್ಧಿಃ (ನಿಶ್ಚಯಸ್ವಭಾವವುಳ್ಳ ಬುದ್ಧಿಯು) ಸಮಾಧೌ (ಮನಸ್ಸಿನಲ್ಲಿ) ನ ವಿಧೀಯತೇ (ಉಂಟಾಗಲಾರದು).

೪೨–೪೪. ಎಲೈ ಅರ್ಜುನ, ಅವಿವೇಕಿಗಳೂ (ಕರ್ಮಫಲಗಳನ್ನು ತಿಳಿಸುವ) ವೇದವಾಕ್ಯಗಳಲ್ಲಿ ಆಸಕ್ತರೂ[1] (ಐಹಿಕ ಫಲಗಳಿಗೆ ಸಾಧನವಾದ ಕರ್ಮಗಳನ್ನು ಬಿಟ್ಟರೆ) ಮತ್ತೇನೂ ಇಲ್ಲವೆಂದು ವಾದಿಸುವವರೂ ಕಾಮಾತ್ಮರೂ ಸ್ವರ್ಗವೇ ಮುಖ್ಯವೆಂದು ಭಾವಿಸುವವರೂ ಆದ ಜನರು ಜನ್ಮಕರ್ಮಫಲಪ್ರದವಾಗಿರುವ[2] ಭೋಗ ಮತ್ತು ಐಶ್ವರ್ಯಗಳನ್ನು ಹೊಂದುವುದಕ್ಕೆ ಉಪಾಯವಾದ ವಿವಿಧ ಕ್ರಿಯಾಕಲಾಪದಿಂದ ಕೂಡಿದ ಯಾವ ಆಪಾತಮನೋಹರವಾದ ಮಾತನ್ನು ನುಡಿಯುತ್ತಾರೋ, ಆ ಮಾತಿನಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವರಾಗಿ ಭೋಗೈಶ್ವರ್ಯಗಳಲ್ಲಿಯೇ ಆಸಕ್ತರಾಗಿರುವವರಿಗೆ ಮನಸ್ಸಿನಲ್ಲಿ ನಿಶ್ಚಯಸ್ವಭಾವವುಳ್ಳ ಬುದ್ಧಿಯು ಉಂಟಾಗಲಾರದು.

[ಮೇಲಿನ ಮೂರು ಶ್ಲೋಕಗಳಲ್ಲಿ ಸ್ವರ್ಗಾದಿ ಕ್ಷುದ್ರಫಲಗಳನ್ನು ಕೊಡುವ ಕರ್ಮಕಾಂಡವನ್ನು ದೂಷಣೆ ಮಾಡಲಾಗಿದೆ.]

[1] ಅರ್ಥವಾದಗಳನ್ನೂ ಫಲಗಳನ್ನೂ ಸಾಧನಗಳನ್ನೂ ತಿಳಿಸುವ ವೇದವಾಕ್ಯಗಳಲ್ಲಿ ನಿರತರಾಗಿರುವವರು.

[2] ಕರ್ಮದ ಫಲ ಕರ್ಮಫಲ; ಜನ್ಮವೆಂಬ ಕರ್ಮಫಲ ಜನ್ಮಕರ್ಮಫಲ.

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥೪೫॥**

ಅರ್ಜುನ (ಎಲೈ ಅರ್ಜುನನೆ) ವೇದಾಃ (ವೇದಗಳು) ತ್ರೈಗುಣ್ಯವಿಷಯಾಃ (ತ್ರೈಗುಣ್ಯದ ವಿಷಯವನ್ನು ಕುರಿತು ಹೇಳುವಂತಹವುಗಳು) [ಆದುದರಿಂದ ನೀನು] ನಿಸ್ತ್ರೈಗುಣ್ಯಃ(ತ್ರೈಗುಣ್ಯರಹಿತನೂ) ನಿರ್ದ್ವಂದ್ವಃ(ದ್ವಂದ್ವವಿಲ್ಲದವನೂ) ನಿತ್ಯಸತ್ತ್ವಸ್ಥಃ (ಸದಾ ಸತ್ತ್ವಗುಣವುಳ್ಳವನೂ) ನಿರ್ಯೋಗಕ್ಷೇಮಃ (ಯೋಗಕ್ಷೇಮವಿಲ್ಲದವನೂ) ಆತ್ಮವಾನ್ (ಆತ್ಮವಂತನೂ) ಭವ (ಆಗು).

**೪೫.** ಎಲೈ ಅರ್ಜುನ, ವೇದಗಳು[1] ತ್ರೈಗುಣ್ಯದ[2] ವಿಷಯವನ್ನು ಕುರಿತು ಹೇಳುವಂತಹವುಗಳು. (ಆದುದರಿಂದ ನೀನು) ತ್ರೈಗುಣ್ಯರಹಿತನೂ[3] ದ್ವಂದ್ವವಿಲ್ಲದವನೂ[4] ಸದಾ ಸತ್ತ್ವಗುಣವುಳ್ಳವನೂ[5] ಯೋಗಕ್ಷೇಮವಿಲ್ಲದವನೂ[6] ಆತ್ಮವಂತನೂ[7] ಆಗು.

[1] ಕರ್ಮಕಾಂಡಾತ್ಮಕವಾದ ವೇದಗಳು.
[2] ತ್ರೈಗುಣ್ಯವೆಂದರೆ ಸಂಸಾರವು. ಇದು ಸತ್ತ್ವರಜಸ್ತಮೋಗುಣಗಳ ಕಾರ್ಯ.
[3] ಕಾಮವಿಲ್ಲದವನು.
[4] ಸುಖದುಃಖಾದಿ ದ್ವಂದ್ವರಹಿತನು.
[5] ರಜಸ್ತಮೋಗುಣಗಳ ಪ್ರಾಚುರ್ಯವಿಲ್ಲದೆ ಶುದ್ಧಸತ್ತ್ವದ ಪ್ರಾಚುರ್ಯವುಳ್ಳವನು.
[6] ಇಲ್ಲದಿರುವುದನ್ನು ಸಂಪಾದಿಸಿಕೊಳ್ಳುವುದು ಯೋಗ, ಸಂಪಾದಿಸಿದ್ದನ್ನು ರಕ್ಷಿಸಿಕೊಳ್ಳುವುದು ಕ್ಷೇಮ. ಯೋಗಕ್ಷೇಮಗಳು ಪ್ರಧಾನವಾದರೆ ಶ್ರೇಯಸ್ಸಿನಲ್ಲಿ ಪ್ರವೃತ್ತಿ ಉಂಟಾಗುವುದಿಲ್ಲ.
[7] ಪ್ರಮತ್ತನಾಗದೆ ಇರುವವನು.

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**

ಸರ್ವತಃ (ಎಲ್ಲಾ ಕಡೆಗಳಲ್ಲಿಯೂ) ಸಂಪ್ಲುತೋದಕೇ (ನೀರು ತುಂಬಿದ್ದರೆ) ಉದಪಾನೇ (ಸಣ್ಣ ಜಲಾಶಯುಗಳಲ್ಲಿ) ಯಾವಾನ್ ಅರ್ಥಃ (ಎಷ್ಟು ಪ್ರಯೋಜನವೋ), ವಿಜಾನತಃ [ತತ್ತ್ವವನ್ನು] (ತಿಳಿದುಕೊಂಡಿರುವ) ಬ್ರಾಹ್ಮಣಸ್ಯ (ಬ್ರಾಹ್ಮಣನಿಗೆ) ಸರ್ವೇಷು (ಎಲ್ಲಾ) ವೇದೇಷು (ವೇದಗಳಲ್ಲಿ) ತಾವಾನ್ [ಅರ್ಥಃ] (ಅಷ್ಟೇ ಪ್ರಯೋಜನವು).

**೪೬.** ಎಲ್ಲಾ ಕಡೆಗಳಲ್ಲಿಯೂ ನೀರು ತುಂಬಿದ್ದರೆ (ಬಾವಿ ಕೆರೆ ಮುಂತಾದ) ಸಣ್ಣ ಜಲಾಶಯಗಳಿಂದ ಎಷ್ಟು ಪ್ರಯೋಜನವೋ (ತತ್ತ್ವವನ್ನು) ತಿಳಿದುಕೊಂಡಿರುವ ಬ್ರಾಹ್ಮಣನಿಗೆ ಎಲ್ಲಾ ವೇದಗಳಿಂದ ಅಷ್ಟೇ ಪ್ರಯೋಜನವು.

[ಬಾವಿ ಕೆರೆ ಮುಂತಾದ ಕ್ಷುದ್ರ ಜಲಾಶಯಗಳಿಂದ ಎಷ್ಟುಮಟ್ಟಿಗೆ ಸ್ನಾನಪಾನಾದಿಗಳ ಪ್ರಯೋಜನವುಂಟೋ, ಅಷ್ಟೇ ಪ್ರಯೋಜನವು ಎಲ್ಲೆಲ್ಲಿಯೂ ನೀರು ತುಂಬಿ

ರುವ ದೊಡ್ಡ ಜಲಾಶಯದಿಂದಲೂ ಆಗುವುದು; ಹಾಗೆಯೇ ವೇದೋಕ್ತವಾದ ಕರ್ಮಗಳ ಫಲವನ್ನು ತಿಳಿದಿರುವ ಬ್ರಾಹ್ಮಣನಿಗೆ, ಎಂದರೆ **ಪರಮಾರ್ಥತತ್ತ್ವವನ್ನು ಬಲ್ಲ** ಸಂನ್ಯಾಸಿಗೆ ಆಗುವ ಫಲದಲ್ಲಿ, ಎಂದರೆ, ಸರ್ವತ್ರ–ಸಂಪ್ಲುತೋದಕ–ಸ್ಥಾನದಂತೆ ಇರುವ ವಿಜ್ಞಾನಫಲದಲ್ಲಿ ವೇದಗಳು ಅಂತರ್ಭೂತವಾಗುವುವು—ಶ್ರೀಶಂಕರ.

ಸರ್ವವಿಧಪ್ರಯೋಜನಕ್ಕೆ ನಿರ್ಮಿಸಲ್ಪಟ್ಟ ಮತ್ತು ಎಲ್ಲೆಲ್ಲಿಯೂ ನೀರು ತುಂಬಿರುವ ಜಲಾಶಯದಿಂದ ನೀರಡಿಕೆಯಾದವನು ಎಷ್ಟು ನೀರು ಬೇಕೋ ಅಷ್ಟು ನೀರನ್ನು ಮಾತ್ರ ತೆಗೆದುಕೊಳ್ಳುತ್ತಾನೆ; ಅದೇ ರೀತಿ ವೈದಿಕನಾದ ಮುಮುಕ್ಷುವು ಎಲ್ಲಾ ವೇದಗಳಲ್ಲಿಯೂ ಯಾವ ಭಾಗವು ಮೋಕ್ಷಕ್ಕೆ ಸಾಧನವೋ ಅದನ್ನು ಮಾತ್ರ ಗ್ರಹಿಸುತ್ತಾನೆ. ಇತರ ಭಾಗಗಳಲ್ಲಿ ಅವನಿಗೆ ಪ್ರಯೋಜನವಿಲ್ಲವು—ಶ್ರೀರಾಮಾನುಜ.]

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ**
**॥ ೪೭ ॥**

**ಕರ್ಮಣಿ** ಏವ (ಕರ್ಮದಲ್ಲಿಯೇ) ತೇ (ನಿನಗೆ) ಅಧಿಕಾರಃ (ಅಧಿಕಾರವು) ಫಲೇಷು (ಕರ್ಮಫಲದಲ್ಲಿ) ಕದಾಚನ (ಎಂದಿಗೂ) [ಆಸಕ್ತಿಯು] ಮಾ (ಆಗದಿರಲಿ) ಕರ್ಮಫಲಹೇತುಃ (ಕರ್ಮಫಲಕ್ಕೆ ಕಾರಣವು) ಮಾ ಭೂಃ (ಆಗದೇ ಇರು) ಅಕರ್ಮಣಿ (ಕರ್ಮವನ್ನು ಬಿಡುವುದರಲ್ಲಿ) ತೇ (ನಿನಗೆ) ಸಂಗಃ (ಪ್ರೀತಿಯು) ಮಾ ಅಸ್ತು (ಆಗದಿರಲಿ).

**೪೭.** ಕರ್ಮದಲ್ಲಿಯೇ ನಿನಗೆ ಅಧಿಕಾರವು,[1] ಕರ್ಮಫಲದಲ್ಲಿ, ಎಂದಿಗೂ ಆಸಕ್ತಿಯಾಗದಿರಲಿ. ಕರ್ಮಫಲಕ್ಕೆ ಕಾರಣನಾಗದೇ ಇರು;[2] ಕರ್ಮವನ್ನು ಬಿಡುವುದರಲ್ಲಿ ನಿನಗೆ ಪ್ರೀತಿಯಾಗದಿರಲಿ.

1 ಜ್ಞಾನನಿಷ್ಠೆಯಲ್ಲಿ ಅಧಿಕಾರವಿಲ್ಲ.

2 ಕರ್ಮಫಲದಲ್ಲಿ ಆಶೆಯುಂಟಾದರೆ ಕರ್ಮಫಲವನ್ನು ಹೊಂದಲು ಕಾರಣವಾಗಬೇಕು, ಆದುದರಿಂದ **ಕರ್ಮದ ಫಲಕ್ಕೆ ಕಾರಣ**ನಾಗಬೇಡ.

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥೪೮॥**

ಧನಂಜಯ (ಎಲೈ ಅರ್ಜುನನೆ) ಸಂಗಂ (ಆಸಕ್ತಿಯನ್ನು) ತ್ಯಕ್ತ್ವಾ (ಬಿಟ್ಟು) ಸಿದ್ಧ್ಯಸಿದ್ಧ್ಯೋಃ (ಸಿದ್ಧಿ–ಅಸಿದ್ಧಿಗಳಲ್ಲಿ) ಸಮಃ ಭೂತ್ವಾ (ಸಮಭಾವವುಳ್ಳವನಾಗಿ) ಯೋಗಸ್ಥಃ (ಯೋಗದಲ್ಲಿದ್ದುಕೊಂಡು) ಕರ್ಮಾಣಿ (ಕರ್ಮಗಳನ್ನು) ಕುರು (ಮಾಡು) ಸಮತ್ವಂ (ಸಮತ್ವವು) ಯೋಗಃ (ಯೋಗವೆಂದು) ಉಚ್ಯತೇ (ಹೇಳಲ್ಪಟ್ಟಿದೆ).

೪೮. ಎಲೈ ಅರ್ಜುನ, ಆಸಕ್ತಿಯನ್ನು ಬಿಟ್ಟು ಸಿದ್ಧಿ-ಅಸಿದ್ಧಿಗಳಲ್ಲಿ[1] ಸಮಭಾವವುಳ್ಳವನಾಗಿ ಯೋಗದಲ್ಲಿದ್ದುಕೊಂಡು ಕರ್ಮಗಳನ್ನು ಮಾಡು. ಸಮತ್ವವೇ ಯೋಗವೆನಿಸುವುದು.[2]

1 ಫಲತೃಷ್ಣೆಯಿಲ್ಲದೆ ಕರ್ಮಗಳನ್ನು ಮಾಡುತ್ತಿರುವಾಗ ಸತ್ತ್ವಶುದ್ಧಿಯಿಂದ ಉಂಟಾಗುವ ಜ್ಞಾನಪ್ರಾಪ್ತಿಯೇ ಸಿದ್ಧಿಯು. ಅದಕ್ಕೆ ವಿಪರೀತವಾದ ಮತ್ತು ಅಶುದ್ಧಿಯಿಂದ ಉಂಟಾಗುವ ಅಜ್ಞಾನವೇ ಅಸಿದ್ಧಿಯು.

2 ಸಿದ್ಧಿ-ಅಸಿದ್ಧಿಗಳಲ್ಲಿ ಸಮರೂಪವಾಗಿರುವ ಚಿತ್ತಸಮಾಧಾನವೇ ಯೋಗವು.

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**

ಧನಂಜಯ (ಎಲೈ ಅರ್ಜುನನೆ) ಕರ್ಮ (ಕಾಮ್ಯಕರ್ಮವು) ಬುದ್ಧಿಯೋಗಾತ್ (ಬುದ್ಧಿಯೋಗಕ್ಕಿಂತಲೂ) ದೂರೇಣ (ಅತ್ಯಂತವಾಗಿ) ಅವರಂ (ತುಚ್ಛವು) ಬುದ್ಧೌ (ಬುದ್ಧಿಯಲ್ಲಿ) ಶರಣಂ (ಆಶ್ರಯವನ್ನು) ಅನ್ವಿಚ್ಛ (ಹುಡುಕು, ಹೊಂದು) ಫಲಹೇತವಃ (ಕರ್ಮವನ್ನು ಮಾಡುವಾಗ ಫಲವನ್ನೇ ಕಾರಣವಾಗಿ ಉಳ್ಳವರು) ಕೃಪಣಾಃ (ದೀನರು).

೪೯. ಎಲೈ ಅರ್ಜುನ, ಕಾಮ್ಯಕರ್ಮವು ಬುದ್ಧಿಯೋಗಕ್ಕಿಂತಲೂ[1] ಅತ್ಯಂತ ತುಚ್ಛವಾದದ್ದು. (ಆದುದರಿಂದ) ಬುದ್ಧಿಯಲ್ಲಿ[2] ಆಶ್ರಯವನ್ನು ಹೊಂದು. ಫಲಾಕಾಂಕ್ಷಿಗಳಾದ ಜನರು ದೀನರು.

1 ಸಮತ್ವಬುದ್ಧಿಯಿಂದ ಕೂಡಿರುವ ಕರ್ಮಕ್ಕಿಂತ.

2 ಯೋಗವಿಷಯವಾದ ಬುದ್ಧಿಯಲ್ಲಿ ಅಥವಾ ಅದು ಪರಿಪಕ್ವವಾದುದರಿಂದ ಉಂಟಾಗುವ ಸಾಂಖ್ಯಬುದ್ಧಿಯಲ್ಲಿ.

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ ॥ ೫೦ ॥**

ಬುದ್ಧಿಯುಕ್ತಃ (ಬುದ್ಧಿಯಿಂದ ಕೂಡಿದವನು) ಇಹ (ಇಲ್ಲಿ, ಈ ಲೋಕದಲ್ಲಿ) ಉಭೇ ಸುಕೃತದುಷ್ಕೃತೇ (ಪುಣ್ಯ ಮತ್ತು ಪಾಪಗಳೆರಡರನ್ನೂ) ಜಹಾತಿ (ಬಿಟ್ಟುಬಿಡುತ್ತಾನೆ) ತಸ್ಮಾತ್ (ಆದುದರಿಂದ) ಯೋಗಾಯ (ಯೋಗಕ್ಕಾಗಿ) ಯುಜ್ಯಸ್ವ (ಪ್ರಯತ್ನಮಾಡು) ಕರ್ಮಸು (ಕರ್ಮಗಳಲ್ಲಿ) ಯೋಗಃ (ಯೋಗವು) ಕೌಶಲಂ (ಕೌಶಲವು).

**೫೦.** ಬುದ್ಧಿಯಿಂದ ಯುಕ್ತನಾದವನು[1] ಪಾಪಪುಣ್ಯಗಳೆರಡನ್ನೂ[2] ಇಲ್ಲಿಯೇ ಬಿಟ್ಟುಬಿಡುತ್ತಾನೆ. ಆದುದರಿಂದ ಯೋಗಕ್ಕಾಗಿ ಪ್ರಯತ್ನಮಾಡು. ಯೋಗವು ಕರ್ಮಗಳಲ್ಲಿ ಕುಶಲತೆಯು.[3]

1 ಸಮತ್ವಬುದ್ಧಿಯಿಂದ ಕೂಡಿದವನು.

2 ಪಾಪವು ಹೇಗೆ ಸಂಸಾರಕ್ಕೆ ಕಾರಣವೋ ಹಾಗೆಯೇ ಪುಣ್ಯವೂ ಸಂಸಾರಕ್ಕೆ ಕಾರಣವು. ಪುಣ್ಯವು ಕ್ಷೀಣವಾದ ನಂತರ ಪುನಃ ಮರ್ತ್ಯಲೋಕವನ್ನು ಪ್ರವೇಶ ಮಾಡಬೇಕಾಗುತ್ತದೆ (ಗೀತಾ ೯, ೨೧).

3 ಸ್ವಧರ್ಮಕ್ಕೆ ಅನುಗುಣವಾದ ಕರ್ಮಗಳನ್ನು ಅನುಷ್ಠಾನಮಾಡಿಕೊಂಡು, ಈಶ್ವರನಲ್ಲಿ ಮನಸ್ಸನ್ನು ಅರ್ಪಿಸಿರುವುದರಿಂದ ಸಿದ್ಧಿ ಮತ್ತು ಅಸಿದ್ಧಿಗಳಲ್ಲಿ ಉಂಟಾಗುವ ಸಮತ್ವಬುದ್ಧಿಯೇ ಕೌಶಲವು. ಬಂಧಸ್ವಭಾವವುಳ್ಳ ಕರ್ಮಗಳನ್ನು ತಮ್ಮ ಸ್ವಭಾವವನ್ನು ಬಿಟ್ಟುಬಿಡುವಂತೆ ಮಾಡುವುದು ಕೌಶಲವು.

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥ ೫೧ ॥**

ಹಿ (ಏಕೆಂದರೆ) ಬುದ್ಧಿಯುಕ್ತಾಃ (ಬುದ್ಧಿಯಿಂದ ಕೂಡಿದ) ಮನೀಷಿಣಃ (ಜ್ಞಾನಿಗಳು) ಕರ್ಮಜಂ (ಕರ್ಮಜಾತವಾದ, ಕರ್ಮದಿಂದ ಹುಟ್ಟಿದ) ಫಲಂ (ಫಲವನ್ನು) ತ್ಯಕ್ತ್ವಾ (ಬಿಟ್ಟು) ಜನ್ಮಬಂಧ–ವಿನಿರ್ಮುಕ್ತಾಃ (ಜನ್ಮವೆಂಬ ಬಂಧನದಿಂದ ಬಿಡುಗಡೆಯನ್ನು ಹೊಂದಿ) ಅನಾಮಯಂ (ಕ್ಲೇಶಶೂನ್ಯವಾದ, ಉಪದ್ರವಶೂನ್ಯವಾದ) ಪದಂ (ಪರಮಪದವನ್ನು) ಗಚ್ಛಂತಿ (ಹೊಂದುತ್ತಾರೆ).

**೫೧.** ಏಕೆಂದರೆ ಬುದ್ಧಿಯುಕ್ತರಾದ[1] ಜ್ಞಾನಿಗಳು ಕರ್ಮದಿಂದ ಹುಟ್ಟಿದ ಫಲವನ್ನು ಬಿಟ್ಟು ಜನ್ಮವೆಂಬ ಬಂಧನದಿಂದ ಬಿಡುಗಡೆಯನ್ನು[2] ಹೊಂದಿ ಕ್ಲೇಶಶೂನ್ಯವಾದ ಪರಮಪದವನ್ನು[3] ಹೊಂದುತ್ತಾರೆ.

1 ಸಮತ್ವಬುದ್ಧಿಯುಳ್ಳವರಾದ.

2 ಬದುಕಿರುವಾಗಲೇ ಮುಕ್ತರಾಗಿ.

3 ಮೋಕ್ಷವೆಂಬ ಹೆಸರುಳ್ಳ ವಿಷ್ಣುವಿನ ಪರಮಪದವನ್ನು.

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥**

ಯದಾ (ಯಾವಾಗ) ತೇ (ನಿನ್ನ) ಬುದ್ಧಿಃ (ಬುದ್ಧಿಯು) ಮೋಹಕಲಿಲಂ (ಮೋಹರೂಪವಾದ ಕಾಲುಷ್ಯವನ್ನು) ವ್ಯತಿತರಿಷ್ಯತಿ (ಅತಿಕ್ರಮಿಸುವುದೋ) ತದಾ

(ಆಗ) ಶ್ರೋತವ್ಯಸ್ಯ (ಮುಂದೆ ಕೇಳಬೇಕಾದ) ಶ್ರುತಸ್ಯ ಚ (ಮತ್ತು ಹಿಂದೆ ಕೇಳಿದ ಕರ್ಮಫಲಗಳ ವಿಷಯದಲ್ಲಿ) ನಿರ್ವೇದಂ (ವೈರಾಗ್ಯವನ್ನು) ಗಂತಾಸಿ (ಹೊಂದುವೆ).

**೫೨.** ಯಾವಾಗ ನಿನ್ನ ಬುದ್ಧಿಯು ಮೋಹರೂಪವಾದ ಕಾಲುಷ್ಯವನ್ನು[1] ಅತಿಕ್ರಮಿಸುವುದೋ ಆಗ ಮುಂದೆ ಕೇಳಬೇಕಾದ ಮತ್ತು ಹಿಂದೆ ಕೇಳಿದ ಕರ್ಮಫಲಗಳ ವಿಷಯದಲ್ಲಿ ವೈರಾಗ್ಯವನ್ನು ಹೊಂದುವೆ.

[1] ಮೋಹಾತ್ಮಕವೂ ಅವಿವೇಕರೂಪವೂ ಆದ ಕಾಲುಷ್ಯ. ಇದು ಆತ್ಮಾನಾತ್ಮ-ವಿವೇಕರೂಪವಾದ ಜ್ಞಾನವನ್ನು ಕದಡಿ ಮನಸ್ಸನ್ನು ವಿಷಯವಸ್ತುಗಳ ಕಡೆ ಹರಿಯುವ ಹಾಗೆ ಮಾಡುತ್ತೆ (ಶ್ರೀಶಂಕರ).

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥**

ಯದಾ (ಯಾವಾಗ) ಶ್ರುತಿವಿಪ್ರತಿಪನ್ನಾ (ಶ್ರುತಿಗಳಿಂದ ವಿಕ್ಷಿಪ್ತವಾಗಿರುವ) ತೇ (ನಿನ್ನ) ಬುದ್ಧಿಃ (ಬುದ್ಧಿಯು) ಸಮಾಧೌ (ಸಮಾಧಿಯಲ್ಲಿ) ನಿಶ್ಚಲಾ (ನಿಶ್ಚಲವಾಗಿ) ಅಚಲಾ (ಅಚಲವಾಗಿ) ಸ್ಥಾಸ್ಯತಿ (ನಿಲ್ಲುವುದೋ) ತದಾ (ಆಗ) ಯೋಗಂ (ಯೋಗವನ್ನು) ಅವಾಪ್ಸ್ಯಸಿ (ಹೊಂದುತ್ತೀಯೆ).

**೫೩.** ಶ್ರುತಿಗಳಿಂದ[1] ವಿಕ್ಷಿಪ್ತವಾಗಿರುವ ನಿನ್ನ ಬುದ್ಧಿಯು ಯಾವಾಗ ಸಮಾಧಿಯಲ್ಲಿ[2] ನಿಶ್ಚಲವಾಗಿ[3] ಅಚಲವಾಗಿ[4] ನಿಲ್ಲುವುದೋ ಆಗ ಯೋಗವನ್ನು[5] ಹೊಂದುತ್ತೀಯೆ.

[1] ನಾನಾ ವಿಧವಾದ ಸಾಧ್ಯಸಾಧನಗಳ ಸಂಬಂಧವನ್ನು ತಿಳಿಸುವ ಶ್ರುತಿಗಳಿಂದ ಎಂದರೆ ಶ್ರವಣಗಳಿಂದ. ಅನೇಕ ವಿಧವಾದ ಸಾಧ್ಯಸಾಧನಗಳ (ಸ್ವರ್ಗಾದಿ ಸಾಧ್ಯಗಳ ಜ್ಯೋತಿಷ್ಟೋಮಾದಿ ಸಾಧನಗಳ) ಸಂಬಂಧವನ್ನು ಪ್ರಕಾಶಿಸುವ ಶ್ರುತಿಗಳಿಂದ ಎಂದರೆ ಶ್ರವಣಗಳಿಂದ ನಾನಾ ತಿಳುವಳಿಕೆಯುಳ್ಳದ್ದಾಗಿರುವ ಬುದ್ಧಿಯು—(ಶ್ರೀಶಂಕರ).

[2] ಆತ್ಮನಲ್ಲಿ.

[3] ವಿಕ್ಷೇಪವೆಂಬ ಚಲನೆಯಿಲ್ಲದೆ.

[4] ವಿಕಲ್ಪಗಳು ಇಲ್ಲದೆ.

[5] ಆತ್ಮದರ್ಶನವನ್ನು.

ಅರ್ಜುನ ಉವಾಚ

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥ ೫೪ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ಕೇಶವ (ಎಲೈ ಕೇಶವನೆ) ಸಮಾಧಿಸ್ಥಸ್ಯ (ಸಮಾಧಿಯಲ್ಲಿರುವ) ಸ್ಥಿತಪ್ರಜ್ಞಸ್ಯ (ಸ್ಥಿತಪ್ರಜ್ಞನ) ಕಾ ಭಾಷಾ (ಲಕ್ಷಣವೇನು) ಸ್ಥಿತಧೀಃ (ಸ್ಥಿತಪ್ರಜ್ಞನು) ಕಿಂ ಪ್ರಭಾಷೇತ (ಏನನ್ನು ಮಾತನಾಡುತ್ತಾನೆ) ಕಿಂ ಆಸೀತ (ಹೇಗೆ ಕುಳಿತುಕೊಳ್ಳುತ್ತಾನೆ) ಕಿಂ ವ್ರಜೇತ (ಹೇಗೆ ನಡೆಯುತ್ತಾನೆ).

ಅರ್ಜುನನು ಹೇಳಿದನು

**೫೪.** ಎಲೈ ಕೇಶವ, ಸಮಾಧಿಯಲ್ಲಿರುವ ಸ್ಥಿತಪ್ರಜ್ಞನ ಲಕ್ಷಣವೇನು? ಅವನು ಏನನ್ನು ಮಾತನಾಡುತ್ತಾನೆ, ಹೇಗೆ ಕುಳಿತುಕೊಳ್ಳುತ್ತಾನೆ, ಹೇಗೆ ನಡೆಯುತ್ತಾನೆ?

[ಈ ಶ್ಲೋಕದಲ್ಲಿ ಸ್ಥಿತಪ್ರಜ್ಞನ ಲಕ್ಷಣವನ್ನು ಕೇಳಿರುತ್ತದೆ.]

ಶ್ರೀಭಗವಾನ್ ಉವಾಚ

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಪಾರ್ಥ (ಎಲೈ ಅರ್ಜುನನೆ) ಆತ್ಮನಿ ಏವ (ಆತ್ಮನಲ್ಲಿಯೇ) ಆತ್ಮನಾ (ಆತ್ಮನಿಂದಲೇ) ತುಷ್ಟಃ (ಸಂತುಷ್ಟನಾಗಿ) ಯದಾ (ಯಾವಾಗ) ಮನೋಗತಾನ್ (ಮನಸ್ಸಿನಲ್ಲಿರುವ) ಸರ್ವಾನ್ (ಸಮಸ್ತ) ಕಾಮಾನ್ (ಕಾಮಗಳನ್ನು, ವಾಸನೆಗಳನ್ನು) ಪ್ರಜಹಾತಿ (ತ್ಯಾಗಮಾಡುತ್ತಾನೆಯೋ) ತದಾ (ಆಗ) ಸ್ಥಿತಪ್ರಜ್ಞಃ (ಸ್ಥಿತಪ್ರಜ್ಞನೆಂದು) ಉಚ್ಯತೇ (ಹೇಳಲ್ಪಡುವನು).

**೫೫.** ಎಲೈ ಅರ್ಜುನ, ಆತ್ಮನಲ್ಲಿಯೇ[1] ಆತ್ಮನಿಂದಲೇ ಸಂತುಷ್ಟನಾಗಿ ಯಾವಾಗ ಯೋಗಿಯು ಮನಸ್ಸಿನಲ್ಲಿರುವ ಸಮಸ್ತ ಕಾಮಗಳನ್ನು ತ್ಯಾಗ ಮಾಡುತ್ತಾನೆಯೋ ಆಗ ಸ್ಥಿತಪ್ರಜ್ಞನೆಂದು ಹೇಳಲ್ಪಡುವನು.

[1] 'ಆತ್ಮನಲ್ಲಿಯೇ' ಎಂದರೆ ಪ್ರತ್ಯಗಾತ್ಮಸ್ವರೂಪದಲ್ಲಿಯೇ, 'ಆತ್ಮನಿಂದ' ಎಂದರೆ ತನ್ನಿಂದಲೇ; ಬಾಹ್ಯವಸ್ತುವನ್ನು ಪಡೆದುಕೊಳ್ಳುವ ಅಪೇಕ್ಷೆಯಿಲ್ಲದೆ ಸಂತುಷ್ಟನಾಗುವುದು.

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥**

ದುಃಖೇಷು (ದುಃಖಗಳಲ್ಲಿ) ಅನುದ್ವಿಗ್ನಮನಾಃ (ಉದ್ವೇಗವಿಲ್ಲದ ಮನಸ್ಸುಳ್ಳವನೂ) ಸುಖೇಷು (ಸುಖಗಳಲ್ಲಿ) ವಿಗತಸ್ಪೃಹಃ (ಆಶೆಯಿಲ್ಲದವನೂ) ವೀತರಾಗ–

ಭಯಕ್ರೋಧಃ (ಆಸಕ್ತಿಭಯಕ್ರೋಧಗಳಿಲ್ಲದವನೂ ಆದ) ಮುನಿಃ (ಮುನಿಯು) ಸ್ಥಿತಧೀಃ (ಸ್ಥಿತಪ್ರಜ್ಞನೆಂದು) ಉಚ್ಯತೇ (ಹೇಳಲ್ಪಡುವನು).

**೫೬.** ದುಃಖಗಳಲ್ಲಿ ಉದ್ವೇಗವಿಲ್ಲದ[1] ಮನಸ್ಸುಳ್ಳವನೂ, ಸುಖಗಳಲ್ಲಿ ಆಶೆಯಿಲ್ಲದವನೂ, ಆಸಕ್ತಿ–ಭಯ–ಕ್ರೋಧಗಳಿಲ್ಲದವನೂ ಆದ ಮುನಿಯು ಸ್ಥಿತಪ್ರಜ್ಞನೆಂದು ಹೇಳಲ್ಪಡುವನು.

1 ಕಳವಳವಿಲ್ಲದ ಅಥವಾ ವ್ಯಸನರಹಿತವಾದ ಮನಸ್ಸುಳ್ಳ.

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ ಪ್ರಾಪ್ಯ ಶುಭಾಶುಭಂ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

ಯಃ (ಯಾವನು) ಸರ್ವತ್ರ (ಸರ್ವವಸ್ತುಗಳಲ್ಲಿಯೂ) ಅನಭಿಸ್ನೇಹಃ (ಆಸಕ್ತಿರಹಿತನಾಗಿ) ತತ್ ತತ್ (ಆಯಾ) ಶುಭಾಶುಭಂ (ಪ್ರಿಯ ಮತ್ತು ಅಪ್ರಿಯ ವಿಷಯಗಳನ್ನು) ಪ್ರಾಪ್ಯ (ಪಡೆದು) ನ ಅಭಿನಂದತಿ (ಸಂತೋಷಿಸುವುದಿಲ್ಲವೋ) ನ ದ್ವೇಷ್ಟಿ (ದ್ವೇಷಿಸುವುದಿಲ್ಲವೋ) ತಸ್ಯ (ಆತನ) ಪ್ರಜ್ಞಾ (ಪ್ರಜ್ಞೆಯು) ಪ್ರತಿಷ್ಠಿತಾ (ಸ್ಥಿರವಾಗಿರುವುದು).

**೫೭.** ಯಾವನು ಸರ್ವವಸ್ತುಗಳಲ್ಲಿಯೂ ಆಸಕ್ತಿರಹಿತನಾಗಿ ಆಯಾ ಪ್ರಿಯಾಪ್ರಿಯ–ವಿಷಯಗಳನ್ನು ಪಡೆದಾಗ ಸಂತೋಷಿಸುವುದಿಲ್ಲವೋ, ದ್ವೇಷಿಸುವುದಿಲ್ಲವೋ, ಆತನ ಪ್ರಜ್ಞೆಯು ಸ್ಥಿರವಾಗಿರುವುದು.

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥**

ಚ (ಮತ್ತು) ಕೂರ್ಮಃ (ಆಮೆಯು) ಅಂಗಾನಿ ಇವ (ತನ್ನ ಅಂಗಗಳನ್ನು ಒಳಗೆ ಎಳೆದುಕೊಳ್ಳುವಂತೆ) ಯದಾ (ಯಾವಾಗ) ಅಯಂ (ಈ ಯೋಗಿಯು) ಸರ್ವಶಃ (ಎಲ್ಲಾ ಕಡೆಗಳಿಂದಲೂ) ಇಂದ್ರಿಯಾಣಿ (ಇಂದ್ರಿಯಗಳನ್ನು) ಇಂದ್ರಿಯಾರ್ಥೇಭ್ಯಃ (ಇಂದ್ರಿಯಗಳ ವಿಷಯಗಳಿಂದ) ಸಂಹರತೇ (ಎಳೆದುಕೊಳ್ಳುವನೋ) [ಆಗ] ತಸ್ಯ (ಆತನ) ಪ್ರಜ್ಞಾ (ಪ್ರಜ್ಞೆಯು) ಪ್ರತಿಷ್ಠಿತಾ (ಸ್ಥಿರವಾಗಿರುವುದು).

**೫೮.** ಆಮೆಯು ತನ್ನ ಅಂಗಗಳನ್ನು[1] ಒಳಕ್ಕೆ ಎಳೆದುಕೊಳ್ಳುವಂತೆ ಈ ಜ್ಞಾನನಿಷ್ಠನಾದ ಯೋಗಿಯು ಯಾವಾಗ ಎಲ್ಲಾ ಕಡೆಗಳಿಂದಲೂ ಇಂದ್ರಿಯಗಳನ್ನು ಅವುಗಳ ವಿಷಯಗಳಿಂದ[2] ಎಳೆದುಕೊಳ್ಳುವನೋ ಆಗ ಆತನ ಪ್ರಜ್ಞೆಯು ಸ್ಥಿರವಾಗಿರುವುದು.

1 ತಲೆ ಕೈಕಾಲುಗಳನ್ನು.
2 ಶಬ್ದಾದಿ ವಿಷಯಗಳಿಂದ.

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥**

ನಿರಾಹಾರಸ್ಯ (ನಿರಾಹಾರನಾದ) ದೇಹಿನಃ (ಮನುಷ್ಯನ) ವಿಷಯಾಃ (ಇಂದ್ರಿಯವಿಷಯಗಳು) ರಸವರ್ಜಂ (ರಸವನ್ನು [ಮಾತ್ರ] ಬಿಟ್ಟು) ವಿನಿವರ್ತಂತೇ (ಹಿಂತಿರುಗುತ್ತವೆ) ಪರಂ (ಪರಬ್ರಹ್ಮವನ್ನು) ದೃಷ್ಟ್ವಾ (ಸಾಕ್ಷಾತ್ಕಾರಮಾಡಿಕೊಂಡ ಮೇಲೆ) ಅಸ್ಯ (ಇವನ) ರಸಃ ಅಪಿ (ತೃಷ್ಣೆಯು ಕೂಡ) ನಿವರ್ತತೇ (ಹಿಂತಿರುಗುವುದು).

**೫೯.** ನಿರಾಹಾರನಾದ ದೇಹಿಯನ್ನು ತೊರೆದು ಇಂದ್ರಿಯಗಳ ವಿಷಯಗಳು ಹಿಂತಿರುಗುತ್ತವೆ; ಆದರೆ ತೃಷ್ಣೆಯು ಬಿಟ್ಟಿರುವುದಿಲ್ಲ. ಪರಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಂಡ ಮೇಲೆ ಇವನ ತೃಷ್ಣೆಯೂ ಕೂಡ ಹಿಂತಿರುಗುವುದು.

[ಇಂದ್ರಿಯಗಳ ಮೂಲಕ ವಿಷಯಗ್ರಹಣ ಮಾಡದ ಕಠೋರ ತಪಸ್ವಿಯು ವಿಷಯಗಳಿಂದ ಬಿಡುಗಡೆಯನ್ನು ಹೊಂದಬಹುದು; ಆದರೆ ಅವನ ವಿಷಯತೃಷ್ಣೆಯು ಹೋಗದಿರಬಹುದು. ಪರಬ್ರಹ್ಮವನ್ನು ಉಪಲಬ್ಧಮಾಡಿಕೊಂಡ ಮೇಲೆ ಈ ತೃಷ್ಣೆಯು ಕೂಡ ನಿರ್ಬೀಜವಾಗಿ ನಾಶವಾಗುವುದು.]

**ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦ ॥**

ಕೌಂತೇಯ (ಎಲೈ ಅರ್ಜುನನೆ) ಹಿ (ಏಕೆಂದರೆ) ಪ್ರಮಾಥೀನಿ (ವಿಕ್ಷೇಪವನ್ನುಂಟುಮಾಡುವ) ಇಂದ್ರಿಯಾಣಿ (ಇಂದ್ರಿಯಗಳು) ಯತತಃ (ಪ್ರಯತ್ನಶೀಲನೂ) ವಿಪಶ್ಚಿತಃ (ಜ್ಞಾನಿಯೂ ಆದ) ಪುರುಷಸ್ಯ (ಪುರುಷನ) ಮನಃ ಅಪಿ (ಮನಸ್ಸನ್ನೂ ಕೂಡಾ) ಪ್ರಸಭಂ (ಬಲಾತ್ಕಾರದಿಂದ) ಹರಂತಿ (ಹರಣಮಾಡುವುವು).

**೬೦.** ಎಲೈ ಅರ್ಜುನ, ವಿಕ್ಷೇಪವನ್ನುಂಟುಮಾಡುವ ಇಂದ್ರಿಯಗಳು ಪ್ರಯತ್ನಶೀಲನೂ ಜ್ಞಾನಿಯೂ ಆದ ಪುರುಷನ ಮನಸ್ಸನ್ನು ಕೂಡಾ ಬಲಾತ್ಕಾರದಿಂದ ಹರಣಮಾಡುವುವು.

[ಇಂದ್ರಿಯಜಯವು ಆತ್ಮದರ್ಶನಕ್ಕೆ ಅಧೀನವಾದ ಹಾಗೆ ಆತ್ಮದರ್ಶನವೂ ಇಂದ್ರಿಯಜಯಕ್ಕೆ ಅಧೀನವಾದುದೆಂದು ಶ್ರೀರಾಮಾನುಜಾಚಾರ್ಯರು ತಮ್ಮ ಭಾಷ್ಯದಲ್ಲಿ ಹೇಳಿರುತ್ತಾರೆ.]

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥**

ತಾನಿ (ಆ) ಸರ್ವಾಣಿ (ಇಂದ್ರಿಯಗಳನ್ನೆಲ್ಲಾ) ಸಂಯಮ್ಯ (ನಿಗ್ರಹಿಸಿ) ಮತ್ಪರಃ (ಮತ್ಪರಾಯಣನಾಗಿ) ಯುಕ್ತಃ ಆಸೀತ (ಸಮಾಹಿತಚಿತ್ತನಾಗಬೇಕು) ಹಿ (ಏಕೆಂದರೆ) ಯಸ್ಯ (ಯಾವನ) ಇಂದ್ರಿಯಾಣಿ (ಇಂದ್ರಿಯಗಳು) ವಶೇ (ವಶವಾಗಿರುವುವೋ) ತಸ್ಯ (ಅವನ) ಪ್ರಜ್ಞಾ (ಪ್ರಜ್ಞೆಯು) ಪ್ರತಿಷ್ಠಿತಾ (ಸ್ಥಿರವಾಗಿರುವುದು).

೬೧. ಆದುದರಿಂದ ಇಂದ್ರಿಯಗಳನ್ನೆಲ್ಲಾ ನಿಗ್ರಹಿಸಿ ಮತ್ಪರಾಯಣನಾಗಿ[1] ಸಮಾಹಿತಚಿತ್ತನಾಗಬೇಕು; ಏಕೆಂದರೆ ಯಾವನ ಇಂದ್ರಿಯಗಳು ವಶದಲ್ಲಿರುವುವೋ ಅವನ ಪ್ರಜ್ಞೆಯು ಸ್ಥಿರವಾಗಿರುವುದು.

1 ನಾನೇ ಪರಮಾತ್ಮನೆಂಬ ಭಾವನೆಯುಳ್ಳವನಾಗಿ.

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥ ೬೨ ॥**
**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥ ೬೩ ॥**

ವಿಷಯಾನ್ (ವಿಷಯಗಳನ್ನು) ಧ್ಯಾಯತಃ (ಚಿಂತಿಸುತ್ತಿರುವ) ಪುಂಸಃ (ಪುರುಷನಿಗೆ) ತೇಷು (ಅವುಗಳಲ್ಲಿ) ಸಂಗಃ (ಆಸಕ್ತಿಯು) ಉಪಜಾಯತೇ (ಹುಟ್ಟುತ್ತದೆ), ಸಂಗಾತ್ (ಆಸಕ್ತಿಯಿಂದ) ಕಾಮಃ (ಕಾಮವು) ಸಂಜಾಯತೇ (ಹುಟ್ಟುತ್ತದೆ), ಕಾಮಾತ್ (ಕಾಮದಿಂದ) ಕ್ರೋಧಃ (ಕ್ರೋಧವು) ಅಭಿಜಾಯತೇ (ಹುಟ್ಟುತ್ತದೆ), ಕ್ರೋಧಾತ್ (ಕ್ರೋಧದಿಂದ) ಸಂಮೋಹಃ (ಸಂಮೋಹವು) ಭವತಿ (ಉಂಟಾಗುತ್ತದೆ), ಸಂಮೋಹಾತ್ (ಸಂಮೋಹದಿಂದ) ಸ್ಮೃತಿವಿಭ್ರಮಃ (ಸ್ಮೃತಿಯ ಭ್ರಮೆ) ಸ್ಮೃತಿಭ್ರಂಶಾತ್ (ಸ್ಮೃತಿಭ್ರಮೆಯಿಂದ) ಬುದ್ಧಿನಾಶಃ (ಬುದ್ಧಿಯ ನಾಶ), ಬುದ್ಧಿನಾಶಾತ್ (ಬುದ್ಧಿನಾಶದಿಂದ) ಪ್ರಣಶ್ಯತಿ (ನಾಶವಾಗುತ್ತಾನೆ).

೬೨-೬೩. ವಿಷಯಗಳನ್ನು ಚಿಂತಿಸುತ್ತಿರುವ ಪುರುಷನಿಗೆ ಅವುಗಳಲ್ಲಿ ಆಸಕ್ತಿಯು ಹುಟ್ಟುತ್ತದೆ; ಆಸಕ್ತಿಯಿಂದ ಕಾಮವು[1] ಹುಟ್ಟುತ್ತದೆ; ಕಾಮದಿಂದ ಕ್ರೋಧವು[2] ಹುಟ್ಟುತ್ತದೆ; ಕ್ರೋಧದಿಂದ ಸಂಮೋಹವು[3] ಉಂಟಾಗುತ್ತದೆ; ಸಂಮೋಹದಿಂದ ಸ್ಮೃತಿಯ[4] ಭ್ರಮೆಯುಂಟಾಗುತ್ತದೆ; ಸ್ಮೃತಿಭ್ರಮೆಯಿಂದ ಬುದ್ಧಿನಾಶವಾಗುತ್ತದೆ;[5] ಬುದ್ಧಿನಾಶದಿಂದ [ಪುರುಷನು] ನಾಶವಾಗುತ್ತಾನೆ.[6]

1 ಆಸಕ್ತಿಯ ಪರಿಪಕ್ವಸ್ಥಿತಿಗೆ ಕಾಮವೆಂದು ಹೆಸರು; ಈ ದೆಸೆಯುಂಟಾದರೆ ವಿಷಯಗಳನ್ನು ಅನುಭೋಗಿಸದೆ ಇರಲು ಸಾಧ್ಯವಾಗುವುದಿಲ್ಲ.

2 ಕಾಮವನ್ನು ಅನುಭೋಗಿಸಲು ಏನಾದರೂ ಅಡಚಣೆಯುಂಟಾದರೆ ಕ್ರೋಧವು ಉಂಟಾಗುತ್ತದೆ.

3 ಇದನ್ನು ಮಾಡಬೇಕು, ಇದನ್ನು ಮಾಡಕೂಡದು ಎಂಬ ವಿವೇಕವಿಲ್ಲದಿರುವುದು.

4 ಶಾಸ್ತ್ರಾಚಾರ್ಯರ ಉಪದೇಶದಿಂದ ಉಂಟಾಗುವ ನೆನಪು ನಾಶವಾಗುತ್ತದೆ; ಎಂದರೆ ನೆನಪು ಬರಬೇಕಾಗಿದ್ದರೂ ಬರುವುದಿಲ್ಲ.

5 ನಿಶ್ಚಯಸ್ವಭಾವವುಳ್ಳ ಬುದ್ಧಿಯು ನಾಶವಾಗುತ್ತದೆ.

6 ಎಲ್ಲಿಯ ವರೆಗೆ ಮನುಷ್ಯನ ಬುದ್ಧಿಯು ಕಾರ್ಯಾಕಾರ್ಯಗಳನ್ನು ವಿವೇಚಿಸುವುದಕ್ಕೆ ಯೋಗ್ಯವಾಗಿರುವುದೋ ಅಲ್ಲಿಯವರೆಗೆ ಅವನು ಮನುಷ್ಯನೆನಿಸಿಕೊಳ್ಳುವನು. ಆ ಯೋಗ್ಯತೆಯಿಲ್ಲದಿದ್ದರೆ ಅವನು ನಾಶವಾದ ಹಾಗೆಯೆ.

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ ೬೪ ॥**

ತು (ಆದರೆ) ರಾಗದ್ವೇಷವಿಯುಕ್ತೈಃ (ಆಸಕ್ತಿ ಮತ್ತು ದ್ವೇಷಗಳಿಂದ ಬಿಡಲ್ಪಟ್ಟ) ಆತ್ಮವಶ್ಯೈಃ (ತನ್ನ ವಶದಲ್ಲಿರುವ) ಇಂದ್ರಿಯೈಃ (ಇಂದ್ರಿಯಗಳಿಂದ) ವಿಷಯಾನ್ (ವಿಷಯಗಳನ್ನು) ಚರನ್ (ಅನುಭವಿಸುತ್ತಿರುವ, ಗ್ರಹಿಸುತ್ತಿರುವ) ವಿಧೇಯಾತ್ಮಾ (ಸಂಯತಚಿತ್ತವುಳ್ಳವನು) ಪ್ರಸಾದಂ (ಪ್ರಸನ್ನತೆಯನ್ನು) ಅಧಿಗಚ್ಛತಿ (ಹೊಂದುವನು).

**೬೪.** ಆದರೆ ರಾಗದ್ವೇಷಗಳಿಂದ[1] ಬಿಡುಗಡೆಯನ್ನು ಹೊಂದಿ ತನ್ನ ವಶದಲ್ಲಿರುವ ಇಂದ್ರಿಯಗಳಿಂದ ವಿಷಯಗಳನ್ನು[2] ಅನುಭವಿಸುತ್ತಿರುವ[3] ಸಂಯತಚಿತ್ತವುಳ್ಳ ಮನುಷ್ಯನು ಪ್ರಸನ್ನತೆಯನ್ನು ಹೊಂದುವನು.

1 ಪ್ರಿಯವಸ್ತುವಿನಲ್ಲಿ ರಾಗ ಅಥವಾ ಆಸಕ್ತಿ, ಅಪ್ರಿಯವಸ್ತುವಿನಲ್ಲಿ ದ್ವೇಷ.

2 ಜೀವನಧಾರಣಕ್ಕೆ ಅವಶ್ಯಕವಾದಷ್ಟು.

3 ವಿಷಯಗಳ ಮಧ್ಯದಲ್ಲಿ ಚರಿಸುತ್ತಿದ್ದರೂ (ಚರನ್) ಅವುಗಳನ್ನು ತಿರಸ್ಕರಿಸಿ ಇರುವ.

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫ ॥**

ಪ್ರಸಾದೇ (ಚಿತ್ತದ ಪ್ರಸನ್ನತೆಯುಂಟಾದರೆ) ಅಸ್ಯ (ಇವನ) ಸರ್ವದುಃಖಾನಾಂ (ಸಮಸ್ತದುಃಖಗಳ) ಹಾನಿಃ (ನಾಶವು) ಉಪಜಾಯತೇ (ಉಂಟಾಗುತ್ತದೆ) ಹಿ (ಏಕೆಂದರೆ) ಪ್ರಸನ್ನಚೇತಸಃ (ಶುದ್ಧಚಿತ್ತವುಳ್ಳ ಮನುಷ್ಯನ) ಬುದ್ಧಿಃ (ಬುದ್ಧಿಯು) ಆಶು (ಶೀಘ್ರವಾಗಿ) ಪರ್ಯವತಿಷ್ಠತೇ (ಸ್ಥಿರವಾಗುವುದು).

೬೫. ಚಿತ್ತದ ಪ್ರಸನ್ನತೆಯುಂಟಾದರೆ ಇವನ ಸಮಸ್ತದುಃಖಗಳ ನಾಶವು ಉಂಟಾಗುತ್ತದೆ. ಏಕೆಂದರೆ ಶುದ್ಧಚಿತ್ತವುಳ್ಳ ಮನುಷ್ಯನ ಬುದ್ಧಿಯು ಶೀಘ್ರವಾಗಿ ಸ್ಥಿರವಾಗುವುದು.

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಂ ॥ ೬೬ ॥**

ಅಯುಕ್ತಸ್ಯ (ಅಯುಕ್ತನಾದವನಿಗೆ) ಬುದ್ಧಿಃ (ಬುದ್ಧಿಯು) ನಾಸ್ತಿ (ಇರುವುದಿಲ್ಲ) ಅಯುಕ್ತಸ್ಯ (ಅಯುಕ್ತನಾದವನಿಗೆ) ಭಾವನಾ (ಭಾವನೆಯು) ನ (ಇಲ್ಲ) ಅಭಾವತಃ ಚ (ಭಾವನೆಯನ್ನು ಮಾಡದವನಿಗೆ) ಶಾಂತಿಃ (ಶಾಂತಿಯು) ನ (ಇಲ್ಲ) ಅಶಾಂತಸ್ಯ (ಶಾಂತಿಯಿಲ್ಲದವನಿಗೆ) ಸುಖಂ (ಸುಖವು) ಕುತಃ (ಎಲ್ಲಿ).

೬೬. ಅಯುಕ್ತನಾದವನಿಗೆ[1] ಬುದ್ಧಿಯು[2] ಇರುವುದಿಲ್ಲ; ಅಯುಕ್ತನಾದವನಿಗೆ ಭಾವನೆಯು[3] ಇಲ್ಲ; ಭಾವನೆಯನ್ನು ಮಾಡದವನಿಗೆ ಶಾಂತಿಯು[4] ಇಲ್ಲ; ಶಾಂತಿಯಿಲ್ಲದವನಿಗೆ ಸುಖವೆಲ್ಲಿ?

1 ಮನಸ್ಸನ್ನು ಸಮಾಧಾನಮಾಡಿಕೊಳ್ಳದವನಿಗೆ.
2 ಆತ್ಮಸ್ವರೂಪವಿಷಯವಾದ ಬುದ್ಧಿಯು.
3 ಆತ್ಮಜ್ಞಾನದಲ್ಲಿ ಆಸಕ್ತಿ.
4 ವಿಷಯಗಳಲ್ಲಿ ಉಂಟಾಗುವ ಬಯಕೆಯ ಶಾಂತಿ ಅಥವಾ ಚಿತ್ತಸಮಾಧಾನ.

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭ ॥**

ಹಿ (ಏಕೆಂದರೆ) ಚರತಾಂ (ಚಲಿಸುತ್ತಿರುವ) ಇಂದ್ರಿಯಾಣಾಂ (ಇಂದ್ರಿಯಗಳನ್ನು) ಯತ್ ಮನಃ (ಯಾವ ಮನಸ್ಸು) ಅನುವಿಧೀಯತೇ (ಅನುಸರಿಸುತ್ತದೆಯೋ) ತತ್ (ಅದು) ವಾಯುಃ (ಗಾಳಿಯು) ಅಂಭಸಿ (ನೀರಿನಲ್ಲಿ) ನಾವಂ ಇವ (ದೋಣಿಯನ್ನು ಹೊಡೆದುಕೊಂಡು ಹೋಗುವಂತೆ) ಅಸ್ಯ (ಇವನ) ಪ್ರಜ್ಞಾಂ (ಪ್ರಜ್ಞೆಯನ್ನು) ಹರತಿ (ಅಪಹರಿಸುತ್ತದೆ).

೬೭. ಏಕೆಂದರೆ ಚಲಿಸುತ್ತಿರುವ[1] ಇಂದ್ರಿಯಗಳನ್ನು ಯಾವ ಮನಸ್ಸು ಅನುಸರಿಸುತ್ತದೆಯೋ[2] ಅದು ನೀರಿನಲ್ಲಿರುವ ದೋಣಿಯನ್ನು [ಪ್ರತಿಕೂಲವಾದ] ಗಾಳಿಯು ಹೊಡೆದುಕೊಂಡು ಹೋಗುವಂತೆ ಇವನ[3] ಪ್ರಜ್ಞೆಯನ್ನು[4] ಅಪಹರಿಸುತ್ತದೆ[5]

1 ತಮ್ಮ ತಮ್ಮ ವಿಷಯಗಳಲ್ಲಿ ಪ್ರವರ್ತಿಸುತ್ತಿರುವ ಇಂದ್ರಿಯಗಳು.
2 ಪುರುಷನು ಅನುವರ್ತಿಸುವ ಹಾಗೆ ಮಾಡುತ್ತದೆಯೋ.

3 ಸಾಧಕನ.

4 ಆತ್ಮ-ಅನಾತ್ಮ-ವಿವೇಕದಿಂದ ಹುಟ್ಟಿದ ಪ್ರಜ್ಞೆ.

5 ವಿಷಯಾಭಿಮುಖವಾಗಿ ಮಾಡುತ್ತದೆ.

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥**

ಮಹಾಬಾಹೋ (ಮಹಾಬಾಹುವೆ) ತಸ್ಮಾತ್ (ಆದುದರಿಂದ) ಯಸ್ಯ (ಯಾವನ) ಇಂದ್ರಿಯಾಣಿ (ಇಂದ್ರಿಯಗಳು) ಇಂದ್ರಿಯಾರ್ಥೇಭ್ಯಃ (ಶಬ್ದಾದಿ ಇಂದ್ರಿಯವಿಷಯಗಳಿಂದ) ಸರ್ವಶಃ (ಸರ್ವಪ್ರಕಾರಗಳಿಂದಲೂ) ನಿಗೃಹೀತಾನಿ (ನಿರೋಧಿಸಲ್ಪಟ್ಟಿರುವುವೋ) ತಸ್ಯ (ಅವನ) ಪ್ರಜ್ಞಾ (ಪ್ರಜ್ಞೆಯು) ಪ್ರತಿಷ್ಠಿತಾ (ಸ್ಥಿರವಾಗಿರುವುದು).

**೬೮.** ಆದುದರಿಂದ ಯಾವನು ತನ್ನ ಇಂದ್ರಿಯಗಳನ್ನು ಸರ್ವಪ್ರಕಾರ ಗಳಿಂದಲೂ ಇಂದ್ರಿಯಗಳ ವಿಷಯಗಳಿಂದ ಸೆಳೆದು ನಿಗ್ರಹಿಸುತ್ತಾನೋ ಅವನ ಪ್ರಜ್ಞೆಯು ಸ್ಥಿರವಾಗಿರುವುದು.

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೬೯ ॥**

ಸರ್ವಭೂತಾನಾಂ (ಎಲ್ಲಾ ಪ್ರಾಣಿಗಳಿಗೆ) ಯಾ (ಯಾವುದು) ನಿಶಾ (ರಾತ್ರಿಯೋ) ತಸ್ಯಾಂ (ಅದರಲ್ಲಿ) ಸಂಯಮೀ (ಜಿತೇಂದ್ರಿಯನು) ಜಾಗರ್ತಿ (ಎಚ್ಚತ್ತಿರುತ್ತಾನೆ) ಯಸ್ಯಾಂ (ಯಾವುದರಲ್ಲಿ) ಭೂತಾನಿ (ಪ್ರಾಣಿಗಳು) ಜಾಗ್ರತಿ (ಎಚ್ಚತ್ತಿರುವುವೋ) ಪಶ್ಯತಃ (ನೋಡುತ್ತಿರುವ) ಮುನೇಃ (ಮುನಿಗೆ) ಸಾ (ಅದು) ನಿಶಾ (ರಾತ್ರಿಯು).

**೬೯.** ಎಲ್ಲಾ ಪ್ರಾಣಿಗಳಿಗೆ ಯಾವುದು[1] ರಾತ್ರಿಯೋ ಅದರಲ್ಲಿ ಜಿತೇಂದ್ರಿಯನು[2] ಎಚ್ಚತ್ತಿರುತ್ತಾನೆ; ಯಾವುದರಲ್ಲಿ[3] ಪ್ರಾಣಿಗಳು ಎಚ್ಚತ್ತಿರುವುವೋ ಅದು ನೋಡುತ್ತಿರುವ[4] ಮುನಿಗೆ ರಾತ್ರಿಯು.[5]

1 ಸ್ಥಿತಪ್ರಜ್ಞನಿಗೆ ವಿಷಯವಾದ ಪರಮಾರ್ಥತತ್ತ್ವ.

2 ಯೋಗಿ.

3 ಗ್ರಾಹ್ಯ-ಗ್ರಾಹಕ-ಭೇದ-ಲಕ್ಷಣವುಳ್ಳ ಅವಿದ್ಯೆಯು ರಾತ್ರಿಯಲ್ಲಿ.

4 ಪರಮಾರ್ಥಸ್ವರೂಪವನ್ನು ನೋಡುತ್ತಿರುವ.

5 ಅವಿದ್ಯಾಪ್ರಪಂಚವು ಮುನಿಗೆ ಪ್ರಕಾಶವಾಗುವುದಿಲ್ಲ.

**ಆಪೂರ್ಯಮಾಣಮಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ
ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ೭೦ ॥**

ಆಪೂರ್ಯಮಾಣಂ (ತುಂಬಿರುವ, ಪೂರ್ಣವಾಗಿರುವ) ಅಚಲಪ್ರತಿಷ್ಠಂ (ಅಚಲವಾಗಿರುವ) ಸಮುದ್ರಂ (ಸಮುದ್ರವನ್ನು) ಆಪಃ (ನೀರುಗಳು) ಯದ್ವತ್ (ಹೇಗೆ) ಪ್ರವಿಶಂತಿ (ಪ್ರವೇಶಿಸುವುವೋ) ತದ್ವತ್ (ಹಾಗೆಯೇ) ಸರ್ವೇ (ಎಲ್ಲಾ) ಕಾಮಾಃ (ಕಾಮಗಳೂ) ಯಂ (ಯಾವನನ್ನು) ಪ್ರವಿಶಂತಿ (ಪ್ರವೇಶಿಸುವುವೋ) ಸಃ (ಅವನು) ಶಾಂತಿಂ (ಶಾಂತಿಯನ್ನು) ಆಪ್ನೋತಿ (ಹೊಂದುತ್ತಾನೆ) ಕಾಮ-ಕಾಮೀ (ಕಾಮಗಳನ್ನು ಬಯಸುವವನು) ನ (ಹೊಂದಲಾರನು).

೭೦. ಪೂರ್ಣವಾಗಿಯೂ ಅಚಲವಾಗಿಯೂ ಇರುವ ಸಮುದ್ರವನ್ನು [ನದಿಗಳ] ನೀರುಗಳು ಹೇಗೆ ಪ್ರವೇಶಿಸುವುವೋ ಹಾಗೆಯೇ ಎಲ್ಲಾ ಕಾಮಗಳು[1] ಯಾವನನ್ನು ಪ್ರವೇಶಿಸುವುವೋ,[2] ಅವನು ಶಾಂತಿಯನ್ನು[3] ಹೊಂದುತ್ತಾನೆ; ಕಾಮಗಳನ್ನು ಬಯಸುವವನು ಹೊಂದಲಾರನು.

[1] ಇಚ್ಛೆಗಳು.

[2] ಮನಸ್ಸಿನಲ್ಲಿ ಯಾವ ವಿಕಾರವನ್ನೂ ಉಂಟುಮಾಡದೆ ಆತ್ಮನಲ್ಲಿಯೇ ಅಡಗಿ ಹೋಗುವುವೋ.

[3] ಮೋಕ್ಷ.

**ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧ ॥**

ಯಃ (ಯಾವ) ಪುಮಾನ್ (ಪುರುಷನು) ಸರ್ವಾನ್ (ಎಲ್ಲಾ) ಕಾಮಾನ್ (ಕಾಮಗಳನ್ನೂ) ವಿಹಾಯ (ಬಿಟ್ಟು) ನಿಃಸ್ಪೃಹಃ (ಆಶೆಯಿಲ್ಲದವನಾಗಿ) ನಿರ್ಮಮಃ (ಮಮತೆಯಿಲ್ಲದವನಾಗಿ) ನಿರಹಂಕಾರಃ (ಅಹಂಕಾರವಿಲ್ಲದವನಾಗಿ) ಚರತಿ (ತಿರುಗುತ್ತಿರುತ್ತಾನೋ) ಸಃ (ಅವನು) ಶಾಂತಿಂ (ಶಾಂತಿಯನ್ನು) ಅಧಿಗಚ್ಛತಿ (ಹೊಂದುತ್ತಾನೆ).

೭೧. ಯಾವ ಪುರುಷನು ಕಾಮಗಳನ್ನೆಲ್ಲಾ ಬಿಟ್ಟು ಆಶೆಯಿಲ್ಲದವನಾಗಿ[1] ಮಮತೆಯಿಲ್ಲದವನಾಗಿ[2] ಅಹಂಕಾರವಿಲ್ಲದವನಾಗಿ[3] ತಿರುಗುತ್ತಿರುತ್ತಾನೋ ಅವನು ಶಾಂತಿಯನ್ನು[4] ಹೊಂದುತ್ತಾನೆ.

[1] ಶರೀರದ ಜೀವನದಲ್ಲಿಯೂ ಆಶೆಯಿಲ್ಲದವನಾಗಿ.

[2] ಶರೀರದ ಬಾಳಿಗೆ ಬೇಕಾಗುವಷ್ಟು ವಿಷಯಗಳಲ್ಲಿ ಕೂಡ 'ಇದು ನನ್ನದು' ಎಂಬ ಆಸಕ್ತಿಯಿಲ್ಲದವನಾಗಿ.

[3]ತಾನು ವಿದ್ಯಾವಂತನು ಮುಂತಾದ ಕಾರಣದಿಂದ ಆತ್ಮಸಂಭಾವನೆಯುನ್ನು ಮಾಡದೇ ಇರುವವನಾಗಿ.

[4]ಸಂಸಾರದ ಸರ್ವದುಃಖಗಳೂ ಕೊನೆಯಾಗುವ ನಿರ್ವಾಣವೆಂಬ ಹೆಸರಿನ ಶಾಂತಿ.

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨ ॥**

ಪಾರ್ಥ (ಎಲೈ ಅರ್ಜುನನೆ) ಏಷಾ (ಇದು) ಬ್ರಾಹ್ಮೀ (ಬ್ರಹ್ಮಕ್ಕೆ ಸಂಬಂಧ ಪಟ್ಟ) ಸ್ಥಿತಿಃ (ಸ್ಥಿತಿಯು) ಏನಾಂ (ಇದನ್ನು) ಪ್ರಾಪ್ಯ (ಹೊಂದಿ) ನ ವಿಮುಹ್ಯತಿ (ಮರುಳಾಗುವುದಿಲ್ಲ) ಅಂತಕಾಲೇ ಅಪಿ (ಕೊನೆಯ ವಯಸ್ಸಿನಲ್ಲಿ ಕೂಡ) ಅಸ್ಯಾಂ (ಈ ಸ್ಥಿತಿಯಲ್ಲಿ) ಸ್ಥಿತ್ವಾ (ಇದ್ದು) ಬ್ರಹ್ಮನಿರ್ವಾಣಂ (ಬ್ರಹ್ಮನಿರ್ವಾಣವನ್ನು) ಋಚ್ಛತಿ (ಹೊಂದುತ್ತಾನೆ).

೭೨. ಎಲೈ ಅರ್ಜುನ, ಇದು ಬ್ರಹ್ಮದಲ್ಲಿರುವ [ಪುರುಷನ] ಸ್ಥಿತಿಯು. ಇದನ್ನು ಹೊಂದಿ [ಯಾರೂ] ಮರುಳಾಗುವುದಿಲ್ಲ ಕೊನೆಯ ವಯಸ್ಸಿನಲ್ಲಿ[1] ಕೂಡಾ ಈ ಸ್ಥಿತಿಯಲ್ಲಿದ್ದು ಬ್ರಹ್ಮನಿರ್ವಾಣವನ್ನು ಹೊಂದುತ್ತಾನೆ.

[1]ಬ್ರಹ್ಮಚರ್ಯಾಶ್ರಮದಿಂದಲೇ ಸಂನ್ಯಾಸಮಾಡಿ ಬದುಕಿರುವ ವರೆಗೂ ಯಾವನು ಬ್ರಹ್ಮದಲ್ಲಿಯೇ ನೆಲಸಿರುವನೋ ಅವನು ಬ್ರಹ್ಮನಿರ್ವಾಣವನ್ನು ಹೊಂದುವನೆಂದು ಹೇಳುವುದು ಅನಾವಶ್ಯಕ.

**ಇತಿ ಸಾಂಖ್ಯಯೋಗೋ ನಾಮ ದ್ವಿತೀಯೋಽಧ್ಯಾಯಃ ।**

ಸಾಂಖ್ಯಯೋಗವೆಂಬ ಎರಡನೆಯ ಅಧ್ಯಾಯವು ಮುಗಿಯಿತು.

# ಮೂರನೆಯ ಅಧ್ಯಾಯ

## ಕರ್ಮಯೋಗ

### ಅರ್ಜುನ ಉವಾಚ

**ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು) — ಜನಾರ್ದನ (ಎಲೈ ಕೃಷ್ಣನೆ) ಕರ್ಮಣಃ (ಕರ್ಮಕ್ಕಿಂತ) ಬುದ್ಧಿಃ (ಜ್ಞಾನವು) ಜ್ಯಾಯಸೀ [ಇತಿ] (ಉತ್ತಮವೆಂದು) ತೇ (ನಿನ್ನ) ಮತಾ ಚೇತ್ (ಅಭಿಪ್ರಾಯವಾದರೆ) ತತ್ (ಹಾಗಾದರೆ) ಕೇಶವ (ಎಲೈ ಕೃಷ್ಣನೆ) ಮಾಂ (ನನ್ನನ್ನು) ಘೋರೇ (ಘೋರವಾದ, ಕ್ರೂರವಾದ) ಕರ್ಮೇ (ಕೆಲಸದಲ್ಲಿ) ಕಿಂ (ಏಕೆ) ನಿಯೋಜಯಸಿ (ತೊಡಗಿಸುತ್ತೀಯೆ)

೧. ಎಲೈ ಜನಾರ್ದನ, ಕರ್ಮಕ್ಕಿಂತ ಜ್ಞಾನವು ಉತ್ತಮವೆಂದು ನಿನ್ನ ಅಭಿಪ್ರಾಯವಾದರೆ, ಎಲೈ ಕೇಶವ, ನನ್ನನ್ನು ಘೋರವಾದ ಕೆಲಸದಲ್ಲಿ ಏಕೆ ತೊಡಗಿಸುತ್ತೀಯೆ?

[ಎರಡನೆಯ ಅಧ್ಯಾಯದಲ್ಲಿ ಭಗವಂತನು ಅರ್ಜುನನಿಗೆ ನಿವೃತ್ತಿರೂಪವಾದ ಜ್ಞಾನನಿಷ್ಠೆಯನ್ನೂ ಪ್ರವೃತ್ತಿರೂಪವಾದ ಕರ್ಮನಿಷ್ಠೆಯನ್ನೂ ತಿಳಿಸಿ, ಜ್ಞಾನದ ಮುಖಾಂತರ ಮೋಕ್ಷ ಲಭಿಸುವುದೆಂದು ಉಪದೇಶಮಾಡಿದನು. ಅನಂತರ 'ಕರ್ಮದಲ್ಲಿಯೇ ನಿನಗೆ ಅಧಿಕಾರ .... ಅಕರ್ಮದಲ್ಲಿ ನಿನಗೆ ಆಸಕ್ತಿಯಾಗದಿರಲಿ' ಎಂದು ಹೇಳಿದ್ದಾಯಿತು. ಆದರೆ ಕರ್ಮ-ಜ್ಞಾನಗಳ ಸಂಬಂಧವನ್ನು ಸ್ಪಷ್ಟವಾಗಿ ತಿಳಿಸಲಿಲ್ಲ. ಈ ಕಾರಣದಿಂದ ಅರ್ಜುನನಿಗೆ ಸಂದೇಹವುಂಟಾಗಿ ಮೇಲೆ ಹೇಳಿರುವ ಪ್ರಕಾರ ಪ್ರಶ್ನೆಯನ್ನು ಮಾಡುತ್ತಾನೆ.]

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ ೨ ॥**

ವ್ಯಾಮಿಶ್ರೇಣ ಇವ (ಮಿಶ್ರವಾಗಿರುವಂತಿರುವ) ವಾಕ್ಯೇನ (ಮಾತಿನಿಂದ) ಮೇ (ನನ್ನ) ಬುದ್ಧಿಂ (ಬುದ್ಧಿಯನ್ನು) ಮೋಹಯಸಿ ಇವ (ಭ್ರಾಂತಿಗೊಳಿಸುವಂತೆ ಇದ್ದೀಯೆ) ಯೇನ (ಯಾವುದರಿಂದ) ಅಹಂ (ನಾನು) ಶ್ರೇಯಃ (ಶ್ರೇಯಸ್ಸನ್ನು) ಆಪ್ನುಯಾಂ (ಹೊಂದಬಹುದೋ) ತತ್ (ಅದು) ಏಕಂ (ಒಂದನ್ನು) ನಿಶ್ಚಿತ್ಯ (ನಿಶ್ಚಯಿಸಿ) ವದ (ಹೇಳು).

೨. ಮಿಶ್ರವಾಗಿರುವಂತಿರುವ[1] ಮಾತಿನಿಂದ ನನ್ನ ಬುದ್ಧಿಯನ್ನು ಭ್ರಾಂತಿಗೊಳಿಸುವಂತೆ[2] ಇದ್ದೀಯೆ. ಯಾವುದರಿಂದ ನಾನು ಶ್ರೇಯಸ್ಸನ್ನು ಹೊಂದಬಹುದೋ ಅದೊಂದನ್ನು[3] ನಿಶ್ಚಯಿಸಿ ಹೇಳು.

1 ವಿರುದ್ಧಾರ್ಥವುಳ್ಳ.

2 ಅರ್ಜುನನ ಭ್ರಾಂತಿಯನ್ನು ಪರಿಹರಿಸುವುದು ಗೀತೆಯ ಒಂದು ಉದ್ದೇಶ. ಆದುದರಿಂದ ಇವನ ಬುದ್ಧಿಯನ್ನು 'ಭ್ರಾಂತಿಗೊಳಿಸುವಂತೆ' ಇವನಿಗೆ ಕಾಣುತ್ತೆ. ಇದು ಅರ್ಜುನನ ಅಶಕ್ತತೆಯೇ ಹೊರತು ಉಪದೇಶದ ನ್ಯೂನತೆಯಲ್ಲ.

3 ಅಮಿಶ್ರವಾದ, ವಿರುದ್ಧಾರ್ಥವಿಲ್ಲದ ಮಾತು.

ಶ್ರೀಭಗವಾನ್ ಉವಾಚ

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥ ೩ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಅನಘ (ಪಾಪರಹಿತನೆ) ಅಸ್ಮಿನ್ (ಈ) ಲೋಕೇ (ಲೋಕದಲ್ಲಿ) ದ್ವಿವಿಧಾ (ಎರಡು ಬಗೆಯಾದ) ನಿಷ್ಠಾ (ನಿಷ್ಠೆಯು) ಮಯಾ (ನನ್ನಿಂದ) ಪುರಾ (ಹಿಂದೆ) ಪ್ರೋಕ್ತಾ (ಹೇಳಲ್ಪಟ್ಟಿತು) ಜ್ಞಾನಯೋಗೇನ (ಜ್ಞಾನಯೋಗದ ದ್ವಾರಾ) ಸಾಂಖ್ಯಾನಾಂ (ಸಾಂಖ್ಯರ ನಿಷ್ಠೆ) ಕರ್ಮಯೋಗೇನ (ಕರ್ಮಯೋಗದ ದ್ವಾರಾ) ಯೋಗಿನಾಂ (ಯೋಗಿಗಳ ನಿಷ್ಠೆ).

೩. ಎಲೈ ಪಾಪರಹಿತನೆ, ಈ ಲೋಕದಲ್ಲಿ ಎರಡು ವಿಧವಾದ ನಿಷ್ಠೆಯನ್ನು ನಾನು ಹಿಂದೆ ಹೇಳಿದೆನು: ಜ್ಞಾನಯೋಗದ ದ್ವಾರಾ ಸಾಂಖ್ಯರ[1] (ನಿಷ್ಠೆ), ಕರ್ಮಯೋಗದ ದ್ವಾರಾ ಯೋಗಿಗಳ (ನಿಷ್ಠೆ).

1 ಕಪಿಲಮುನಿಯಿಂದ ಪ್ರತಿಪಾದಿತವಾದ ಸಾಂಖ್ಯವು ಇದಕ್ಕಿಂತ ಭಿನ್ನವಾದ ಒಂದು ಮತ ಅಥವಾ ದರ್ಶನ. ಆತ್ಮ-ಅನಾತ್ಮಗಳ ವಿಷಯವನ್ನು ವಿಂಗಡಿಸಿ ತಿಳಿದುಕೊಂಡು ವೇದಾಂತದ ವಿಜ್ಞಾನದಿಂದ ಪರಮಾರ್ಥವನ್ನು ಚೆನ್ನಾಗಿ ನಿಶ್ಚಯಿಸಿಕೊಂಡು ಬ್ರಹ್ಮದಲ್ಲಿಯೇ ನಿಷ್ಠರಾಗಿರುವರು ಸಾಂಖ್ಯರು.

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪ ॥**

ಕರ್ಮಣಾಂ (ಕರ್ಮಗಳ) ಅನಾರಂಭಾತ್ (ಅನನುಷ್ಠಾನದಿಂದ) ಪುರುಷಃ (ಮನುಷ್ಯನು) ನೈಷ್ಕರ್ಮ್ಯಂ (ನೈಷ್ಕರ್ಮ್ಯವನ್ನು) ನ ಅಶ್ನುತೇ (ಹೊಂದುವುದಿಲ್ಲ)

ಚ (ಮತ್ತು) ಸಂನ್ಯಸನಾತ್ ಏವ (ಬರಿಯ ಕರ್ಮತ್ಯಾಗದಿಂದ) ಸಿದ್ಧಿಂ (ಸಿದ್ಧಿಯನ್ನು) ನ ಸಮಧಿಗಚ್ಛತಿ (ಹೊಂದುವುದಿಲ್ಲ).

೪. ಕರ್ಮಗಳನ್ನು[1] ಆರಂಭಿಸದೆ ಇರುವುದರಿಂದ ಮನುಷ್ಯನು ನೈಷ್ಕರ್ಮ್ಯವನ್ನು[2] ಹೊಂದುವುದಿಲ್ಲ ಮತ್ತು ಬರಿಯ ಕರ್ಮತ್ಯಾಗದಿಂದಲೇ[3] ಸಿದ್ಧಿಯನ್ನು ಹೊಂದುವುದಿಲ್ಲ.

[1] ಶಾಸ್ತ್ರದಲ್ಲಿ ವಿಧಿಸಲ್ಪಟ್ಟ ಕರ್ಮಗಳನ್ನು.

[2] ನೈಷ್ಕರ್ಮ್ಯ ಎಂದರೆ ಜ್ಞಾನಯೋಗದ ನಿಷ್ಠೆ; ನಿಷ್ಕ್ರಿಯವಾದ ಆತ್ಮಸ್ವರೂಪದಲ್ಲೇ ನಿಲ್ಲುವುದು; ಕರ್ಮಗಳ ಅನುಷ್ಠಾನವು ನೈಷ್ಕರ್ಮ್ಯಕ್ಕೆ ಉಪಾಯವು. ಉಪಾಯವಿಲ್ಲದೆ ಸಾಧ್ಯವು ದೊರಕುವುದಿಲ್ಲ.

[3] ಜ್ಞಾನರಹಿತವಾದ ಕರ್ಮತ್ಯಾಗದಿಂದ.

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

ಕಶ್ಚಿತ್ (ಯಾವನೂ) ಜಾತು (ಎಂದಿಗೂ) ಕ್ಷಣಮ್ ಅಪಿ (ಒಂದು ಕ್ಷಣಮಾತ್ರವಾದರೂ) ಅಕರ್ಮಕೃತ್ (ಕೆಲಸಮಾಡದೆ) ನ ಹಿ ತಿಷ್ಠತಿ (ಇರಲಾರನು) ಹಿ (ಏಕೆಂದರೆ) ಸರ್ವಃ (ಪ್ರತಿಯೊಬ್ಬನೂ) ಪ್ರಕೃತಿಜೈಃ (ಪ್ರಕೃತಿಯಿಂದ ಹುಟ್ಟಿದ) ಗುಣೈಃ (ಗುಣಗಳಿಂದ) ಅವಶಃ (ಪರವಶನಾಗಿ) ಕರ್ಮ [ಪ್ರತಿ] (ಕರ್ಮವನ್ನು ಕುರಿತು) ಕಾರ್ಯತೇ (ಪ್ರವರ್ತಿಸಲ್ಪಡುತ್ತಾನೆ).

೫. ಯಾವನೂ ಎಂದಿಗೂ ಒಂದು ಕ್ಷಣಮಾತ್ರವಾದರೂ ಕೆಲಸಮಾಡದೆ ಇರಲಾರನು;[1] ಏಕೆಂದರೆ ಪ್ರತಿಯೊಬ್ಬನೂ ಪ್ರಕೃತಿಯಿಂದ ಹುಟ್ಟಿದ ಗುಣಗಳಿಂದ[2] ಪರವಶನಾಗಿ ಕರ್ಮವನ್ನು ಮಾಡುತ್ತಲೇ ಇರುತ್ತಾನೆ.

[1] ಕರ್ಮದಲ್ಲುಂಟಾಗುವ ಆಸಕ್ತಿಯನ್ನು ಬಿಡುವುದು ಸಾಧ್ಯವೇ ವಿನಾ ಅಶೇಷವಾಗಿ ಕರ್ಮವನ್ನು ಬಿಡಲು ಸಾಧ್ಯವಾಗುವುದಿಲ್ಲ.

[2] ಸತ್ತ್ವ–ರಜಸ್ತಮೋಗುಣಗಳು.

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬ ॥**

ಯಃ (ಯಾವನು) ಕರ್ಮೇಂದ್ರಿಯಾಣಿ (ಕರ್ಮೇಂದ್ರಿಯಗಳನ್ನು) ಸಂಯಮ್ಯ (ನಿಗ್ರಹಿಸಿ) ಇಂದ್ರಿಯಾರ್ಥಾನ್ (ಇಂದ್ರಿಯಗಳ ವಿಷಯಗಳನ್ನು) ಮನಸಾ (ಮನಸ್ಸಿನಿಂದ) ಸ್ಮರನ್ ಆಸ್ತೇ (ಸ್ಮರಿಸುತ್ತಿರುವನೋ) ಸಃ (ಅವನು) ವಿಮೂಢಾತ್ಮಾ (ವಿಮೂಢಾತ್ಮನು) ಮಿಥ್ಯಾಚಾರಃ (ಮಿಥ್ಯಾಚಾರನು ಎಂದು) ಉಚ್ಯತೇ (ಹೇಳಲ್ಪಡುತ್ತಾನೆ).

೬. ಯಾವನು ಕರ್ಮೇಂದ್ರಿಯಗಳನ್ನು[1] ನಿಗ್ರಹಿಸಿ ಇಂದ್ರಿಯಗಳ ವಿಷಯಗಳನ್ನು[2] ಮನಸ್ಸಿನಿಂದ ಸ್ಮರಿಸುತ್ತಿರುವನೋ ಅವನು ವಿಮೂಢಾತ್ಮನೆಂದೂ[3] ಮಿಥ್ಯಾಚಾರನೆಂದೂ[4] ಹೇಳಲ್ಪಡುತ್ತಾನೆ.

[ಮನಸ್ಸಿನಲ್ಲಿ ವಿಷಯವಾಸನೆಗಳಿರುವಾಗ ಕೇವಲ ಕರ್ಮೇಂದ್ರಿಯಗಳ ನಿಗ್ರಹದಿಂದ ಹೆಚ್ಚು ಪ್ರಯೋಜನವಿಲ್ಲ. ಅವಿವೇಕದಿಂದ ಕರ್ಮತ್ಯಾಗಮಾಡುವ ಮನುಷ್ಯನನ್ನು ಈ ಶ್ಲೋಕದಲ್ಲಿ ಖಂಡನೆಮಾಡಿದೆ.]

[1] ಬಾಯಿ ಕೈ ಕಾಲು ವಿಸರ್ಗ-ಜನನೇಂದ್ರಿಯಗಳನ್ನು.

[2] ಪಂಚಜ್ಞಾನೇಂದ್ರಿಯಗಳಿಗೆ ತಿಳಿಯುವ ರೂಪ ರಸ ಗಂಧ ಸ್ಪರ್ಶ ಶಬ್ದಗಳೆಂಬ ವಿಷಯಗಳನ್ನು.

[3] ಮೂಢವಾದ ಮನಸ್ಸುಳ್ಳವನು.

[4] ತಪ್ಪಾದ ನಡತೆಯುಳ್ಳವನು, ಪಾಪಾಚಾರವುಳ್ಳವನು ಅಥವಾ ಸಂಕಲ್ಪವನ್ನು ಒಂದು ರೀತಿಯಾಗಿ ಮಾಡಿ ಬೇರೆ ರೀತಿಯಾಗಿ ಆಚರಿಸುವವನು.

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥**

ಅರ್ಜುನ (ಎಲೈ ಅರ್ಜುನನೆ) ತು (ಆದರೆ) ಯಃ (ಯಾವನು) ಇಂದ್ರಿಯಾಣಿ (ಇಂದ್ರಿಯಗಳನ್ನು) ಮನಸಾ (ಮನಸ್ಸಿನಿಂದ) ನಿಯಮ್ಯ (ನಿಗ್ರಹಿಸಿ) ಅಸಕ್ತಃ (ಅಸಕ್ತನಾಗಿ) ಕರ್ಮೇಂದ್ರಿಯೈಃ (ಕರ್ಮೇಂದ್ರಿಯಗಳ ದ್ವಾರಾ) ಕರ್ಮಯೋಗಂ (ಕರ್ಮಯೋಗವನ್ನು) ಆರಭತೇ (ಆರಂಭಿಸುತ್ತಾನೋ) ಸಃ (ಅವನು) ವಿಶಿಷ್ಯತೇ (ಅತಿಶಯಿಸುತ್ತಾನೆ).

೭. ಆದರೆ, ಎಲೈ ಅರ್ಜುನ, ಯಾವನು ಇಂದ್ರಿಯಗಳನ್ನು[1] ಮನಸ್ಸಿನಿಂದ ನಿಗ್ರಹಿಸಿ ಅಸಕ್ತನಾಗಿ ಕರ್ಮೇಂದ್ರಿಯಗಳ ದ್ವಾರಾ ಕರ್ಮಯೋಗವನ್ನು ಆರಂಭಿಸುತ್ತಾನೋ ಅವನು (ಮಿಥ್ಯಾಚಾರನನ್ನು) ಅತಿಶಯಿಸುತ್ತಾನೆ.

[1] ಜ್ಞಾನೇಂದ್ರಿಯಗಳು.

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ ॥ ೮ ॥**

ತ್ವಂ (ನೀನು) ನಿಯತಂ ಕರ್ಮ (ನಿತ್ಯಕರ್ಮವನ್ನು) ಕುರು (ಮಾಡು) ಹಿ (ಏಕೆಂದರೆ) ಅಕರ್ಮಣಃ (ಅಕರ್ಮಕ್ಕಿಂತ) ಕರ್ಮ (ಕರ್ಮವು) ಜ್ಯಾಯಃ (ಉತ್ತಮವು) ಚ (ಮತ್ತು) ಅಕರ್ಮಣಃ (ಕರ್ಮರಹಿತನಾದ) ತೇ (ನಿನಗೆ) ಶರೀರ-ಯಾತ್ರಾ ಅಪಿ (ಜೀವನಯಾತ್ರೆಯು ಕೂಡ) ನ ಪ್ರಸಿದ್ಧ್ಯೇತ್ (ಸಾಧ್ಯವಾಗಲಾರದು).

೮. ನೀನು ನಿತ್ಯಕರ್ಮವನ್ನು[1] ಮಾಡು; ಏಕೆಂದರೆ ಅಕರ್ಮಕ್ಕಿಂತ ಕರ್ಮವು ಉತ್ತಮವು; ಕರ್ಮವನ್ನು ಮಾಡದೇ ಇರುವುದರಿಂದ ನಿನಗೆ ಜೀವನಯಾತ್ರೆಯೂ ಕೂಡ ಸಾಧ್ಯವಾಗಲಾರದು.

*1 ಶಾಸ್ತ್ರದಲ್ಲಿ ವಿಧಿಸಿರುವ ಸಂಧ್ಯಾವಂದನೆ ಮುಂತಾದ ನಿತ್ಯಕರ್ಮಗಳನ್ನು.*

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯ ॥**

ಯಜ್ಞಾರ್ಥಾತ್ ಕರ್ಮಣಃ (ಯಜ್ಞಾರ್ಥವಾಗಿ ಮಾಡಿದ ಕರ್ಮಕ್ಕಿಂತಲೂ) ಅನ್ಯತ್ರ (ಬೇರೆ ಕಡೆಯಲ್ಲಿ) ಅಯಂ ಲೋಕಃ (ಈ ಜನವು) ಕರ್ಮಬಂಧನಃ (ಕರ್ಮದಿಂದ ಬಂಧಿಸಲ್ಪಡುತ್ತದೆ) ಕೌಂತೇಯ (ಎಲೈ ಅರ್ಜುನನೆ) ತದರ್ಥಂ (ಅದಕ್ಕೋಸ್ಕರ) ಮುಕ್ತಸಂಗಃ (ಆಸಕ್ತಿಯಿಂದ ಮುಕ್ತನಾಗಿ) ಕರ್ಮ (ಕರ್ಮವನ್ನು) ಸಮಾಚರ (ಸರಿಯಾಗಿ ಮಾಡು).

೯. ಯಜ್ಞಕ್ಕಾಗಿ ಮಾಡಿದ ಕರ್ಮವನ್ನು ಬಿಟ್ಟರೆ ಬೇರೆ ಕಡೆಯಲ್ಲಿ[1] ಈ ಜನರು ಕರ್ಮದಿಂದ ಬಂಧಿಸಲ್ಪಡುತ್ತಾರೆ; ಆದುದರಿಂದ ಎಲೈ ಅರ್ಜುನ, ಅದಕ್ಕೋಸ್ಕರ[2] ಆಸಕ್ತಿಯಿಂದ ಮುಕ್ತನಾಗಿ[3] ಕರ್ಮವನ್ನು ಸರಿಯಾಗಿ ಮಾಡು.

1 ಸ್ವಾರ್ಥಪರವಾದ ಕರ್ಮಗಳಿಂದ.
2 ಯಜ್ಞಕ್ಕೋಸ್ಕರ.
3 ಕರ್ಮಫಲಗಳಲ್ಲಿ ಆಸಕ್ತಿಯನ್ನು ಬಿಟ್ಟವನಾಗಿ.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦ ॥**

ಪುರಾ (ಹಿಂದೆ) ಪ್ರಜಾಪತಿಃ (ಪ್ರಜಾಪತಿಯು) ಸಹಯಜ್ಞಾಃ (ಯಜ್ಞಗಳೊಂದಿಗೆ) ಪ್ರಜಾಃ (ಪ್ರಜೆಗಳನ್ನು) ಸೃಷ್ಟ್ವಾ (ಸೃಷ್ಟಿಸಿ) ಉವಾಚ (ಹೇಳಿದನು)

ಅನೇನ (ಇದರಿಂದ) ಪ್ರಸವಿಷ್ಯಧ್ವಂ (ವೃದ್ಧಿಯನ್ನು ಹೊಂದಿರಿ) ಏಷಃ (ಇದು) ವಃ (ನಿಮಗೆ) ಇಷ್ಟಕಾಮಧುಕ್ (ಇಷ್ಟವನ್ನು ಪೂರಯಿಸುವ ಕಾಮಧೇನು) ಅಸ್ತು (ಆಗಲಿ).

೧೦. ಹಿಂದೆ[1] ಪ್ರಜಾಪತಿಯು ಯಜ್ಞಗಳೊಂದಿಗೆ ಪ್ರಜೆಗಳನ್ನು ಸೃಷ್ಟಿಸಿ (ಈ ರೀತಿಯಾಗಿ) ಹೇಳಿದನು: ಇದರಿಂದ[2] (ನೀವು) ವೃದ್ಧಿಯನ್ನು ಹೊಂದಿರಿ. ಇದು[3] ನಿಮಗೆ ಇಷ್ಟವನ್ನು ಪೂರಯಿಸುವ ಕಾಮಧೇನುವಾಗಲಿ.

[1] ಸೃಷ್ಟಿಯ ಕಾಲದಲ್ಲಿ.
[2] ಯಜ್ಞದಿಂದ.
[3] ಯಜ್ಞ.

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥**

ಅನೇನ (ಈ ಯಜ್ಞದ್ವಾರಾ) [ನೀವು] ದೇವಾನ್ (ದೇವತೆಗಳನ್ನು) ಭಾವಯತ (ತುಷ್ಟಿಪಡಿಸಿ) ತೇ (ಆ) ದೇವಾಃ (ದೇವತೆಗಳು) ವಃ (ನಿಮ್ಮನ್ನು) ಭಾವಯಂತು (ಪೋಷಿಸಲಿ) ಪರಸ್ಪರಂ (ಪರಸ್ಪರವಾಗಿ) ಭಾವಯಂತಃ (ಭಾವಿಸುತ್ತಿರುವ) [ನೀವು] ಪರಂ ಶ್ರೇಯಃ (ಪರಮ ಶ್ರೇಯಸ್ಸು) ಅವಾಪ್ಸ್ಯಥ (ಹೊಂದುತ್ತೀರಿ).

೧೧. (ನೀವು) ಈ ಯಜ್ಞದ್ವಾರಾ ದೇವತೆಗಳನ್ನು ತುಷ್ಟಿಪಡಿಸಿ; ಆ ದೇವತೆಗಳೂ ನಿಮ್ಮನ್ನು ಪೋಷಿಸಲಿ; (ಹೀಗೆ) ಪರಸ್ಪರವಾಗಿ ಭಾವಿಸುತ್ತಿದ್ದರೆ (ನೀವು) ಪರಮಶ್ರೇಯಸ್ಸನ್ನು ಹೊಂದುತ್ತೀರಿ.

**ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥ ೧೨ ॥**

ಯಜ್ಞಭಾವಿತಾಃ (ಯಜ್ಞಗಳಿಂದ ತುಷ್ಟಿಪಡೆದ) ದೇವಾಃ (ದೇವತೆಗಳು) ವಃ (ನಿಮಗೆ) ಇಷ್ಟಾನ್ (ಇಷ್ಟವಾದ) ಭೋಗಾನ್ (ಭೋಗಗಳನ್ನು) ದಾಸ್ಯಂತೇ ಹಿ (ಅನುಗ್ರಹಿಸುತ್ತಾರೆ) ತೈಃ (ಅವರಿಂದ, ದೇವತೆಗಳಿಂದ) ದತ್ತಾನ್ (ಅನುಗ್ರಹಿಸಲ್ಪಟ್ಟ ಭೋಗಗಳನ್ನು) ಏಭ್ಯಃ (ಇವರಿಗೆ) ಅಪ್ರದಾಯ (ಕೊಡದೆ) ಯಃ (ಯಾವನು) ಭುಂಕ್ತೇ (ಅನುಭವಿಸುತ್ತಾನೋ) ಸಃ (ಅವನು) ಸ್ತೇನ ಏವ (ಕಳ್ಳನೇ).

೧೨. ಯಜ್ಞಗಳಿಂದ ತುಷ್ಟಿಪಡೆದ ದೇವತೆಗಳು ನಿಮಗೆ ಇಷ್ಟವಾದ ಭೋಗಗಳನ್ನು ಅನುಗ್ರಹಿಸುತ್ತಾರೆ. ಅವರಿಂದ ಅನುಗ್ರಹಿಸಲ್ಪಟ್ಟ (ಭೋಗ-

ಗಳನ್ನು) ಅವರಿಗೆ ಕೊಡದೆ ಯಾವನು (ತಾನೇ) ಅನುಭವಿಸುತ್ತಾನೋ ಅವನು ಕಳ್ಳನೇ.

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ ೧೩ ॥**

ಯಜ್ಞಶಿಷ್ಟಾಶಿನಃ (ಯಜ್ಞದ ಶೇಷವನ್ನು ತಿನ್ನುವ) ಸಂತಃ (ಸಾಧುಗಳು) ಸರ್ವಕಿಲ್ಬಿಷೈಃ (ಸರ್ವದೋಷಗಳಿಂದಲೂ) ಮುಚ್ಯಂತೇ (ಮುಕ್ತರಾಗುತ್ತಾರೆ) ತು (ಆದರೆ) ಯೇ ಪಾಪಾಃ (ಯಾವ ಪಾಪಿಗಳು) ಆತ್ಮಕಾರಣಾತ್ (ತಮಗೋಸ್ಕರವಾಗಿಯೇ) ಪಚಂತಿ (ಪಾಕಮಾಡಿಕೊಳ್ಳುತ್ತಾರೋ) ತೇ (ಅವರು) ಅಘಂ (ಪಾಪವನ್ನು) ಭುಂಜತೇ (ಉಣ್ಣುತ್ತಾರೆ).

**೧೩.** ಯಜ್ಞದ ಶೇಷವನ್ನು[1] ಉಣ್ಣುವ ಸಾಧುಗಳು ಸರ್ವದೋಷಗಳಿಂದಲೂ[2] ಮುಕ್ತರಾಗುತ್ತಾರೆ. ಆದರೆ ಯಾವ ಪಾಪಿಗಳು ತಮಗೋಸ್ಕರವಾಗಿಯೇ ಪಾಕಮಾಡಿಕೊಳ್ಳುತ್ತಾರೋ ಅವರು ಪಾಪವನ್ನು[3] ಉಣ್ಣುತ್ತಾರೆ.

1 ದೇವಯಜ್ಞಾದಿಗಳನ್ನು ಮಾಡಿ ಉಳಿಯುವ ಅಮೃತವೆಂಬ ಹೆಸರಿನ ಅನ್ನವನ್ನು.

2 ಒಲೆ, ಅರೆಯುವ ಕಲ್ಲು, ಪೊರಕೆ, ಒನಕೆ, ನೀರಿನ ಪಾತ್ರೆ–ಇವುಗಳಿಂದ ಉಂಟಾಗುವ ಪಾಪಗಳಿಂದ.

3 ಪಾಪರೂಪವಾದ ಆಹಾರವನ್ನು.

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥**
**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ ೧೫ ॥**

ಅನ್ನಾತ್ (ಅನ್ನದಿಂದ) ಭೂತಾನಿ (ಪ್ರಾಣಿಗಳು) ಭವಂತಿ (ಉತ್ಪನ್ನವಾಗುತ್ತವೆ) ಪರ್ಜನ್ಯಾತ್ (ಮಳೆಯಿಂದ) ಅನ್ನಸಂಭವಃ (ಅನ್ನದ ಉತ್ಪತ್ತಿಯು ಉಂಟಾಗುತ್ತದೆ) ಯಜ್ಞಾತ್ (ಯಜ್ಞದಿಂದ) ಪರ್ಜನ್ಯಃ (ಮಳೆಯು) ಭವತಿ (ಆಗುತ್ತದೆ) ಯಜ್ಞಃ (ಯಜ್ಞವು) ಕರ್ಮಸಮುದ್ಭವಃ (ಕರ್ಮದಿಂದ ಉದ್ಭವಿಸುತ್ತದೆ) ಕರ್ಮ (ಕರ್ಮವು) ಬ್ರಹ್ಮೋದ್ಭವಂ (ಬ್ರಹ್ಮದಿಂದ ಉಂಟಾಗುತ್ತದೆಯೆಂದು) ವಿದ್ಧಿ (ತಿಳಿ) ಬ್ರಹ್ಮ (ಬ್ರಹ್ಮವು) ಅಕ್ಷರಸಮುದ್ಭವಂ (ಅಕ್ಷರದಿಂದ ಉದ್ಭವಿಸುವುದು) ತಸ್ಮಾತ್ (ಆದುದರಿಂದ) ಸರ್ವಗತಂ (ಸರ್ವವ್ಯಾಪಿಯಾಗಿರುವ) ಬ್ರಹ್ಮ (ಬ್ರಹ್ಮವು) ನಿತ್ಯಂ (ಸದಾ) ಯಜ್ಞೇ (ಯಜ್ಞದಲ್ಲಿ) ಪ್ರತಿಷ್ಠಿತಂ (ಪ್ರತಿಷ್ಠಿತವಾಗಿರುವುದು).

೧೪-೧೫. ಅನ್ನದಿಂದ ಪ್ರಾಣಿಗಳು ಉತ್ಪನ್ನವಾಗುತ್ತವೆ; ಮಳೆಯಿಂದ ಅನ್ನದ ಉತ್ಪತ್ತಿಯು (ಉಂಟಾಗುತ್ತದೆ); ಯಜ್ಞದಿಂದ ಮಳೆಯಾಗುತ್ತದೆ; ಯಜ್ಞವು ಕರ್ಮದಿಂದ ಉದ್ಭವಿಸುತ್ತದೆ; ಕರ್ಮವು ಬ್ರಹ್ಮದಿಂದ ಉಂಟಾಗುತ್ತದೆಯೆಂದು ತಿಳಿ; ಬ್ರಹ್ಮವು ಅಕ್ಷರದಿಂದ ಉದ್ಭವಿಸುವುದು. ಆದುದರಿಂದ ಸರ್ವವ್ಯಾಪಿಯಾಗಿರುವ ಬ್ರಹ್ಮವು ಸದಾ ಯಜ್ಞದಲ್ಲಿ ಪ್ರತಿಷ್ಠಿತವಾಗಿರುವುದು.

ಶ್ರೀಶಂಕರಾಚಾರ್ಯರು ಈ ಶ್ಲೋಕಗಳ ಅರ್ಥವನ್ನು ಈ ರೀತಿ ಹೇಳಿರುವರು—ಅನ್ನದಿಂದ ಪ್ರಾಣಿಗಳು ಉತ್ಪನ್ನವಾಗುತ್ತವೆ; ಮಳೆಯಿಂದ ಅನ್ನವು, ಯಜ್ಞವೆಂಬ ಅಪೂರ್ವದಿಂದ ಮಳೆಯು, ಋತ್ವಿಗ್-ಯಜಮಾನರ ಕರ್ಮದಿಂದ ಅಪೂರ್ವವು, ಬ್ರಹ್ಮ ಎಂದರೆ ವೇದದಿಂದ ಕರ್ಮವು; ಪರಮಾತ್ಮನಿಂದ (ಅಕ್ಷರದಿಂದ) ವೇದವು ಸಂಭವಿಸುತ್ತದೆ. ವೇದವು ಸರ್ವಾರ್ಥಗಳನ್ನು ಪ್ರಕಾಶಿಸುತ್ತಿದ್ದರೂ ಯಜ್ಞವಿಧಿಯಲ್ಲೇ ತಾತ್ಪರ್ಯವುಳ್ಳದ್ದಾಗಿರುವುದರಿಂದ ಯಜ್ಞದಲ್ಲಿ ನೆಲೆಸಿರುತ್ತದೆ.

ಶ್ರೀರಾಮಾನುಜಾಚಾರ್ಯರು ಜಗಚ್ಚಕ್ರವನ್ನು ಈ ರೀತಿ ಸಾಧಿಸಿದ್ದಾರೆ— ಅನ್ನದಿಂದ ಜೀವಯುಕ್ತವಾದ ಶರೀರಗಳು ಉತ್ಪನ್ನವಾಗುತ್ತವೆ; ಮಳೆಯಿಂದ ಅನ್ನವು, ಯಜ್ಞದಿಂದ ಮಳೆಯು, ದ್ರವ್ಯಾರ್ಜನೆ ಮುಂತಾದ ಕರ್ಮಗಳಿಂದ ಯಜ್ಞವು, ಬ್ರಹ್ಮ ಶಬ್ದದಿಂದ ಹೇಳಲ್ಪಟ್ಟ ಪ್ರಕೃತಿಯ ಪರಿಣಾಮರೂಪವಾದ ಶರೀರದಿಂದ ಕರ್ಮವು; ಶರೀರವು ಅಕ್ಷರಶಬ್ದದಿಂದ ಹೇಳಲ್ಪಟ್ಟ ಜೀವಾತ್ಮದ ದ್ವಾರಾ ಉಂಟಾಗುತ್ತದೆ. ಆದುದರಿಂದ ಶರೀರವು ಸದಾ ಯಜ್ಞದಲ್ಲಿ ಪ್ರತಿಷ್ಠಿತವಾಗಿರುತ್ತದೆ.

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥ ೧೬ ॥**

ಪಾರ್ಥ (ಎಲೈ ಅರ್ಜುನನೆ) ಏವಂ (ಈ ಪ್ರಕಾರ) ಪ್ರವರ್ತಿತಂ (ಪ್ರವರ್ತಿಸಲ್ಪಟ್ಟ) ಚಕ್ರಂ (ಜಗಚ್ಚಕ್ರವನ್ನು) ಯಃ (ಯಾವನು) ಇಹ (ಇಲ್ಲಿ) ನ ಅನುವರ್ತಯತಿ (ಅನುಸರಿಸುವುದಿಲ್ಲವೋ) ಅಘಾಯುಃ (ಪಾಪಾಯುವೂ) ಇಂದ್ರಿಯಾರಾಮಃ (ಇಂದ್ರಿಯಾರಾಮನೂ ಆದ) ಸಃ (ಅವನು) ಮೋಘಂ (ವ್ಯರ್ಥವಾಗಿ) ಜೀವತಿ (ಜೀವಿಸಿರುತ್ತಾನೆ).

೧೬. ಎಲೈ ಅರ್ಜುನ, ಈ ರೀತಿಯಾಗಿ ಪ್ರವರ್ತಿಸಲ್ಪಟ್ಟ ಜಗಚ್ಚಕ್ರವನ್ನು ಯಾವನು ಇಲ್ಲಿ ಅನುಸರಿಸುವುದಿಲ್ಲವೋ, ಪಾಪಾಯುವೂ[1] ಇಂದ್ರಿಯಾರಾಮನೂ[2] ಆದ ಅವನು ವ್ಯರ್ಥವಾಗಿ ಜೀವಿಸಿರುತ್ತಾನೆ.

[1] ಪಾಪವೇ ಅವನ ಆಯುಸ್ಸು ಅಥವಾ ಜೀವನ ಎಂದರೆ ಪಾಪಕರ್ಮಕ್ಕಾಗಿ ಅವನು ಜೀವಿಸಿರುತ್ತಾನೆ.

[2] ಆತ್ಮಾರಾಮನಲ್ಲ.

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥**

ತು (ಆದರೆ) ಯಃ ಮಾನವಃ (ಯಾವ ಮಾನವನು) ಆತ್ಮರತಿಃ (ಆತ್ಮನಲ್ಲಿಯೇ ಪ್ರೀತಿಯುಳ್ಳವನಾಗಿ) ಆತ್ಮತೃಪ್ತಃ ಏವ ಚ (ಆತ್ಮನಲ್ಲಿಯೇ ತೃಪ್ತನಾಗಿ) ಆತ್ಮನಿ ಏವ ಚ (ಮತ್ತು ಆತ್ಮನಲ್ಲಿಯೇ) ಸಂತುಷ್ಟಃ ಸ್ಯಾತ್ (ಸಂತುಷ್ಟನಾಗಿ ಇರುವನೋ) ತಸ್ಯ (ಅವನಿಗೆ) ಕಾರ್ಯಂ (ಕರ್ತವ್ಯವು) ನ ವಿದ್ಯತೇ (ಇರುವುದಿಲ್ಲ).

೧೭. ಯಾವ ಮಾನವನು ಆತ್ಮನಲ್ಲಿಯೇ ಪ್ರೀತಿಯುಳ್ಳವನಾಗಿ[1] ಆತ್ಮನಲ್ಲಿಯೇ ತೃಪ್ತನಾಗಿ[2] ಆತ್ಮನಲ್ಲಿಯೇ ಸಂತುಷ್ಟನಾಗಿ[3] ಇರುವನೋ ಅವನಿಗೆ (ಯಾವ) ಕರ್ತವ್ಯವೂ ಇರುವುದಿಲ್ಲ.

1 ವಿಷಯುವಸ್ತುಗಳಲ್ಲಿ ಪ್ರೀತಿಯಿಲ್ಲದೆ.
2 ಆಹಾರಾದಿಗಳಲ್ಲಿ ತೃಪ್ತನಾಗದೆ.
3 ಬಾಹ್ಯವಿಷಯುಗಳಲ್ಲಿ ಸಂತುಷ್ಟನಾಗದೆ.

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥**

ಇಹ (ಇಲ್ಲಿ) ಕೃತೇನ (ಕರ್ಮಾನುಷ್ಠಾನದ ದ್ವಾರಾ) ತಸ್ಯ (ಅವನ) ಅರ್ಥಃ (ಪ್ರಯೋಜನವು) ನ ಏವ (ಇಲ್ಲ) ಅಕೃತೇನ (ಕರ್ಮವನ್ನು ಮಾಡದಿದ್ದುದರಿಂದ) ಕಃ ಚ (ಯಾವುದೂ) ನ (ಇಲ್ಲ) ಸರ್ವಭೂತೇಷು ಚ (ಮತ್ತು ಸರ್ವಪ್ರಾಣಿಗಳಲ್ಲಿಯೂ) ಅಸ್ಯ (ಇವನ) ಕಃ ಚಿತ್ (ಯಾವುದೊಂದು) ಅರ್ಥವ್ಯಪಾಶ್ರಯಃ (ಪ್ರಯೋಜನಸಂಬಂಧವು) ನ (ಇರುವುದಿಲ್ಲ).

೧೮. ಇಲ್ಲಿ ಕರ್ಮದ ಅನುಷ್ಠಾನದಿಂದ ಅವನಿಗೆ ಯಾವ ಪ್ರಯೋಜನವೂ ಇಲ್ಲ; ಕರ್ಮವನ್ನು ಮಾಡದಿದ್ದುದರಿಂದ (ಅವನಿಗೆ) ಯಾವ (ಅನರ್ಥವೂ[1]) ಇಲ್ಲ; ಮತ್ತು ಸರ್ವಪ್ರಾಣಿಗಳಲ್ಲಿಯೂ[2] ಇವನಿಗೆ ಯಾವುದೊಂದು ಪ್ರಯೋಜನದ ಸಂಬಂಧವೂ[3] ಇರುವುದಿಲ್ಲ.

1 ಪ್ರತ್ಯವಾಯುವೆಂಬ ಅನರ್ಥ.
2 ಬ್ರಹ್ಮನಿಂದ ಸ್ಥಾವರದ ವರೆಗಿನ ಪ್ರಾಣಿಗಳಲ್ಲಿ.
3 ಯಾವುದಾದರೊಂದು ಭೂತವಿಶೇಷವನ್ನು ಆಶ್ರಯಿಸಿ ಹೊಂದಬೇಕಾದದ್ದು ಏನೂ ಇರುವುದಿಲ್ಲ.

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥**

ತಸ್ಮಾತ್ (ಆದುದರಿಂದ) ಅಸಕ್ತಃ (ಅಸಕ್ತನಾಗಿ) ಸತತಂ (ಯಾವಾಗಲೂ) ಕಾರ್ಯಂ ಕರ್ಮ (ಅವಶ್ಯಕವಾದ ಕರ್ಮವನ್ನು) ಸಮಾಚರ (ಆಚರಿಸು) ಹಿ (ಏಕೆಂದರೆ) ಅಸಕ್ತಃ (ಅಸಕ್ತನಾದ) ಪೂರುಷಃ (ಪುರುಷನು) ಕರ್ಮ (ಕರ್ಮವನ್ನು) ಆಚರನ್ (ಆಚರಿಸುತ್ತಾ) ಪರಂ (ಮೋಕ್ಷವನ್ನು) ಆಪ್ನೋತಿ (ಹೊಂದುತ್ತಾನೆ).

೧೯. ಆದುದರಿಂದ ಅಸಕ್ತನಾಗಿ[1] ಯಾವಾಗಲೂ ಅವಶ್ಯಕವಾದ ಕರ್ಮವನ್ನು[2] ಆಚರಿಸು; ಏಕೆಂದರೆ ಅಸಕ್ತನಾದ ಪುರುಷನು ಕರ್ಮವನ್ನು ಆಚರಿಸುತ್ತಾ ಮೋಕ್ಷವನ್ನು ಹೊಂದುತ್ತಾನೆ.[3]

[1] ಕರ್ಮಫಲದಲ್ಲಿ ಆಸಕ್ತಿಯಿಲ್ಲದೆ.
[2] ನಿತ್ಯಕರ್ಮಗಳನ್ನು.
[3] ಸತ್ತ್ವಶುದ್ಧಿಯ ದ್ವಾರಾ.

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦ ॥**

ಜನಕಾದಯಃ (ಜನಕನೇ ಮೊದಲಾದವರು) ಕರ್ಮಣಾ ಏವ ಹಿ (ಕರ್ಮಾನುಷ್ಠಾನದಿಂದಲೇ) ಸಂಸಿದ್ಧಿಂ (ಸಿದ್ಧಿಯನ್ನು) ಆಸ್ಥಿತಾಃ (ಪಡೆದರು) ಲೋಕಸಂಗ್ರಹಂ (ಲೋಕಸಂಗ್ರಹವನ್ನು) ಸಂಪಶ್ಯನ್ ಅಪಿ (ನೋಡಿಯಾದರೂ) [ಕರ್ಮ] ಏವ ಕರ್ತುಂ (ಕರ್ಮವನ್ನೇ ಮಾಡಲು) ಅರ್ಹಸಿ (ಯೋಗ್ಯನಾಗಿರುತ್ತೀಯೆ).

೨೦. ಜನಕನೇ ಮೊದಲಾದವರು[1] ಕರ್ಮಾನುಷ್ಠಾನದಿಂದಲೇ ಸಿದ್ಧಿಯನ್ನು[2] ಪಡೆದರು. ಲೋಕಸಂಗ್ರಹವನ್ನು[3] ನೋಡಿಯಾದರೂ ಕರ್ಮವನ್ನೇ ಮಾಡಲು (ನೀನು) ಯೋಗ್ಯನಾಗಿರುತ್ತೀಯೆ.

[1] ಅಶ್ವಪತಿ ಮೊದಲಾದವರು.
[2] ಮೋಕ್ಷ ಅಥವಾ ಆತ್ಮಸಾಕ್ಷಾತ್ಕಾರವನ್ನು.
[3] ಜನರು ದುರ್ಮಾರ್ಗಕ್ಕೆ ಹೋಗದಂತೆ ಮಾಡಿ ಅವರನ್ನು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವುದು ಲೋಕಸಂಗ್ರಹ.

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥**

ಶ್ರೇಷ್ಠಃ (ಶ್ರೇಷ್ಠನಾದ ಪುರುಷನು) ಯತ್ ಯತ್ (ಯಾವ ಯಾವುದನ್ನು) ಆಚರತಿ (ಆಚರಿಸುತ್ತಾನೋ) ತತ್ ತತ್ ಏವ (ಅದನ್ನೇ) ಇತರಃ ಜನಃ (ಇತರ ಜನವು) [ಆಚರಿಸುತ್ತದೆ] ಸಃ (ಅವನು) ಯತ್ ಪ್ರಮಾಣಂ (ಯಾವುದನ್ನು ಪ್ರಮಾಣವನ್ನಾಗಿ) ಕುರುತೇ (ಮಾಡುತ್ತಾನೋ) ತತ್ (ಅದನ್ನೇ) ಲೋಕಃ (ಲೋಕವು) ಅನುವರ್ತತೇ (ಅನುಸರಿಸುತ್ತದೆ)

**೨೧.** ಶ್ರೇಷ್ಠನಾದ ಪುರುಷನು ಯಾವ ಯಾವುದನ್ನು[1] ಆಚರಿಸುತ್ತಾನೋ ಅದನ್ನೇ ಇತರ ಜನರು (ಅನುಸರಿಸುತ್ತಾರೆ). ಅವನು ಯಾವುದನ್ನು ಪ್ರಮಾಣವನ್ನಾಗಿ ಮಾಡುತ್ತಾನೋ ಅದನ್ನೇ ಲೋಕವು ಅನುಸರಿಸುತ್ತದೆ.

[1] ಕರ್ಮಗಳನ್ನು.

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥**

ಪಾರ್ಥ (ಎಲೈ ಅರ್ಜುನನೆ) ತ್ರಿಷು ಲೋಕೇಷು (ಮೂರು ಲೋಕಗಳಲ್ಲಿ) ಮೇ (ನನಗೆ) ಕಿಂಚನ ಕರ್ತವ್ಯಂ (ಸ್ವಲ್ಪ ಕರ್ತವ್ಯವಾಗಲೀ) ನ ಅಸ್ತಿ (ಇರುವುದಿಲ್ಲ) ಚ (ಮತ್ತು) ಅನವಾಪ್ತಂ (ಹೊಂದದೇ ಇದ್ದ) ಅವಾಪ್ತವ್ಯಂ (ಹೊಂದಬೇಕಾದದ್ದು) ನ (ಇಲ್ಲ) ಕರ್ಮಣಿ ಏವ (ಕರ್ಮದಲ್ಲೇ) ವರ್ತೇ (ಇದ್ದೇನೆ).

**೨೨.** ಎಲೈ ಅರ್ಜುನ, ಮೂರು ಲೋಕಗಳಲ್ಲಿಯೂ ನನಗೆ ಯಾವ ಕರ್ತವ್ಯವೂ ಇರುವುದಿಲ್ಲ; ಮತ್ತು (ನಾನು) ಹೊಂದದೇ ಇದ್ದ (ಈಗ) ಹೊಂದಬೇಕಾದದ್ದು (ಯಾವುದೂ) ಇಲ್ಲ. (ಹೀಗಿದ್ದರೂ ನಾನು) ಕರ್ಮದಲ್ಲೇ ಇದ್ದೇನೆ.

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩ ॥**

ಪಾರ್ಥ (ಎಲೈ ಅರ್ಜುನನೆ) ಅಹಂ (ನಾನು) ಅತಂದ್ರಿತಃ (ಜಾಗರೂಕನಾಗಿ) ಕರ್ಮಣಿ (ಕರ್ಮದಲ್ಲಿ) ಜಾತು (ಯಾವಾಗಲಾದರೂ) ನ ವರ್ತೇಯಂ (ಪ್ರವೃತ್ತನಾಗದಿದ್ದರೆ) ಮನುಷ್ಯಾಃ (ಮನುಷ್ಯರು) ಮಮ (ನನ್ನ) ವರ್ತ್ಮ ಹಿ (ಮಾರ್ಗವನ್ನು) ಸರ್ವಶಃ (ಸರ್ವಪ್ರಕಾರಗಳಿಂದಲೂ) ಅನುವರ್ತಂತೇ (ಅನುಸರಿಸುವರು).

**೨೩.** ಎಲೈ ಅರ್ಜುನ, ನಾನು ಜಾಗರೂಕನಾಗಿ ಕರ್ಮದಲ್ಲಿ ಯಾವಾಗಲಾದರೂ ಪ್ರವೃತ್ತನಾಗದಿದ್ದರೆ ಮನುಷ್ಯರು ನನ್ನ ಮಾರ್ಗವನ್ನು ಸರ್ವಪ್ರಕಾರಗಳಿಂದಲೂ ಅನುಸರಿಸುವರು.

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।
ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪ ॥**

ಅಹಂ (ನಾನು) ಕರ್ಮ (ಕರ್ಮವನ್ನು) ನ ಕುರ್ಯಾಂ ಚೇತ್ (ಮಾಡದಿದ್ದರೆ) ಇಮೇ (ಈ) ಲೋಕಾಃ (ಲೋಕಗಳು) ಉತ್ಸೀದೇಯುಃ (ನಾಶವಾಗುವುವು) ಸಂಕರಸ್ಯ ಚ (ಮತ್ತು ವರ್ಣಸಂಕರದ) ಕರ್ತಾ ಸ್ಯಾಂ (ಕರ್ತೃವಾಗುವೆನು) ಇಮಾಃ (ಈ) ಪ್ರಜಾಃ (ಜನಗಳನ್ನು) ಉಪಹನ್ಯಾಂ (ನಾಶಮಾಡಿದವನಾಗುವೆನು).

**೨೪.** ನಾನು ಕರ್ಮವನ್ನು ಮಾಡದಿದ್ದರೆ ಈ ಲೋಕಗಳು ನಾಶವಾಗುವುವು; ಮತ್ತು (ನಾನೇ) ವರ್ಣಸಂಕರದ ಕರ್ತೃವಾಗುವೆನು (ಮತ್ತು) ಈ ಜನರನ್ನೂ (ನಾನೇ) ನಾಶಮಾಡಿದವನಾಗುವೆನು.

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕ-
ಸಂಗ್ರಹಮ್ ॥ ೨೫ ॥**

ಭಾರತ (ಎಲೈ ಅರ್ಜುನನೆ) ಕರ್ಮಣಿ (ಕರ್ಮದಲ್ಲಿ) ಸಕ್ತಾಃ (ಆಸಕ್ತರಾದ) ಅವಿದ್ವಾಂಸಃ (ಅಜ್ಞಾನಿಗಳು) ಯಥಾ (ಹೇಗೆ) ಕುರ್ವಂತಿ (ಮಾಡುತ್ತಾರೆಯೋ) ತಥಾ (ಹಾಗೆ) ಅಸಕ್ತಃ (ಅಸಕ್ತನಾದ) ವಿದ್ವಾನ್ (ಜ್ಞಾನಿಯು) ಲೋಕಸಂಗ್ರಹಂ (ಲೋಕಸಂಗ್ರಹವನ್ನು) ಚಿಕೀರ್ಷುಃ (ಇಚ್ಛಿಸುತ್ತಾ) ಕುರ್ಯಾತ್ (ಕರ್ಮವನ್ನು ಮಾಡಬೇಕು).

**೨೫.** ಎಲೈ ಅರ್ಜುನ, ಕರ್ಮದಲ್ಲಿ ಆಸಕ್ತರಾದ ಅಜ್ಞಾನಿಗಳು ಹೇಗೆ (ಕರ್ಮವನ್ನು) ಮಾಡುತ್ತಾರೋ ಹಾಗೆಯೇ ಅಸಕ್ತನಾದ ಜ್ಞಾನಿಯು ಲೋಕಸಂಗ್ರಹವನ್ನು ಇಚ್ಛಿಸುತ್ತಾ ಕರ್ಮವನ್ನು ಮಾಡಬೇಕು.

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।
ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ
ಸಮಾಚರನ್ ॥ ೨೬ ॥**

ಕರ್ಮಸಂಗಿನಾಂ (ಕರ್ಮದಲ್ಲಿ ಆಸಕ್ತರಾದ) ಅಜ್ಞಾನಾಂ (ಅಜ್ಞಾನಿಗಳಲ್ಲಿ) ಬುದ್ಧಿಭೇದಂ (ಬುದ್ಧಿಭೇದವನ್ನು) ನ ಜನಯೇತ್ (ಉಂಟುಮಾಡಬಾರದು) ವಿದ್ವಾನ್ (ವಿಜ್ಞಾನಿಯು) ಯುಕ್ತಃ (ಯುಕ್ತನಾಗಿ) ಸಮಾಚರನ್ (ಕರ್ಮಗಳನ್ನು ಆಚರಿಸುತ್ತಾ) ಸರ್ವಕರ್ಮಾಣಿ (ಸರ್ವಕರ್ಮಗಳನ್ನೂ) [ಅವರಿಂದ] ಜೋಷಯೇತ್ (ಮಾಡಿಸಬೇಕು).

**೨೬.** ಕರ್ಮದಲ್ಲಿ ಆಸಕ್ತರಾದ ಅಜ್ಞಾನಿಗಳಲ್ಲಿ ಬುದ್ಧಿಭೇದವನ್ನು[1] ಉಂಟುಮಾಡಬಾರದು. ಜ್ಞಾನಿಯು ಯುಕ್ತನಾಗಿ ಕರ್ಮಗಳನ್ನು ಆಚರಿಸುತ್ತಾ ಸರ್ವಕರ್ಮಗಳನ್ನೂ (ಅವರಿಂದಲೂ) ಮಾಡಿಸಬೇಕು.[2]

1 'ನಾನು ಇದನ್ನು ಮಾಡಬೇಕು, ನಾನು ಈ ಕರ್ಮದ ಫಲವನ್ನು ಅನುಭವಿಸಬೇಕು' ಎಂಬ ನಿಶ್ಚಯರೂಪವಾದ ಬುದ್ಧಿಯನ್ನು ಭೇದಿಸುವುದು ಬುದ್ಧಿಯ ಭೇದವು.

2 ಅಜ್ಞಾನಿಗಳಿಗೆ ಕರ್ಮಗಳಲ್ಲಿ ಪ್ರೀತಿಯನ್ನು ಉಂಟುಮಾಡಿಸಬೇಕು. 'ಜೋಷಯೇತ್' ಎಂಬ ಪದವು 'ಜುಷ್' ಎಂಬ ಧಾತುವಿನಿಂದ ಬಂದಿದೆ. 'ಜುಷ್' ಧಾತುವಿಗೆ 'ಪ್ರೀತಿಸು, ಸೇವಿಸು' (ಜುಷಿ ಪ್ರೀತಿಸೇವನಯೋಃ) ಎಂಬ ಅರ್ಥಗಳುಂಟು.

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ ೨೭ ॥**

ಪ್ರಕೃತೇಃ (ಪ್ರಕೃತಿಯ) ಗುಣೈಃ (ಗುಣಗಳಿಂದ) ಸರ್ವಶಃ (ಸರ್ವಪ್ರಕಾರವಾಗಿ) ಕರ್ಮಾಣಿ (ಕರ್ಮಗಳು) ಕ್ರಿಯಮಾಣಾನಿ (ಮಾಡಲ್ಪಡುತ್ತವೆ) ಅಹಂಕಾರ-ವಿಮೂಢಾತ್ಮಾ (ಅಹಂಕಾರದಿಂದ ಮೂಢವಾದ ಮನಸ್ಸುಳ್ಳವನು) ಅಹಂ (ನಾನು) ಕರ್ತಾ (ಕರ್ತೃ) ಇತಿ (ಎಂದು) ಮನ್ಯತೇ (ತಿಳಿದುಕೊಳ್ಳುತ್ತಾನೆ).

**೨೭.** ಪ್ರಕೃತಿಯ ಗುಣಗಳು[1] ಎಲ್ಲಾ ರೀತಿಯಿಂದಲೂ ಕರ್ಮಗಳನ್ನು ಮಾಡುತ್ತವೆ. ಅಹಂಕಾರದಿಂದ ಮೂಢವಾದ ಮನಸ್ಸುಳ್ಳವನು[2] 'ನಾನು ಕರ್ತೃ' ಎಂದು ತಿಳಿದುಕೊಳ್ಳುತ್ತಾನೆ.

1 ಸತ್ತ್ವ-ರಜಸ್ತಮೋಗುಣಗಳು.
2 ದೇಹೇಂದ್ರಿಯಗಳೇ ತಾನು ಎಂದು ತಿಳಿದುಕೊಂಡಿರುವವನು.

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾಗುಣೇಷು ವರ್ತಂತೇ ಇತಿ ಮತ್ವಾ ನ ಸಜ್ಜತೇ ॥ ೨೮**

ಮಹಾಬಾಹೋ (ಎಲೈ ಮಹಾವೀರನೆ) ತು (ಆದರೆ) ಗುಣಕರ್ಮವಿಭಾ-ಗಯೋಃ (ಗುಣ ಮತ್ತು ಕರ್ಮಗಳ ವಿಭಾಗಗಳ) ತತ್ತ್ವವಿತ್ (ತತ್ತ್ವಜ್ಞನು) ಗುಣಾಃ (ಗುಣಗಳು) ಗುಣೇಷು (ಗುಣಗಳಲ್ಲಿ) ವರ್ತಂತೇ (ಪ್ರವರ್ತಿಸುತ್ತವೆ) ಇತಿ ಮತ್ವಾ (ಎಂದು ತಿಳಿದು) ನ ಸಜ್ಜತೇ (ಆಸಕ್ತನಾಗುವುದಿಲ್ಲ).

೨೮. ಆದರೆ ಎಲೈ ಅರ್ಜುನ, ಗುಣಕರ್ಮಗಳ ವಿಭಾಗಗಳ[1] ತತ್ತ್ವವನ್ನು ತಿಳಿದವನು 'ಗುಣಗಳು ಗುಣಗಳಲ್ಲಿ ಪ್ರವರ್ತಿಸುತ್ತವೆ'[2] ಎಂದು ತಿಳಿದು ಆಸಕ್ತನಾಗುವುದಿಲ್ಲ.

[1] ಸತ್ತ್ವಾದಿಗುಣಗಳ ವಿಭಾಗ ಮತ್ತು ಆ ಗುಣಗಳಿಂದ ಉತ್ಪನ್ನವಾಗುವ ಕಾರ್ಯಗಳ ವಿಭಾಗ.

[2] ಕರಣಾತ್ಮಕವಾದ ಗುಣಗಳು (ಇಂದ್ರಿಯಗಳು) ವಿಷಯಾತ್ಮಕವಾದ ಗುಣಗಳಲ್ಲಿ (ವಿಷಯಗಳಲ್ಲಿ) ಪ್ರವರ್ತಿಸುತ್ತವೆ.

**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥೨೯॥**

ಪ್ರಕೃತೇಃ (ಪ್ರಕೃತಿಯ) ಗುಣಸಂಮೂಢಾಃ (ಗುಣಗಳಿಂದ ಭ್ರಮೆಹೊಂದಿದವರು) ಗುಣಕರ್ಮಸು (ಗುಣಕರ್ಮಗಳಲ್ಲಿ) ಸಜ್ಜಂತೇ (ಆಸಕ್ತರಾಗುವರು) ಕೃತ್ಸ್ನವಿತ್ (ಎಲ್ಲವನ್ನೂ ತಿಳಿದವನು, ಆತ್ಮಜ್ಞನು) ತಾನ್ (ಆ) ಅಕೃತ್ಸ್ನವಿದಃ (ಅಲ್ಪಜ್ಞರಾದ) ಮಂದಾನ್ (ಮಂದಮತಿಗಳನ್ನು) ನ ವಿಚಾಲಯೇತ್ (ಅಲ್ಲಾಡಿಸಬಾರದು).

೨೯. ಪ್ರಕೃತಿಯ ಗುಣಗಳಿಂದ ಭ್ರಮೆಹೊಂದಿದವರು ಗುಣಕರ್ಮಗಳಲ್ಲಿ ಆಸಕ್ತರಾಗುವರು; ಆತ್ಮಜ್ಞನು ಅಲ್ಪಜ್ಞರಾದ[1] ಆ ಮಂದಮತಿಗಳನ್ನು ಅಲ್ಲಾಡಿಸಬಾರದು.[2]

[1] ಕರ್ಮಫಲವನ್ನು ಮಾತ್ರ ಕಂಡಿರುವವರು.

[2] 'ಅಲ್ಲಾಡಿಸುವುದು' ಎಂದರೆ ಬುದ್ಧಿಯಲ್ಲಿ ಭೇದವನ್ನು ಉಂಟುಮಾಡುವುದು.

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

ಅಧ್ಯಾತ್ಮಚೇತಸಾ (ಅಧ್ಯಾತ್ಮಚೇತಸ್ಸಿನ ದ್ವಾರಾ) ಸರ್ವಾಣಿ (ಸರ್ವ) ಕರ್ಮಾಣಿ (ಕರ್ಮಗಳನ್ನು) ಮಯಿ (ನನ್ನಲ್ಲಿ) ಸಂನ್ಯಸ್ಯ (ಅರ್ಪಿಸಿ) ನಿರಾಶೀಃ (ಆಶೆಯಿಲ್ಲದವನೂ) ನಿರ್ಮಮಃ (ಮಮತೆಯಿಲ್ಲದವನೂ) ವಿಗತಜ್ವರಃ (ತಾಪ ಅಥವಾ ಶೋಕವಿಲ್ಲದವನೂ) ಭೂತ್ವಾ (ಆಗಿ) ಯುಧ್ಯಸ್ವ (ಯುದ್ಧವನ್ನು ಮಾಡು).

೩೦. ಅಧ್ಯಾತ್ಮಚಿತ್ತದ ದ್ವಾರಾ[1] ಸರ್ವಕರ್ಮಗಳನ್ನೂ ನನ್ನಲ್ಲಿ ಅರ್ಪಿಸಿ ಆಶೆ ಮಮತೆ ತಾಪಗಳಿಲ್ಲದವನಾಗಿ ಯುದ್ಧವನ್ನು ಮಾಡು.

[1] 'ಈಶ್ವರನಿಗೋಸ್ಕರ ಭೃತ್ಯನಂತೆ ಕರ್ಮವನ್ನು ಮಾಡುತ್ತೇನೆ' ಎಂಬ ವಿವೇಕಬುದ್ಧಿ.

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ**
**ಕರ್ಮಭಿಃ ॥ ೩೧ ॥**

ಯೇ (ಯಾವ) ಮಾನವಾಃ (ಮನುಷ್ಯರು) ಶ್ರದ್ಧಾವಂತಃ (ಶ್ರದ್ಧೆಯುಳ್ಳವರಾಗಿ) ಅನಸೂಯಂತಃ (ಅಸೂಯೆಯಿಲ್ಲದವರಾಗಿ) ಮೇ (ನನ್ನ) ಇದಂ (ಈ) ಮತಂ (ಮತವನ್ನು) ನಿತ್ಯಂ (ಯಾವಾಗಲೂ) ಅನುತಿಷ್ಠಂತಿ (ಅನುಷ್ಠಾನಮಾಡುತ್ತಾರೋ) ತೇ ಅಪಿ (ಅವರೂ ಕೂಡ) ಕರ್ಮಭಿಃ (ಕರ್ಮಗಳಿಂದ) ಮುಚ್ಯಂತೇ (ಮುಕ್ತರಾಗುತ್ತಾರೆ).

೩೧. ಯಾವ ಮನುಷ್ಯರು ಶ್ರದ್ಧಾವಂತರೂ ಅಸೂಯೆಯಿಲ್ಲದವರೂ[1] ಆಗಿ ನನ್ನ ಈ ಮತವನ್ನು ಯಾವಾಗಲೂ ಅನುಷ್ಠಾನಮಾಡುತ್ತಾರೋ ಅವರೂ ಕೂಡ ಕರ್ಮಗಳಿಂದ[2] ಬಿಡುಗಡೆಯನ್ನು ಹೊಂದುತ್ತಾರೆ.

[1] ಪರಮಗುರುವೂ ವಾಸುದೇವನೂ ಆದ ನನ್ನಲ್ಲಿ ಅಸೂಯೆಯನ್ನು ಮಾಡದೆ.
[2] ಧರ್ಮಾಧರ್ಮಗಳೆಂಬ ಕರ್ಮಗಳಿಂದ.

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥ ೩೨ ॥**

ತು (ಆದರೆ) ಯೇ (ಯಾರು) ಅಭ್ಯಸೂಯಂತಃ (ಅಸೂಯೆಯುಳ್ಳವರಾಗಿ) ಏತತ್ (ಈ) ಮೇ (ನನ್ನ) ಮತಂ (ಮತವನ್ನು) ನ ಅನುತಿಷ್ಠಂತಿ (ಅನುಷ್ಠಾನ ಮಾಡುವುದಿಲ್ಲವೋ) ತಾನ್ (ಅವರನ್ನು) ಸರ್ವಜ್ಞಾನವಿಮೂಢಾನ್ (ಸರ್ವಜ್ಞಾನ ವಿಮೂಢರೆಂದೂ) ನಷ್ಟಾನ್ (ಹಾಳಾದವರೆಂದೂ) ಅಚೇತಸಃ (ಬುದ್ಧಿಯಿಲ್ಲದವರೆಂದೂ) ವಿದ್ಧಿ (ತಿಳಿ).

೩೨. ಆದರೆ ಅಸೂಯೆಯುಳ್ಳ ಯಾರು ಈ ನನ್ನ ಮತವನ್ನು ಅನುಷ್ಠಾನಮಾಡುವುದಿಲ್ಲವೋ ಅವರನ್ನು ಸರ್ವಜ್ಞಾನವಿಮೂಢರೆಂದೂ[1] ಹಾಳಾದವರೆಂದೂ ಬುದ್ಧಿಯಿಲ್ಲದವರೆಂದೂ ತಿಳಿ.

[1] ಎಲ್ಲಾ ಜ್ಞಾನಗಳಲ್ಲಿಯೂ ವಿವಿಧವಾಗಿ ಮೂಢರಾಗಿರುವವರು.

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥**

ಜ್ಞಾನವಾನ್ ಅಪಿ (ಜ್ಞಾನವುಳ್ಳವನು ಕೂಡ) ಸ್ವಸ್ಯಾಃ (ತನ್ನ) ಪ್ರಕೃತೇಃ (ಪ್ರಕೃತಿಯ) ಸದೃಶಂ (ಅನುರೂಪವಾಗಿ) ಚೇಷ್ಟತೇ (ನಡೆಯುತ್ತಾನೆ) ಭೂತಾನಿ

(ಪ್ರಾಣಿಗಳು) ಪ್ರಕೃತಿಂ (ಪ್ರಕೃತಿಯನ್ನು) ಯಾಂತಿ (ಹೊಂದುತ್ತವೆ) ನಿಗ್ರಹಃ (ನಿಗ್ರಹವು) ಕಿಂ ಕರಿಷ್ಯತಿ (ಏನು ಮಾಡಬಲ್ಲದು).

**೩೩.** ಜ್ಞಾನವುಳ್ಳವನೂ ಕೂಡ ತನ್ನ ಪ್ರಕೃತಿಗೆ[1] ಅನುರೂಪವಾಗಿ ನಡೆಯುತ್ತಾನೆ; ಪ್ರಾಣಿಗಳು (ತಮ್ಮ) ಪ್ರಕೃತಿಯನ್ನು ಹೊಂದುತ್ತವೆ; (ಹೀಗಿರುವಾಗ) ನಿಗ್ರಹವು ಏನು ಮಾಡಬಲ್ಲದು?

[1] ಪೂರ್ವಜನ್ಮದಲ್ಲಿ ಮಾಡಿರುವ ಧರ್ಮಾಧರ್ಮಗಳ ಸಂಸ್ಕಾರವು ವರ್ತಮಾನ ಜನ್ಮದಲ್ಲಿ ಅಭಿವ್ಯಕ್ತವಾದಾಗ ಪ್ರಕೃತಿಯೆಂದು ಹೇಳಲ್ಪಡುತ್ತೆ.

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ॥ ೩೪ ॥**

ಇಂದ್ರಿಯಸ್ಯ ಇಂದ್ರಿಯಸ್ಯ (ಎಲ್ಲಾ ಇಂದ್ರಿಯಗಳ) ಅರ್ಥೇ (ವಿಷಯದಲ್ಲಿ) ರಾಗದ್ವೇಷೌ (ರಾಗದ್ವೇಷಗಳು) ವ್ಯವಸ್ಥಿತೌ (ನೆಲೆಗೊಂಡಿರುವುವು) ತಯೋಃ (ಇವೆರಡರ) ವಶಂ (ವಶವನ್ನು) ನ ಆಗಚ್ಛೇತ್ (ಹೊಂದಬಾರದು) ಹಿ (ಏಕೆಂದರೆ) ತೌ (ಇವು) ಅಸ್ಯ (ಇವನ) ಪರಿಪಂಥಿನೌ (ಶತ್ರುಗಳು).

**೩೪.** ಎಲ್ಲಾ ಇಂದ್ರಿಯಗಳ[1] ವಿಷಯದಲ್ಲಿ[2] ರಾಗದ್ವೇಷಗಳು[3] ನೆಲೆಗೊಂಡಿರುವುವು. ಇವೆರಡರ ವಶವನ್ನು ಹೊಂದಬಾರದು; ಏಕೆಂದರೆ ಇವು ಇವನ ಶತ್ರುಗಳು.

[1] ಶ್ರೋತ್ರಾದಿ ಜ್ಞಾನೇಂದ್ರಿಯಗಳು ವಾಗಾದಿ ಕರ್ಮೇಂದ್ರಿಯಗಳು ಮತ್ತು ಮನಸ್ಸು.
[2] ಶಬ್ದ ರೂಪ ಗಂಧ ರಸ ಸ್ಪರ್ಶ ಮುಂತಾದುವು.
[3] ಇಷ್ಟವಾದ ವಿಷಯದಲ್ಲಿ ಪ್ರೀತಿ, ಇಷ್ಟವಿಲ್ಲದ ವಿಷಯದಲ್ಲಿ ದ್ವೇಷ.

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥**

ಸ್ವನುಷ್ಠಿತಾತ್ (ಚೆನ್ನಾಗಿ ಅನುಷ್ಠಾನಮಾಡಿದ) ಪರಧರ್ಮಾತ್ (ಪರಧರ್ಮಕ್ಕಿಂತಲೂ) ವಿಗುಣಃ (ಗುಣವಿಲ್ಲದ) ಸ್ವಧರ್ಮಃ (ಸ್ವಧರ್ಮವು) ಶ್ರೇಯಾನ್ (ಶ್ರೇಯಸ್ಕರವಾದದ್ದು) ಸ್ವಧರ್ಮೇ (ಸ್ವಧರ್ಮದಲ್ಲಿ) ನಿಧನಂ (ಮರಣವು) ಶ್ರೇಯಃ (ಒಳ್ಳೆಯದು) ಪರಧರ್ಮಃ (ಪರಧರ್ಮವು) ಭಯಾವಹಃ (ಭಯಂಕರವಾದದ್ದು).

**೩೫.** ಗುಣವಿಲ್ಲದ ಸ್ವಧರ್ಮವು ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ಶ್ರೇಯಸ್ಕರವಾದದ್ದು. ಸ್ವಧರ್ಮದಲ್ಲಿ ಮರಣವು ಒಳ್ಳೆಯದು; ಪರಧರ್ಮವು ಭಯಂಕರವಾದದ್ದು.

ಅರ್ಜುನ ಉವಾಚ

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)–ವಾರ್ಷ್ಣೇಯ (ವೃಷ್ಣಿಕುಲದಲ್ಲಿ ಹುಟ್ಟಿದ ಕೃಷ್ಣನೆ) ಅಥ (ಹಾಗಾದರೆ) ಅಯಂ (ಈ) ಪೂರುಷಃ (ಪುರುಷನು) ಅನಿಚ್ಛನ್ ಅಪಿ (ಇಚ್ಛಿಸದಿದ್ದರೂ ಕೂಡ) ಕೇನ (ಯಾವುದರಿಂದ) ಪ್ರಯುಕ್ತಃ (ಪ್ರೇರಿತನಾಗಿ) ಬಲಾತ್ (ಬಲಾತ್ಕಾರದಿಂದ) ನಿಯೋಜಿತಃ ಇವ (ನಿಯಂತ್ರಿತನಾದ ಹಾಗೆ) ಪಾಪಂ (ಪಾಪವನ್ನು) ಚರತಿ (ಆಚರಿಸುತ್ತಾನೆ).

ಅರ್ಜುನನು ಹೇಳಿದನು

೩೬. ಎಲೈ ಕೃಷ್ಣ, ಹಾಗಾದರೆ ಈ ಪುರುಷನು (ತಾನು) ಇಚ್ಛಿಸದಿದ್ದರೂ ಕೂಡ ಯಾವುದರಿಂದ ಪ್ರೇರಿತನಾಗಿ ಬಲಾತ್ಕಾರದಿಂದ ನಿಯಂತ್ರಿತನಾದ ಹಾಗೆ ಪಾಪವನ್ನು ಆಚರಿಸುತ್ತಾನೆ?

ಶ್ರೀಭಗವಾನುವಾಚ

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥ ೩೭ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಏಷಃ (ಇದು) ಕಾಮಃ (ಕಾಮವು) ಏಷಃ (ಇದು) ಕ್ರೋಧಃ (ಕ್ರೋಧವು) [ಏಷಃ (ಇದು)] ರಜೋಗುಣಸಮುದ್ಭವಃ (ರಜೋಗುಣದಿಂದ ಹುಟ್ಟಿದ್ದು) [ಏಷಃ (ಇದು)] ಮಹಾಶನಃ (ಸರ್ವಗ್ರಾಸಿಯು) ಮಹಾಪಾಪ್ಮಾ (ಮಹಾಪಾಪಿಯು) ಏನಂ (ಇದನ್ನು) ಇಹ (ಇಲ್ಲಿ) ವೈರಿಣಂ (ಶತ್ರುವೆಂದು) ವಿದ್ಧಿ (ತಿಳಿ).

ಶ್ರೀಕೃಷ್ಣನು ಹೇಳಿದನು

೩೭. ಇದು ಕಾಮವು[1] ಇದು ಕ್ರೋಧವು; (ಇದು) ರಜೋಗುಣದಿಂದ ಹುಟ್ಟಿದ್ದು; (ಇದು) ಸರ್ವಗ್ರಾಸಿ, ಮಹಾಪಾಪಿ. ಇದನ್ನು ಇಲ್ಲಿ[2] ಶತ್ರುವೆಂದು ತಿಳಿ.

[1] ಕಾಮವು ಸರ್ವಗ್ರಾಸಿಯಾದ (ಮಹಾಶನ) ಶತ್ರು; ಇಷ್ಟಪ್ರಾಪ್ತಿಗೆ ಅಡ್ಡಿಯುಂಟಾದರೆ ಕಾಮವೇ ಕ್ರೋಧರೂಪವಾಗಿ ಪರಿಣಾಮವನ್ನು ಹೊಂದಿ ಮಹಾಪಾಪಿಯಾಗುತ್ತೆ.

[2] ಸಂಸಾರದಲ್ಲಿ.

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥ ೩೮ ॥**

ಯಥಾ (ಹೇಗೆ) ಧೂಮೇನ (ಹೊಗೆಯಿಂದ) ವಹ್ನಿಃ (ಅಗ್ನಿಯು) ಮಲೇನ ಚ (ಮತ್ತು ಕೊಳೆಯಿಂದ) ಆದರ್ಶಃ (ಕನ್ನಡಿಯು) ಆವ್ರಿಯತೇ (ಮುಚ್ಚಲ್ಪಟ್ಟಿದೆಯೋ) ಯಥಾ (ಹೇಗೆ) ಉಲ್ಬೇನ (ಜರಾಯುವೆಂಬ ಪೊರೆಯಿಂದ) ಗರ್ಭಃ (ಗರ್ಭವು) ಆವೃತಃ (ಮುಚ್ಚಲ್ಪಟ್ಟಿದೆಯೋ) ತಥಾ (ಹಾಗೆಯೇ) ತೇನ (ಅದರಿಂದ) ಇದಂ (ಇದು) ಆವೃತಂ (ಮುಚ್ಚಲ್ಪಟ್ಟಿದೆ).

**೩೮.** ಹೊಗೆಯಿಂದ ಅಗ್ನಿಯೂ, ಕೊಳೆಯಿಂದ ಕನ್ನಡಿಯೂ, ಜರಾಯುವೆಂಬ ಪೊರೆಯಿಂದ ಗರ್ಭವೂ ಹೇಗೆ ಮುಚ್ಚಲ್ಪಟ್ಟಿವೆಯೋ ಹಾಗೆಯೇ ಅದರಿಂದ[1] ಇದು[2] ಮುಚ್ಚಲ್ಪಟ್ಟಿದೆ.

1 ಕಾಮದಿಂದ.

2 ಜ್ಞಾನವು.

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥ ೩೯ ॥**

ಕೌಂತೇಯ (ಎಲೈ ಅರ್ಜುನನೆ) ಜ್ಞಾನಿನಃ (ಜ್ಞಾನಿಯ) ನಿತ್ಯವೈರಿಣಾ (ನಿತ್ಯ ಶತ್ರುವಾದ) ದುಷ್ಪೂರೇಣ ಚ (ಪೂರಯಿಸಲು ಕಷ್ಟವಾದ) ಅನಲೇನ (ತೃಪ್ತಿಪಡಿಸಲಾಗದ) ಏತೇನ ಕಾಮರೂಪೇಣ (ಈ ಕಾಮಾಕಾರದಿಂದ) ಜ್ಞಾನಂ (ಜ್ಞಾನವು) ಆವೃತಂ (ಮುಚ್ಚಲ್ಪಟ್ಟಿದೆ).

**೩೯.** ಎಲೈ ಅರ್ಜುನ, ಜ್ಞಾನಿಗೆ ನಿತ್ಯವೈರಿಯಾದ, ಪೂರಯಿಸಲು ಕಷ್ಟವಾದ, ತೃಪ್ತಿಪಡಿಸಲಾಗದ ಈ ಕಾಮದಿಂದ ಜ್ಞಾನವು ಮುಚ್ಚಲ್ಪಟ್ಟಿದೆ.

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦ ॥**

ಇಂದ್ರಿಯಾಣಿ (ಇಂದ್ರಿಯಗಳು) ಮನಃ (ಮನಸ್ಸು) ಬುದ್ಧಿಃ (ಬುದ್ಧಿಯು) ಅಸ್ಯ (ಇದರ) ಅಧಿಷ್ಠಾನಂ (ಆಶ್ರಯವೆಂದು) ಉಚ್ಯತೇ (ಹೇಳಲ್ಪಡುತ್ತದೆ) ಏಷಃ (ಇದು) ಏತೈಃ (ಇವುಗಳ ದ್ವಾರಾ) ಜ್ಞಾನಂ (ಜ್ಞಾನವನ್ನು) ಆವೃತ್ಯ (ಮುಚ್ಚಿ) ದೇಹಿನಂ (ಜೀವಾತ್ಮನನ್ನು) ವಿಮೋಹಯತಿ (ಮೋಹಗೊಳಿಸುತ್ತದೆ).

೪೦. ಇಂದ್ರಿಯಗಳು ಮನಸ್ಸು (ಮತ್ತು) ಬುದ್ಧಿ—ಇವು ಇದಕ್ಕೆ[1] ಆಶ್ರಯಗಳೆಂದು ಹೇಳಲ್ಪಡುತ್ತವೆ; ಇದು[2] ಇವುಗಳ[3] ದ್ವಾರಾ ಜ್ಞಾನವನ್ನು ಮುಚ್ಚಿ ಜೀವಾತ್ಮನನ್ನು ಮೋಹಗೊಳಿಸುತ್ತದೆ.

[1] ಈ ಕಾಮಕ್ಕೆ.

[2] ಕಾಮವು.

[3] ಇಂದ್ರಿಯಮನೋಬುದ್ಧಿಗಳ.

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೪೧ ॥**

ಭರತರ್ಷಭ (ಎಲೈ ಅರ್ಜುನನೆ) ತಸ್ಮಾತ್ (ಆದುದರಿಂದ) ತ್ವಂ (ನೀನು) ಆದೌ (ಮೊದಲು) ಇಂದ್ರಿಯಾಣಿ (ಇಂದ್ರಿಯಗಳನ್ನು) ನಿಯಮ್ಯ (ವಶಮಾಡಿಕೊಂಡು) ಜ್ಞಾನವಿಜ್ಞಾನನಾಶನಂ (ಜ್ಞಾನವಿಜ್ಞಾನಗಳನ್ನು ನಾಶಮಾಡುವ) ಏನಂ ಪಾಪ್ಮಾನಂ (ಈ ಪಾಪಿಯನ್ನು) ಪ್ರಜಹಿ (ನಾಶಮಾಡು).

೪೧. ಎಲೈ ಅರ್ಜುನ, ಆದುದರಿಂದ ನೀನು ಮೊದಲು ಇಂದ್ರಿಯಗಳನ್ನು ವಶಮಾಡಿಕೊಂಡು ಜ್ಞಾನವಿಜ್ಞಾನಗಳನ್ನು[1] ನಾಶಮಾಡುವ ಈ ಪಾಪಿಯನ್ನು ನಾಶಮಾಡು.

[1] ಜ್ಞಾನವೆಂದರೆ ಶಾಸ್ತ್ರದಿಂದಲೂ ಆಚಾರ್ಯನಿಂದಲೂ ಆತ್ಮಾದಿಗಳನ್ನು ತಿಳಿದುಕೊಳ್ಳುವುದು; ವಿಜ್ಞಾನವೆಂದರೆ ಅದನ್ನು ವಿಶೇಷವಾಗಿ ಅನುಭವಕ್ಕೆ ತರುವುದು.

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥**

ಇಂದ್ರಿಯಾಣಿ (ಇಂದ್ರಿಯಗಳು) ಪರಾಣಿ (ಹೆಚ್ಚಿನವು ಎಂದು) ಆಹುಃ (ಹೇಳುವರು) ಇಂದ್ರಿಯೇಭ್ಯಃ (ಇಂದ್ರಿಯಗಳಿಗಿಂತ) ಮನಃ (ಮನಸ್ಸು) ಪರಂ (ಹೆಚ್ಚಿನದು) ಮನಸಃ ತು (ಮನಸ್ಸಿಗಿಂತಲೂ) ಬುದ್ಧಿಃ (ಬುದ್ಧಿಯು) ಪರಾ (ಹೆಚ್ಚಿನದು) ತು (ಆದರೆ) ಯಃ (ಯಾವನೂ) ಬುದ್ಧೇಃ (ಬುದ್ಧಿಗಿಂತ) ಪರತಃ (ಹೆಚ್ಚಿನವನೋ) ಸಃ (ಅವನು, ಆತ್ಮಾ).

೪೨. ಇಂದ್ರಿಯಗಳು[1] ಹೆಚ್ಚಿನವು ಎಂದು ಹೇಳುವರು; ಇಂದ್ರಿಯಗಳಿಗಿಂತ ಮನಸ್ಸು[2] ಹೆಚ್ಚಿನದು, ಮನಸ್ಸಿಗಿಂತಲೂ ಬುದ್ಧಿಯು[3] ಹೆಚ್ಚಿ

**ನದು; ಆದರೆ ಯಾವನು[4] ಬುದ್ಧಿಗಿಂತ ಹೆಚ್ಚಿನವನೋ ಅವನು (ಆತ್ಮ).**

[1] ಶ್ರೋತ್ರವೇ ಮುಂತಾದ ಪಂಚಜ್ಞಾನೇಂದ್ರಿಯಗಳು, ಸ್ಥೂಲವೂ ಬಾಹ್ಯವೂ ಪರಿಚ್ಛಿನ್ನವೂ ಆದ ಶರೀರಕ್ಕೆ ಹೋಲಿಸಿದರೆ ವಿಶೇಷ ಸೂಕ್ಷ್ಮವಾಗಿರುವುದರಿಂದ ಅದಕ್ಕಿಂತ ಹೆಚ್ಚಿನದು ಎಂದರೆ ಪ್ರಕೃಷ್ಟವಾದದ್ದು.

[2] ಸಂಕಲ್ಪ ಮತ್ತು ವಿಕಲ್ಪರೂಪವಾಗಿರುವ ಮನಸ್ಸು.

[3] ನಿಶ್ಚಯಾತ್ಮಕವಾದ ಬುದ್ಧಿ.

[4] ಬುದ್ಧಿಯವರೆಗಿನ ಎಲ್ಲಾ ದೃಶ್ಯಗಳಿಗಿಂತಲೂ ಯಾವನು ಒಳಗಿರುವನೋ.

**ಏವಂ ಬುದ್ಧೇಃ ಪರಂ ಬುಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ ೪೩ ॥**

ಮಹಾಬಾಹೋ (ಎಲೈ ಅರ್ಜುನನೆ) ಏವಂ (ಈ ಪ್ರಕಾರವಾಗಿ) ಬುದ್ಧೇಃ (ಬುದ್ಧಿಗಿಂತ) ಪರಂ (ಹೆಚ್ಚಿನದನ್ನು) ಬುಧ್ವಾ (ತಿಳಿದುಕೊಂಡು) ಆತ್ಮನಾ (ಮನಸ್ಸಿನಿಂದ) ಆತ್ಮಾನಂ (ಮನಸ್ಸನ್ನು) ಸಂಸ್ತಭ್ಯ (ನಿಲ್ಲಿಸಿ) ಕಾಮರೂಪಂ (ಕಾಮರೂಪವೂ) ದುರಾಸದಂ (ದುರ್ಜಯವೂ ಆದ) ಶತ್ರುಂ (ಶತ್ರುವನ್ನು) ಜಹಿ (ನಾಶಮಾಡು).

೪೩. ಎಲೈ ಅರ್ಜುನ, ಈ ಪ್ರಕಾರವಾಗಿ ಬುದ್ಧಿಗಿಂತ ಹೆಚ್ಚಿನದನ್ನು[1] ತಿಳಿದುಕೊಂಡು, ಮನಸ್ಸಿನಿಂದ[2] ಮನಸ್ಸನ್ನು ನಿಲ್ಲಿಸಿ,[3] ಕಾಮರೂಪವೂ ದುರ್ಜಯವೂ ಆದ ಶತ್ರುವನ್ನು ನಾಶಮಾಡು.

[1] ಆತ್ಮನನ್ನು.

[2] ಸಂಸ್ಕೃತವಾದ ಮನಸ್ಸಿನಿಂದ.

[3] ಚೆನ್ನಾಗಿ ಸಮಾಧಾನಮಾಡಿ.

**ಇತಿ ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ ।**

ಕರ್ಮಯೋಗವೆಂಬ ಮೂರನೆಯ ಅಧ್ಯಾಯವು ಮುಗಿಯಿತು.

# ನಾಲ್ಕನೆಯ ಅಧ್ಯಾಯ

## ಜ್ಞಾನಯೋಗ

### ಶ್ರೀಭಗವಾನುವಾಚ

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)–ಅಹಂ (ನಾನು) ಇದಂ (ಈ) ಅವ್ಯಯಂ (ಅವ್ಯಯವಾದ) ಯೋಗಂ (ಯೋಗವನ್ನು) ವಿವಸ್ವತೇ (ಸೂರ್ಯನಿಗೆ) ಪ್ರೋಕ್ತವಾನ್ (ಹೇಳಿದೆನು) ವಿವಸ್ವಾನ್ (ಸೂರ್ಯನು) ಮನವೇ (ಮನುವಿಗೆ) ಪ್ರಾಹ (ಹೇಳಿದನು) ಮನುಃ (ಮನುವು) ಇಕ್ಷ್ವಾಕವೇ (ಇಕ್ಷ್ವಾಕುವಿಗೆ) ಅಬ್ರವೀತ್ (ಹೇಳಿದನು).

### ಶ್ರೀಕೃಷ್ಣನು ಹೇಳಿದನು

೧. ಈ ಅವ್ಯಯವಾದ[1] ಯೋಗವನ್ನು ನಾನು ಸೂರ್ಯನಿಗೆ ಹೇಳಿದೆನು; ಸೂರ್ಯನು ಮನುವಿಗೆ ಹೇಳಿದನು; ಮನುವು ಇಕ್ಷ್ವಾಕುವಿಗೆ ಹೇಳಿದನು.

[1] ಯೋಗವು ನಷ್ಟವಾಗುವ ಸಂಭವವಿದ್ದರೂ ಅದರ ಮೋಕ್ಷವೆಂಬ ಫಲವು ನಷ್ಟವಾಗುವುದಿಲ್ಲ.

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨ ॥**

ಪರಂತಪ (ಎಲೈ ಪರಂತಪನೆ) ಏವಂ (ಹೀಗೆ) ಪರಂಪರಾಪ್ರಾಪ್ತಂ (ಪರಂಪರೆಯಿಂದ ಬಂದ) ಇಮಂ (ಇದನ್ನು) ರಾಜರ್ಷಯಃ (ರಾಜರ್ಷಿಗಳು) ವಿದುಃ (ತಿಳಿದಿದ್ದರು) ಸಃ (ಆ) ಯೋಗಃ (ಯೋಗವು) ಮಹತಾ (ದೀರ್ಘವಾದ) ಕಾಲೇನ (ಕಾಲದ ದೆಸೆಯಿಂದ) ಇಹ (ಇಲ್ಲಿ) ನಷ್ಟಃ (ನಷ್ಟವಾಯಿತು).

೨. ಎಲೈ ಅರ್ಜುನ, ಹೀಗೆ ಪರಂಪರೆಯಿಂದ ಬಂದ ಇದನ್ನು[1] ರಾಜರ್ಷಿಗಳು ತಿಳಿದಿದ್ದರು; ಆ ಯೋಗವು ದೀರ್ಘಕಾಲವಾದುದರಿಂದ ಇಲ್ಲಿ[2] ನಷ್ಟವಾಯಿತು.[3]

[1] ಕರ್ಮಯೋಗವನ್ನು.

[2] ಈ ಲೋಕದಲ್ಲಿ.

[3] ಸಂಪ್ರದಾಯವು ವಿಚ್ಛೇದವಾಯಿತು.

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥ ೩ ॥**

[ತ್ವಂ] (ನೀನು) ಮೇ (ನನಗೆ) ಭಕ್ತಃ (ಭಕ್ತನೂ) ಸಖಾ ಚ (ಮತ್ತು ಸ್ನೇಹಿತನೂ) ಅಸಿ (ಆಗಿದ್ದೀಯೆ) ಇತಿ (ಎಂದು) ಸಃ (ಆ) ಅಯಂ (ಈ) ಪುರಾತನಃ (ಪುರಾತನವಾದ) ಯೋಗಃ ಏವ (ಯೋಗವೇ) ಅದ್ಯ (ಈಗ) ಮಯಾ (ನನ್ನಿಂದ) ತೇ (ನಿನಗೆ) ಪ್ರೋಕ್ತಃ (ಹೇಳಲ್ಪಟ್ಟಿತು) ಹಿ (ಏಕೆಂದರೆ) ಏತತ್ (ಇದು) ಉತ್ತಮಂ (ಉತ್ತಮವಾದ) ರಹಸ್ಯಂ (ರಹಸ್ಯವು).

೩. (ನೀನು) ನನಗೆ ಭಕ್ತನೂ ಮತ್ತು ಸ್ನೇಹಿತನೂ ಆಗಿರುವುದರಿಂದ ಆ ಪುರಾತನವಾದ ಯೋಗವೇ ಈಗ ನನ್ನಿಂದ ನಿನಗೆ ಹೇಳಲ್ಪಟ್ಟಿತು; ಏಕೆಂದರೆ ಇದು ಉತ್ತಮವಾದ ರಹಸ್ಯವು.

ಅರ್ಜುನ ಉವಾಚ

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು) — ಭವತಃ (ನಿನ್ನ) ಜನ್ಮ (ಜನ್ಮವು) ಅಪರಂ (ಇತ್ತೀಚಿನದು) ವಿವಸ್ವತಃ (ಸೂರ್ಯನ) ಜನ್ಮ (ಜನ್ಮವು) ಪರಂ (ಹಿಂದಿನದು) ತ್ವಂ (ನೀನು) ಆದೌ (ಮೊದಲು) ಪ್ರೋಕ್ತವಾನ್ (ಉಪದೇಶಮಾಡಿದೆ) ಇತಿ ಏತತ್ (ಎಂಬುವ ಮಾತನ್ನು) ಕಥಂ (ಹೇಗೆ) ವಿಜಾನೀಯಾಂ (ತಿಳಿದುಕೊಳ್ಳಲಿ).

ಅರ್ಜುನನು ಹೇಳಿದನು

೪. ನಿನ್ನ ಜನ್ಮವು ಇತ್ತೀಚಿನದು, ಸೂರ್ಯನ ಜನ್ಮವು ಹಿಂದಿನದು; ನೀನು (ಇದನ್ನು) ಮೊದಲೇ ಉಪದೇಶಮಾಡಿದೆ ಎಂಬುದನ್ನು (ನಾನು) ಹೇಗೆ ತಿಳಿದುಕೊಳ್ಳಲಿ?

[ಈ ಪ್ರಸಂಗದಲ್ಲಿ ಭಗವಂತನ ಅವತಾರದ ಯಾಥಾತ್ಮ್ಯವನ್ನು ತಿಳಿದುಕೊಳ್ಳಲು ಅರ್ಜುನನು ಪ್ರಶ್ನೆಮಾಡುತ್ತಾನೆ.]

ಶ್ರೀಭಗವಾನುವಾಚ

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ ೫ ॥**

ಶ್ರೀಭಗವಾನ್ ಉವಾಚ (ಶ್ರೀಕೃಷ್ಣನು ಹೇಳಿದನು)— ಅರ್ಜುನ (ಎಲೈ ಅರ್ಜುನನೆ) ಮೇ (ನನ್ನ) ತವ ಚ (ಮತ್ತು ನಿನ್ನ) ಬಹೂನಿ (ಅನೇಕ) ಜನ್ಮಾನಿ (ಜನ್ಮಗಳು) ವ್ಯತೀತಾನಿ (ಕಳೆದುಹೋಗಿವೆ) ಪರಂತಪ (ಎಲೈ ಪರಂತಪನೆ) ಅಹಂ (ನಾನು) ತಾನಿ ಸರ್ವಾಣಿ (ಅವುಗಳನ್ನೆಲ್ಲಾ) ವೇದ (ತಿಳಿದಿರುತ್ತೇನೆ) ತ್ವಂ (ನೀನು) ನ ವೇತ್ಥ (ತಿಳಿದಿಲ್ಲ).

ಶ್ರೀಕೃಷ್ಣನು ಹೇಳಿದನು

೫. ಎಲೈ ಅರ್ಜುನ, ನನಗೂ ಮತ್ತು ನಿನಗೂ ಅನೇಕ ಜನ್ಮಗಳು ಕಳೆದುಹೋದುವು; ಎಲೈ ಪರಂತಪನೆ, ನಾನು ಅವುಗಳನ್ನೆಲ್ಲಾ ತಿಳಿದಿರುತ್ತೇನೆ, ನೀನು ತಿಳಿದಿಲ್ಲ.[1]

1 ಧರ್ಮಾಧರ್ಮಾದಿಗಳು ನಿನ್ನ ಜ್ಞಾನಶಕ್ತಿಗೆ ಅಡಚಣೆಯಾಗಿರುವುದರಿಂದ.

[ಈ ಶ್ಲೋಕದಲ್ಲಿ ಭಗವಂತನ ಅವತಾರದ ಸತ್ಯತ್ವವು ಹೇಳಲ್ಪಟ್ಟಿದೆ.]

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೬ ॥**

ಅಜಃ (ಜನ್ಮರಹಿತನು) ಅವ್ಯಯಾತ್ಮಾ (ಅವ್ಯಯ–ಸ್ವಭಾವವುಳ್ಳವನು) ಅಪಿ ಸನ್ (ಆಗಿದ್ದರೂ) ಭೂತಾನಾಂ (ಪ್ರಾಣಿಗಳ) ಈಶ್ವರಃ ಅಪಿ ಸನ್ (ನಿಯಾಮಕನಾಗಿದ್ದರೂ) ಸ್ವಾಂ (ನನ್ನ) ಪ್ರಕೃತಿಂ (ಪ್ರಕೃತಿಯನ್ನು) ಅಧಿಷ್ಠಾಯ (ಆಶ್ರಯಿಸಿ) ಆತ್ಮಮಾಯಯಾ (ನನ್ನ ಮಾಯೆಯ ಮೂಲಕ) ಸಂಭವಾಮಿ (ಅವತಾರಮಾಡುತ್ತೇನೆ).

೬. ನಾನು ಜನ್ಮರಹಿತನೂ ಅವ್ಯಯ-ಸ್ವಭಾವವುಳ್ಳವನೂ[1] ಪ್ರಾಣಿಗಳಿಗೆ ನಿಯಾಮಕನೂ ಆಗಿದ್ದರೂ ನನ್ನ ಪ್ರಕೃತಿಯನ್ನು[2] ಆಶ್ರಯಿಸಿ[3] ನನ್ನ ಮಾಯೆಯ ಮೂಲಕ ಅವತಾರಮಾಡುತ್ತೇನೆ.

1 ಕ್ಷೀಣವಾಗದ ಜ್ಞಾನಶಕ್ತಿಯ ಸ್ವಭಾವವುಳ್ಳವನು.
2 ತ್ರಿಗುಣಾತ್ಮಕವಾದ ವೈಷ್ಣವೀ ಮಾಯೆಯನ್ನು.
3 ವಶಮಾಡಿಕೊಂಡು.

[ಈ ಶ್ಲೋಕದಲ್ಲಿ ಭಗವಂತನ ಅವತಾರದ ಪ್ರಕಾರವನ್ನೂ ಅವತಾರ-ಶರೀರದ ಸತ್ಯತ್ವವನ್ನೂ ಅವತಾರಕ್ಕೆ ಕಾರಣವನ್ನೂ ಹೇಳಿವೆಯೆಂದು ಶ್ರೀರಾಮಾನುಜರು ತಮ್ಮ ಭಾಷ್ಯಪೀಠಿಕೆಯಲ್ಲಿ ಹೇಳಿರುತ್ತಾರೆ.]

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ ೭ ॥**

ಭಾರತ (ಎಲೈ ಅರ್ಜುನನೆ) ಯದಾ ಯದಾ ಹಿ (ಯಾವ ಯಾವಾಗ) ಧರ್ಮಸ್ಯ (ಧರ್ಮದ) ಗ್ಲಾನಿಃ (ಅವನತಿಯು) ಅಧರ್ಮಸ್ಯ (ಅಧರ್ಮದ) ಅಭ್ಯುತ್ಥಾನಂ (ಉನ್ನತಿಯು) ಭವತಿ (ಆಗುತ್ತದೆಯೋ) ತದಾ (ಆಗ) ಅಹಂ (ನಾನು) ಆತ್ಮಾನಂ (ನನ್ನನ್ನು) ಸೃಜಾಮಿ (ಸೃಷ್ಟಿಮಾಡುತ್ತೇನೆ).

೭. ಎಲೈ ಅರ್ಜುನ, ಯಾವಾಗ ಧರ್ಮದ[1] ಅವನತಿಯಾಗುವುದೋ, ಅಧರ್ಮದ ಉನ್ನತಿಯಾಗುವುದೋ ಆಗ ನಾನು ಅವತಾರಮಾಡುತ್ತೇನೆ.

[1] ಅಭ್ಯುದಯ–ನಿಃಶ್ರೇಯಸ್ಸುಗಳಿಗೆ ಕಾರಣಗಳಾದ ವರ್ಣಾಶ್ರಮಾದಿ ಧರ್ಮಗಳ.
[ಈ ಶ್ಲೋಕದಲ್ಲಿ ಅವತಾರದ ಸಮಯವನ್ನು ಸೂಚಿಸಿದೆ.]

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ ೮ ॥**

ಸಾಧೂನಾಂ (ಸಾಧುಗಳ) ಪರಿತ್ರಾಣಾಯ (ರಕ್ಷಣೆಗಾಗಿಯೂ) ದುಷ್ಕೃತಾಂ (ದುಷ್ಟರ) ವಿನಾಶಾಯ (ವಿನಾಶಕ್ಕಾಗಿಯೂ) ಧರ್ಮ–ಸಂಸ್ಥಾಪನಾರ್ಥಾಯ ಚ (ಮತ್ತು ಧರ್ಮಸಂಸ್ಥಾಪನೆಗಾಗಿಯೂ) ಯುಗೇ ಯುಗೇ (ಪ್ರತಿಯುಗದಲ್ಲಿಯೂ) ಸಂಭವಾಮಿ (ಅವತರಿಸುತ್ತೇನೆ).

೮. ಸಾಧುಗಳ ರಕ್ಷಣೆಗಾಗಿಯೂ ದುಷ್ಟರ ವಿನಾಶಕ್ಕಾಗಿಯೂ ಮತ್ತು ಧರ್ಮದ ಸಂಸ್ಥಾಪನೆಗಾಗಿಯೂ ಪ್ರತಿಯುಗದಲ್ಲಿಯೂ[1] ಅವತರಿಸುತ್ತೇನೆ.

[1] ಕೃತ ತ್ರೇತ ಮುಂತಾದ ಯುಗಗಳ ನಿಯಮವಿಲ್ಲದೆ (ಶ್ರೀರಾಮಾನುಜ).
[ಈ ಶ್ಲೋಕದಲ್ಲಿ ಅವತಾರದ ಪ್ರಯೋಜನವನ್ನು ಹೇಳಿದೆ.]

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ೯ ॥**

ಅರ್ಜುನ (ಎಲೈ ಅರ್ಜುನನೆ) ಯಃ (ಯಾವನು) ಏವಂ (ಹೀಗೆ) ಮೇ (ನನ್ನ) ದಿವ್ಯಂ (ದಿವ್ಯವಾದ) ಜನ್ಮ (ಜನ್ಮವನ್ನೂ) ಕರ್ಮ ಚ (ಮತ್ತು ಕರ್ಮವನ್ನೂ) ತತ್ತ್ವತಃ (ಯಥಾರ್ಥವಾಗಿ) ವೇತ್ತಿ (ತಿಳಿಯುತ್ತಾನೋ) ಸಃ (ಅವನು) ದೇಹಂ (ದೇಹವನ್ನು) ತ್ಯಕ್ತ್ವಾ (ತ್ಯಾಗಮಾಡಿ) ಪುನರ್ಜನ್ಮ (ಪುನರ್ಜನ್ಮವನ್ನು) ನ ಏತಿ (ಹೊಂದುವುದಿಲ್ಲ) ಮಾಂ (ನನ್ನನ್ನು) ಏತಿ (ಹೊಂದುತ್ತಾನೆ).

೯. ಎಲೈ ಅರ್ಜುನ, ಯಾವನು ಹೀಗೆ ನನ್ನ ದಿವ್ಯವಾದ[1] ಅವತಾರವನ್ನೂ ಕರ್ಮವನ್ನೂ ಯಥಾರ್ಥವಾಗಿ ತಿಳಿಯುತ್ತಾನೆಯೋ ಅವನು ದೇಹ

ವನ್ನು ತ್ಯಾಗಮಾಡಿದ ನಂತರ ಪುನರ್ಜನ್ಮವನ್ನು ಹೊಂದುವುದಿಲ್ಲ; ನನ್ನನ್ನೇ ಹೊಂದುತ್ತಾನೆ.

[1] ಅಪ್ರಾಕೃತವಾದ.

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥**

ವೀತ-ರಾಗ-ಭಯ-ಕ್ರೋಧಾಃ (ಆಸಕ್ತಿ ಭಯ ಕ್ರೋಧಗಳಿಲ್ಲದವರಾಗಿ) ಮನ್ಮಯಾಃ (ನನ್ನಲ್ಲಿಯೇ ಮನಸ್ಸುಳ್ಳವರಾಗಿ) ಮಾಂ (ನನ್ನನ್ನು) ಉಪಾಶ್ರಿತಾಃ (ಆಶ್ರಯಿಸಿದವರಾಗಿ) ಬಹವಃ (ಅನೇಕರು) ಜ್ಞಾನತಪಸಾ (ಜ್ಞಾನರೂಪವಾದ ತಪಸ್ಸಿನಿಂದ) ಪೂತಾಃ (ಪವಿತ್ರರಾಗಿ) ಮದ್ಭಾವಂ (ನನ್ನ ಭಾವವನ್ನು) ಆಗತಾಃ (ಹೊಂದಿರುತ್ತಾರೆ).

೧೦. ಆಸಕ್ತಿ-ಭಯ-ಕ್ರೋಧಗಳಿಲ್ಲದವರಾಗಿ ನನ್ನಲ್ಲಿಯೇ ಮನಸ್ಸುಳ್ಳವರಾಗಿ ನನ್ನನ್ನೇ ಆಶ್ರಯಿಸಿದವರಾಗಿ ಅನೇಕರು ಜ್ಞಾನರೂಪವಾದ ತಪಸ್ಸಿನಿಂದ[1] ಪವಿತ್ರರಾಗಿ ನನ್ನ ಭಾವವನ್ನು[2] ಹೊಂದಿರುತ್ತಾರೆ.

[1] ಪರಮಾತ್ಮವಿಷಯವಾದ ಜ್ಞಾನವೆಂಬ ತಪಸ್ಸಿನಿಂದ.
[2] ಈಶ್ವರಭಾವವನ್ನು ಎಂದರೆ ಮೋಕ್ಷವನ್ನು.

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೧೧ ॥**

ಯೇ (ಯಾರು) ಯಥಾ (ಹೇಗೆ) ಮಾಂ (ನನ್ನನ್ನು) ಪ್ರಪದ್ಯಂತೇ (ಆಶ್ರಯಿಸುತ್ತಾರೋ) ತಾನ್ (ಅವರನ್ನು) ತಥಾ ಏವ (ಹಾಗೆಯೇ) ಅಹಂ (ನಾನು) ಭಜಾಮಿ (ಅನುಗ್ರಹಿಸುತ್ತೇನೆ) ಪಾರ್ಥ (ಎಲೈ ಅರ್ಜುನನೆ) ಮನುಷ್ಯಾಃ (ಮನುಷ್ಯರು) ಸರ್ವಶಃ (ಸರ್ವಪ್ರಕಾರಗಳಿಂದಲೂ) ಮಮ (ನನ್ನ) ವರ್ತ್ಮ (ಪಥವನ್ನು) ಅನುವರ್ತಂತೇ (ಅನುಸರಿಸುತ್ತಾರೆ).

೧೧. ಯಾರು ಹೇಗೆ ನನ್ನನ್ನು ಆಶ್ರಯಿಸುತ್ತಾರೋ ಅವರನ್ನು ಹಾಗೆಯೇ ನಾನು ಅನುಗ್ರಹಿಸುತ್ತೇನೆ; ಎಲೈ ಅರ್ಜುನ, ಮನುಷ್ಯರು ಸರ್ವಪ್ರಕಾರಗಳಿಂದಲೂ ನನ್ನ ಪಥವನ್ನೇ ಅನುಸರಿಸುತ್ತಾರೆ.

[ಫಲವನ್ನು ಬಯಸುವವರಿಗೆ ಫಲವೂ, ಫಲವನ್ನು ಬಯಸದ ಮುಮುಕ್ಷುಗಳಿಗೆ ಜ್ಞಾನವೂ, ಜ್ಞಾನಿಗಳಿಗೆ ಮತ್ತು ಸಂನ್ಯಾಸಿಗಳಿಗೆ- ಮೋಕ್ಷವೂ ಉಂಟಾಗುವುವೆಂದು ಶ್ರೀಶಂಕರಾಚಾರ್ಯರು ಈ ಶ್ಲೋಕದ ವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. ಶ್ರೀರಾಮಾನುಜಭಾಷ್ಯದ ಪ್ರಕಾರ ಸಾಧುಗಳ ರಕ್ಷಣೆ ಕೇವಲ ದೇವಮನುಷ್ಯಾದಿ

ಅವತಾರಗಳ ಮೂಲಕ ಅಲ್ಲವು. ಪ್ರಪನ್ನರು ತಮ್ಮ ಅಪೇಕ್ಷೆಗೆ ಅನುರೂಪವಾಗಿ ಭಗವಂತನನ್ನು ಸಂಕಲ್ಪಿಸಿಕೊಂಡು ಆಶ್ರಯಿಸಿದರೆ ಅವರ ಇಷ್ಟದ ಪ್ರಕಾರ ಅವನು ದೃಗ್ಗೋಚರನಾಗುತ್ತಾನೆ. ಪ್ರಪನ್ನರು ಭಗವಂತನ ಸ್ವಭಾವವೆಲ್ಲವನ್ನೂ (ವರ್ತ್ಮ) ಸರ್ವಪ್ರಕಾರಗಳಿಂದಲೂ ಅನುಭವಿಸುತ್ತಾರೆ.]

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨ ॥**

ಕರ್ಮಣಾಂ (ಕರ್ಮಗಳ) ಸಿದ್ಧಿಂ (ಸಿದ್ಧಿಯನ್ನು) ಕಾಂಕ್ಷಂತಃ (ಬಯಸುತ್ತಾ) ಇಹ (ಇಲ್ಲಿ) ದೇವತಾಃ (ದೇವತೆಗಳನ್ನು) ಯಜಂತೇ (ಆರಾಧಿಸುತ್ತಾರೆ) ಹಿ (ಏಕೆಂದರೆ) ಮಾನುಷೇ ಲೋಕೇ (ಮನುಷ್ಯಲೋಕದಲ್ಲಿ) ಕರ್ಮಜಾ (ಕರ್ಮದಿಂದುಂಟಾಗುವ) ಸಿದ್ಧಿಃ (ಸಿದ್ಧಿಯು) ಕ್ಷಿಪ್ರಂ (ಶೀಘ್ರವಾಗಿ) ಭವತಿ (ಆಗುತ್ತದೆ).

೧೨. ಕರ್ಮಗಳ ಸಿದ್ಧಿಯನ್ನು ಬಯಸುತ್ತಾ ಇಲ್ಲಿ[1] [ಜನರು] ದೇವತೆಗಳನ್ನು[2] ಆರಾಧಿಸುತ್ತಾರೆ; ಏಕೆಂದರೆ ಮನುಷ್ಯಲೋಕದಲ್ಲಿ ಕರ್ಮದಿಂದುಂಟಾಗುವ ಸಿದ್ಧಿಯು ಶೀಘ್ರವಾಗಿ ಆಗುತ್ತದೆ.

[1] ಈ ಲೋಕದಲ್ಲಿ.

[2] ಇಂದ್ರ ಅಗ್ನಿ ಮೊದಲಾದ ದೇವತೆಗಳನ್ನು.

[ಸಾಮಾನ್ಯವಾಗಿ ಜನರು ಅನಿತ್ಯವಾದ ಐಹಿಕ ಫಲಗಳನ್ನೇ ಬಯಸುತ್ತಾ ಇತರ ದೇವತೆಗಳನ್ನು ಆರಾಧಿಸುವರಲ್ಲದೆ ಸರ್ವದೇವತೆಗಳ ಆತ್ಮನಾದ ಭಗವಂತನನ್ನು ಭಜಿಸುವುದಿಲ್ಲವೆಂದು ಈ ಶ್ಲೋಕದಲ್ಲಿ ಹೇಳಿದೆ.]

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥ ೧೩ ॥**

ಗುಣ-ಕರ್ಮ-ವಿಭಾಗಶಃ (ಗುಣ ಮತ್ತು ಕರ್ಮಗಳ ವಿಭಾಗದ ಮೂಲಕ) ಚಾತುರ್ವರ್ಣ್ಯಂ (ಚಾತುರ್ವರ್ಣ್ಯವು) ಮಯಾ (ನನ್ನಿಂದ) ಸೃಷ್ಟಂ (ಸೃಷ್ಟಿಸಲ್ಪಟ್ಟಿತು) ತಸ್ಯ (ಅದರ) ಕರ್ತಾರಂ ಅಪಿ (ಕರ್ತೃವಾಗಿದ್ದರೂ) ಮಾಂ (ನನ್ನನ್ನು) ಅವ್ಯಯಂ (ಅವ್ಯಯನೆಂದೂ) ಅಕರ್ತಾರಂ (ಅಕರ್ತೃವೆಂದೂ) ವಿದ್ಧಿ (ತಿಳಿ).

೧೩. ಗುಣ[1] ಮತ್ತು ಕರ್ಮಗಳ ವಿಭಾಗದ ಮೂಲಕ ಚಾತುರ್ವರ್ಣ್ಯವು ನನ್ನಿಂದ ಸೃಷ್ಟಿಸಲ್ಪಟ್ಟಿತು; ಅದರ ಕರ್ತೃವಾಗಿದ್ದರೂ ನನ್ನನ್ನು ಅವ್ಯಯನೆಂದೂ ಅಕರ್ತೃವೆಂದೂ ತಿಳಿ.

[1] ಸತ್ತ್ವ ರಜಸ್ಸು ತಮಸ್ಸು.

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ॥**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ ೧೪ ॥**

ಕರ್ಮಾಣಿ (ಕರ್ಮಗಳು) ಮಾಂ (ನನ್ನನ್ನು) ನ ಲಿಂಪಂತಿ (ಅಂಟುವುದಿಲ್ಲ) ಮೇ (ನನ್ನ, ನನಗೆ) ಕರ್ಮಫಲೇ (ಕರ್ಮಫಲದಲ್ಲಿ) ನ ಸ್ಪೃಹಾ (ಆಶೆಯಿಲ್ಲ) ಇತಿ (ಹೀಗೆ) ಯಃ (ಯಾವನು) ಮಾಂ (ನನ್ನನ್ನು) ಅಭಿಜಾನಾತಿ (ತಿಳಿದುಕೊಳ್ಳುವನೋ) ಸಃ (ಅವನು) ಕರ್ಮಭಿಃ (ಕರ್ಮಗಳಿಂದ) ನ ಬಧ್ಯತೇ (ಕಟ್ಟಲ್ಪಡುವುದಿಲ್ಲ).

೧೪. ಕರ್ಮಗಳು ನನ್ನನ್ನು ಅಂಟುವುದಿಲ್ಲ,[1] ನನಗೆ ಕರ್ಮಫಲದಲ್ಲಿ ಆಶೆಯಿಲ್ಲ; ಈ ಪ್ರಕಾರ ಯಾವನು ನನ್ನನ್ನು ಅರಿತುಕೊಳ್ಳುವನೋ ಅವನು ಕರ್ಮಗಳಿಂದ ಕಟ್ಟಲ್ಪಡುವುದಿಲ್ಲ.

[1] ಅಹಂಕಾರವಿಲ್ಲದಿರುವುದರಿಂದ.

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥ ೧೫ ॥**

ಪೂರ್ವೈಃ (ಪ್ರಾಚೀನರಾದ) ಮುಮುಕ್ಷುಭಿಃ (ಮುಮುಕ್ಷುಗಳಿಂದ) ಅಪಿ (ಕೂಡ) ಏವಂ (ಹೀಗೆ) ಜ್ಞಾತ್ವಾ (ತಿಳಿದುಕೊಂಡು) ಕರ್ಮ (ಕರ್ಮವು) ಕೃತಂ (ಮಾಡಲ್ಪಟ್ಟಿತು) ತಸ್ಮಾತ್ (ಆದುದರಿಂದ) ತ್ವಂ (ನೀನು) ಪೂರ್ವೈಃ (ಪೂರ್ವಜರಿಂದ) ಕೃತಂ (ಮಾಡಲ್ಪಟ್ಟ) ಪೂರ್ವತರಂ (ಪುರಾತನವಾದ) ಕರ್ಮ ಏವ (ಕರ್ಮವನ್ನೇ) ಕುರು (ಮಾಡು).

೧೫. ಪ್ರಾಚೀನರಾದ ಮುಮುಕ್ಷುಗಳು ಈ ರೀತಿ ತಿಳಿದುಕೊಂಡು ಕರ್ಮವನ್ನು ಮಾಡುತ್ತಿದ್ದರು; ಆದುದರಿಂದ ನೀನು ಪೂರ್ವಜರಿಂದ[1] ಮಾಡಲ್ಪಟ್ಟ ಪುರಾತನವಾದ ಕರ್ಮವನ್ನೇ ಮಾಡು.[2]

[1] ಜನಕ ವಿವಸ್ವಂತ ಮನು ಮೊದಲಾದವರಿಂದ.

[2] ಆತ್ಮಜ್ಞನಲ್ಲದಿದ್ದರೆ ಚಿತ್ತಶುದ್ಧಿಗಾಗಿ, ಆತ್ಮಜ್ಞನಾಗಿದ್ದರೆ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡಬೇಕು.

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧೬ ॥**

. ಕಿಂ ಕರ್ಮ (ಕರ್ಮವು ಯಾವುದು) ಕಿಂ ಅಕರ್ಮ (ಅಕರ್ಮವು ಯಾವುದು) ಇತಿ ಅತ್ರ (ಎಂಬಲ್ಲಿ) ಕವಯಃ ಅಪಿ (ಕವಿಗಳೂ ಕೂಡ) ಮೋಹಿತಾಃ (ಭ್ರಾಂತ ರಾಗಿರುವವರು) ಯತ್ (ಯಾವುದನ್ನು) ಜ್ಞಾತ್ವಾ (ತಿಳಿದುಕೊಂಡು) ಅಶುಭಾತ್ (ಅಶುಭದಿಂದ) ಮೋಕ್ಷ್ಯಸೇ (ಮುಕ್ತನಾಗುತ್ತೀಯೋ) ತತ್ (ಆ) ಕರ್ಮ (ಕರ್ಮ ವನ್ನು) ತೇ (ನಿನಗೆ) ಪ್ರವಕ್ಷ್ಯಾಮಿ (ಹೇಳುತ್ತೇನೆ).

೧೬. ಕರ್ಮವು ಯಾವುದು, ಅಕರ್ಮವು ಯಾವುದು ಎಂಬಲ್ಲಿ ಕವಿ ಗಳೂ[1] ಕೂಡ ಭ್ರಾಂತರಾಗಿರುವರು; (ಆದುದರಿಂದ) ಯಾವುದನ್ನು ತಿಳಿದು ಕೊಂಡು ಅಶುಭದಿಂದ[2] ಮುಕ್ತನಾಗುತ್ತೀಯೋ ಆ ಕರ್ಮವನ್ನು ನಿನಗೆ ಹೇಳುತ್ತೇನೆ.

[1] ಮೇಧಾವಿಗಳು, ವಿದ್ವಾಂಸರು.
[2] ಸಂಸಾರದಿಂದ.

**ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**

ಕರ್ಮಣಃ ಅಪಿ (ಕರ್ಮದಲ್ಲಿಯೂ) ಬೋದ್ಧವ್ಯಂ (ತಿಳಿದುಕೊಳ್ಳತಕ್ಕದ್ದು) ವಿಕರ್ಮಣಃ ಚ (ಮತ್ತು ವಿಕರ್ಮದಲ್ಲಿಯೂ) ಬೋದ್ಧವ್ಯಂ (ತಿಳಿದುಕೊಳ್ಳತಕ್ಕದ್ದು) ಅಕರ್ಮಣಃ ಚ (ಮತ್ತು ಅಕರ್ಮದಲ್ಲಿಯೂ) ಬೋದ್ಧವ್ಯಂ (ತಿಳಿದುಕೊಳ್ಳತಕ್ಕದ್ದು) ಹಿ (ಏಕೆಂದರೆ) ಕರ್ಮಣಃ (ಕರ್ಮದ) ಗತಿಃ (ಗತಿಯು) ಗಹನಾ (ಕಷ್ಟವಾಗಿರು ವುದು).

೧೭. ಕರ್ಮದಲ್ಲಿ[1] ವಿಕರ್ಮದಲ್ಲಿ[2] ಮತ್ತು ಅಕರ್ಮದಲ್ಲಿ ತಿಳಿದು ಕೊಳ್ಳತಕ್ಕ ವಿಷಯಗಳುಂಟು; ಏಕೆಂದರೆ ಕರ್ಮದ ಗತಿಯು [ಅರಿಯಲು] ಕಷ್ಟವಾಗಿರುವುದು.

[1] ಶಾಸ್ತ್ರವಿಹಿತವಾದ ಕರ್ಮದಲ್ಲಿ.
[2] ನಿಷಿದ್ಧ-ಕರ್ಮದಲ್ಲಿ.

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನ-**
**ಕರ್ಮಕೃತ್ ॥ ೧೮ ॥**

ಯಃ (ಯಾವನು) ಕರ್ಮಣಿ (ಕರ್ಮದಲ್ಲಿ) ಅಕರ್ಮ (ಅಕರ್ಮವನ್ನು) ಯಃ (ಯಾವನು) ಅಕರ್ಮಣಿ ಚ (ಅಕರ್ಮದಲ್ಲಿ) ಕರ್ಮ (ಕರ್ಮವನ್ನು) ಪಶ್ಯೇತ್ (ನೋಡುತ್ತಾನೆಯೋ) ಸಃ (ಅವನು) ಮನುಷ್ಯೇಷು (ಮನುಷ್ಯರಲ್ಲಿ)

ಬುದ್ಧಿಮಾನ್ (ಬುದ್ಧಿವಂತನು) ಸಃ (ಅವನು) ಯುಕ್ತಃ (ಯುಕ್ತನು) ಕೃತ್ಸ್ನ-ಕರ್ಮಕೃತ್ (ಸಕಲ ಕರ್ಮಗಳನ್ನು ಮಾಡಿದವನು).

೧೮. ಕರ್ಮದಲ್ಲಿ ಅಕರ್ಮವನ್ನೂ, ಅಕರ್ಮದಲ್ಲಿ ಕರ್ಮವನ್ನೂ ಯಾವನು ನೋಡುತ್ತಾನೆಯೋ ಅವನು ಮನುಷ್ಯರಲ್ಲಿ ಬುದ್ಧಿವಂತನು; ಅವನು ಯುಕ್ತನು ಮತ್ತು ಸಕಲಕರ್ಮಗಳನ್ನು ಮಾಡಿದವನು.

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥ ೧೯ ॥**

ಯಸ್ಯ (ಯಾವನ) ಸರ್ವೇ (ಸಕಲ) ಸಮಾರಂಭಾಃ (ಕರ್ಮಗಳು) ಕಾಮ-ಸಂಕಲ್ಪ-ವರ್ಜಿತಾಃ (ಕಾಮ ಮತ್ತು ಸಂಕಲ್ಪಗಳಿಂದ ವರ್ಜಿತವಾಗಿವೆಯೋ) ಜ್ಞಾನಾಗ್ನಿ-ದಗ್ಧ-ಕರ್ಮಾಣಂ ತಂ (ಜ್ಞಾನಾಗ್ನಿ ದ್ವಾರಾ ಸುಟ್ಟ ಕರ್ಮಗಳುಳ್ಳ ಅವನನ್ನು) ಬುಧಾಃ (ಜ್ಞಾನಿಗಳು) ಪಂಡಿತಂ (ಪಂಡಿತನೆಂದು) ಆಹುಃ (ಹೇಳುವರು).

೧೯. ಯಾವನ ಕರ್ಮಗಳೆಲ್ಲಾ ಕಾಮ ಮತ್ತು ಸಂಕಲ್ಪಗಳಿಂದ ವರ್ಜಿತವಾಗಿವೆಯೋ, ಯಾವನ ಕರ್ಮಗಳು ಜ್ಞಾನವೆಂಬ[1] ಅಗ್ನಿಯ ದ್ವಾರಾ ಸುಡಲ್ಪಟ್ಟಿವೆಯೋ ಅವನನ್ನು ಜ್ಞಾನಿಗಳು ಪಂಡಿತನೆಂದು ಹೇಳುವರು.

[1] ಕರ್ಮದಲ್ಲಿ ಅಕರ್ಮವನ್ನು ಕಾಣುವುದು ಜ್ಞಾನವು.

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ ಕರೋತಿ ಸಃ ॥ ೨೦ ॥**

ಸಃ (ಅವನು) ಕರ್ಮಫಲಾಸಂಗಂ (ಕರ್ಮಫಲದಲ್ಲಿ ಆಸಕ್ತಿಯನ್ನು) ತ್ಯಕ್ತ್ವಾ (ಬಿಟ್ಟು) ನಿತ್ಯತೃಪ್ತಃ (ನಿತ್ಯತೃಪ್ತನಾಗಿ) ನಿರಾಶ್ರಯಃ (ನಿರಾಶ್ರಯನಾಗಿ) ಕರ್ಮಣಿ (ಕರ್ಮದಲ್ಲಿ) ಅಭಿಪ್ರವೃತ್ತಃ ಅಪಿ (ಪ್ರವೃತ್ತನಾಗಿದ್ದರೂ) ಕಿಂಚಿತ್ ಏವ (ಏನನ್ನೂ) ನ ಕರೋತಿ (ಮಾಡುತ್ತಿಲ್ಲ).

೨೦. ಕರ್ಮಫಲದಲ್ಲಿ ಆಸಕ್ತಿಯನ್ನು ಬಿಟ್ಟು ನಿತ್ಯತೃಪ್ತನೂ[1] ನಿರಾಶ್ರಯನೂ[2] ಆಗಿ ಕರ್ಮದಲ್ಲಿ ಪ್ರವೃತ್ತನಾಗಿದ್ದರೂ ಅವನು ಏನನ್ನೂ ಮಾಡುತ್ತಿಲ್ಲ.[3]

[1] ವಿಷಯಗಳಲ್ಲಿ ಯಾವ ಆಶೆಯೂ ಇಲ್ಲದೆ.

[2] ಇಹ-ಪರಲೋಕಗಳಲ್ಲಿ ಇಷ್ಟಫಲಗಳನ್ನು ಸಾಧಿಸಲು ಯಾವುದನ್ನೂ ಆಶ್ರಯಿಸದವನಾಗಿ.

3 ನಿಷ್ಕ್ರಿಯನಾದ ಆತ್ಮನೇ ತಾನೆಂಬ ಜ್ಞಾನದಿಂದ ಸಂಪನ್ನನಾಗಿರುವುದರಿಂದ ಅವನು ಏನೂ ಮಾಡುತ್ತಿಲ್ಲ.

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೨೧ ॥**

ನಿರಾಶೀಃ (ಆಶೆಯಿಲ್ಲದವನೂ) ಯತಚಿತ್ತಾತ್ಮಾ (ಚಿತ್ತ ಮತ್ತು ಆತ್ಮಗಳನ್ನು ವಶಪಡಿಸಿಕೊಂಡಿರುವವನೂ) ತ್ಯಕ್ತಸರ್ವಪರಿಗ್ರಹಃ (ಸರ್ವಪರಿಗ್ರಹಗಳನ್ನು ಬಿಟ್ಟಿರುವವನೂ) ಕೇವಲಂ (ಕೇವಲ) ಶಾರೀರಂ (ಶರೀರ ರಕ್ಷಣೆಗೆ ಬೇಕಾದ) ಕರ್ಮ (ಕರ್ಮವನ್ನು) ಕುರ್ವನ್ (ಮಾಡುತ್ತಿರುವವನೂ) ಕಿಲ್ಬಿಷಂ (ಅನಿಷ್ಟವನ್ನು) ನ ಆಪ್ನೋತಿ (ಹೊಂದುವುದಿಲ್ಲ).

೨೧. ಆಶೆಯಿಲ್ಲದವನೂ ಚಿತ್ತ ಮತ್ತು ಆತ್ಮಗಳನ್ನು[1] ವಶಪಡಿಸಿಕೊಂಡಿರುವವನೂ ಸರ್ವಪರಿಗ್ರಹವನ್ನು ಬಿಟ್ಟಿರುವವನೂ ಕೇವಲ ಶರೀರ ರಕ್ಷಣೆಗೆ ಬೇಕಾದ ಕರ್ಮವನ್ನು ಮಾಡುತ್ತಿರುವವನೂ ಆದ (ಯೋಗಿಯು) ಯಾವ ಕಿಲ್ಬಿಷವನ್ನೂ[2] ಹೊಂದುವುದಿಲ್ಲ.

1 ಚಿತ್ತವೆಂದರೆ ಅಂತಃಕರಣ, ಆತ್ಮವೆಂದರೆ ದೇಹೇಂದ್ರಿಯಗಳ ಸಂಘಾತ.

2 ಸಂಸಾರವನ್ನು.

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ॥ ೨೨ ॥**

ಯದೃಚ್ಛಾ-ಲಾಭ-ಸಂತುಷ್ಟಃ (ತಾನಾಗಿ ಬಂದುದರಲ್ಲಿ ತೃಪ್ತಿಯುಳ್ಳವನೂ) ದ್ವಂದ್ವಾತೀತಃ (ದ್ವಂದ್ವಗಳನ್ನು ಅತಿಕ್ರಮಿಸಿದವನೂ) ವಿಮತ್ಸರಃ (ಮಾತ್ಸರ್ಯವಿಲ್ಲದವನೂ) ಸಿದ್ಧೌ (ಲಾಭದಲ್ಲಿ) ಅಸಿದ್ಧೌ ಚ (ಮತ್ತು ಅಲಾಭದಲ್ಲಿ) ಸಮಃ (ಸಮಬುದ್ಧಿಯುಳ್ಳವನೂ) ಕೃತ್ವಾ ಅಪಿ (ಕರ್ಮವನ್ನು ಮಾಡಿದರೂ) ನ ನಿಬಧ್ಯತೇ (ಬದ್ಧನಾಗುವುದಿಲ್ಲ).

೨೨. ತಾನಾಗಿ ಬಂದುದರಲ್ಲಿ[1] ತೃಪ್ತಿಯುಳ್ಳವನೂ, ದ್ವಂದ್ವಾತೀತನೂ,[2] ಮಾತ್ಸರ್ಯವಿಲ್ಲದವನೂ,[3] ಲಾಭಾಲಾಭಗಳಲ್ಲಿ ಸಮಬುದ್ಧಿಯುಳ್ಳವನೂ ಆದ (ಯೋಗಿಯು) ಕರ್ಮವನ್ನು ಮಾಡಿದರೂ ಬದ್ಧನಾಗುವುದಿಲ್ಲ.

1 ಅಪ್ರಾರ್ಥಿತವಾಗಿ ತನಗೆ ತಾನೇ ಬಂದುದರಲ್ಲಿ.

2 ಶೀತೋಷ್ಣಗಳನ್ನು ಸಹಿಸುವವನು.

3 ಅನಿಷ್ಟವುಂಟಾಗಲು ತನ್ನ ಪ್ರಾರಬ್ಧಕರ್ಮವೆಂದು ತಿಳಿದು, ಆ ಅನಿಷ್ಟಕ್ಕೆ ಕಾರಣವಾಗಿ ತೋರುವ ಇತರರಲ್ಲಿ ಮಾತ್ಸರ್ಯವಿಲ್ಲದಿರುವವನು.

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩ ॥**

ಗತಸಂಗಸ್ಯ (ಆಸಕ್ತಿಯು ಹೋಗಿರುವ) ಮುಕ್ತಸ್ಯ (ಮುಕ್ತನಾದ) ಜ್ಞಾನಾವ-ಸ್ಥಿತ-ಚೇತಸಃ (ಜ್ಞಾನದಲ್ಲಿ ನೆಲೆಸಿರುವ ಮನಸ್ಸುಳ್ಳವನಾದ) ಯಜ್ಞಾಯ (ಯಜ್ಞಕ್ಕೋಸ್ಕರ) ಆಚರತಃ (ಆಚರಿಸುತ್ತಿರುವವನಿಗೆ) ಕರ್ಮ (ಕರ್ಮವು) ಸಮಗ್ರಂ (ಸಮಗ್ರವಾಗಿ) ಪ್ರವಿಲೀಯತೇ (ನಾಶವಾಗುವುದು).

**೨೩.** ಆಸಕ್ತಿಯಿಲ್ಲದವನೂ ಮುಕ್ತನೂ[1] ಜ್ಞಾನದಲ್ಲಿ ನೆಲೆಸಿರುವ ಮನಸ್ಸುಳ್ಳವನೂ ಮತ್ತು ಯಜ್ಞಕ್ಕೋಸ್ಕರವಾಗಿ ಕರ್ಮವನ್ನು ಆಚರಿಸುತ್ತಿರುವವನೂ (ಆದ ಯೋಗಿಗೆ) ಕರ್ಮವು ಸಮಗ್ರವಾಗಿ[2] ನಾಶವಾಗುತ್ತದೆ.

[1] ಧರ್ಮಾಧರ್ಮಗಳೇ ಮುಂತಾದ ಬಂಧಗಳಿಲ್ಲದವನು.

[2] ಫಲಸಹಿತವಾಗಿ, ನಿಶ್ಶೇಷವಾಗಿ.

**ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥**

ಅರ್ಪಣಂ (ಅರ್ಪಣವು) ಬ್ರಹ್ಮ (ಬ್ರಹ್ಮ) ಹವಿಃ (ಹವಿಸ್ಸು) ಬ್ರಹ್ಮ (ಬ್ರಹ್ಮ) ಬ್ರಹ್ಮಾಗ್ನೌ (ಬ್ರಹ್ಮರೂಪವಾದ ಅಗ್ನಿಯಲ್ಲಿ) ಬ್ರಹ್ಮಣಾ (ಬ್ರಹ್ಮದಿಂದಲೇ) ಹುತಂ (ಹೋಮ) ಬ್ರಹ್ಮ-ಕರ್ಮ-ಸಮಾಧಿನಾ (ಬ್ರಹ್ಮರೂಪವಾದ ಕರ್ಮದಲ್ಲಿ ಸಮಾಧಿಸ್ಥನಾದ) ತೇನ (ಆ ಪುರುಷನಿಂದ) ಗಂತವ್ಯಂ (ಹೊಂದಬೇಕಾದದ್ದು) ಬ್ರಹ್ಮ ಏವ (ಬ್ರಹ್ಮವೇ).

**೨೪.** ಅರ್ಪಣವು[1] ಬ್ರಹ್ಮ, ಹವಿಸ್ಸು[2] ಬ್ರಹ್ಮ, ಬ್ರಹ್ಮರೂಪವಾದ ಅಗ್ನಿಯಲ್ಲಿ ಬ್ರಹ್ಮದಿಂದಲೇ[3] ಹೋಮಮಾಡಲ್ಪಟ್ಟಿತು; ಬ್ರಹ್ಮರೂಪವಾದ ಕರ್ಮದಲ್ಲಿ ಸಮಾಧಿಸ್ಥನಾದ ಪುರುಷನಿಂದ[4] ಹೊಂದಬೇಕಾದದ್ದು ಬ್ರಹ್ಮವೇ.

[1] ಅರ್ಪಣಕ್ಕೆ ಸಾಧನಗಳಾದ ಸ್ರುಗಾದಿ ಕರಣಗಳು.

[2] ಹೋಮಕ್ಕೆ ಯೋಗ್ಯವಾದ ದ್ರವ್ಯಗಳು.

[3] ಹೋಮವನ್ನು ಮಾಡುವವನೂ ಕೂಡ ಬ್ರಹ್ಮವೇ.

[4] ಬ್ರಹ್ಮವೇ ಕರ್ಮವು; ಅಂತಹ ಕರ್ಮದಲ್ಲಿ ಮನಸ್ಸಿಟ್ಟಿರುವವನಿಂದ.

[ಯಜ್ಞ ಯಜ್ಞಾಗ್ನಿ ಯಜ್ಞಕ್ಕೆ ಬೇಕಾದ ಕರಣಗಳು ಹವಿಸ್ಸು ಮತ್ತು ಯಜವನ್ನು ಮಾಡುವ ಕರ್ತೃ—ಎಲ್ಲಾ ಬ್ರಹ್ಮಾತ್ಮಕವೆಂದು ಈ ಶ್ಲೋಕದಲ್ಲಿ ಸೂಚಿಸಿದೆ. ಮುಮುಕ್ಷುವು ಮಾಡುವ ಸಮಸ್ತ ಕರ್ಮವೂ ಬ್ರಹ್ಮಾತ್ಮಕವೆಂದೇ ಭಾವಿಸಬೇಕು, ಏಕೆಂದರೆ ಪರಬ್ರಹ್ಮಕ್ಕಿಂತ ವ್ಯತಿರೇಕವಾದ ಯಾವ ವಸ್ತುವೂ ಇಲ್ಲ.]

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫ ॥**

ಅಪರೇ ಯೋಗಿನಃ (ಕೆಲವು ಯೋಗಿಗಳು) ದೈವಂ ಯಜ್ಞಂ ಏವ (ದೈವ ಯಜ್ಞವನ್ನೇ) ಪರ್ಯುಪಾಸತೇ (ಉಪಾಸನೆಮಾಡುತ್ತಾರೆ) ಅಪರೇ (ಇನ್ನು ಕೆಲವರು) ಬ್ರಹ್ಮಾಗ್ನೌ (ಬ್ರಹ್ಮವೆಂಬ ಅಗ್ನಿಯಲ್ಲಿ) ಯಜ್ಞೇನ ಏವ (ಯಜ್ಞದಿಂದಲೇ) ಯಜ್ಞಂ (ಯಜ್ಞವನ್ನು) ಉಪಜುಹ್ವತಿ (ಹೋಮಮಾಡುತ್ತಾರೆ).

೨೫. ಕೆಲವು ಯೋಗಿಗಳು ದೈವಯಜ್ಞವನ್ನೇ[1] ಉಪಾಸನೆಮಾಡುತ್ತಾರೆ; ಇನ್ನು ಕೆಲವರು ಬ್ರಹ್ಮವೆಂಬ[2] ಅಗ್ನಿಯಲ್ಲಿ ಯಜ್ಞದಿಂದಲೇ ಯಜ್ಞವನ್ನು[3] ಹೋಮಮಾಡುತ್ತಾರೆ.

1 ಇಂದ್ರಾದಿದೇವತೆಗಳನ್ನು ಉದ್ದೇಶಿಸಿ ಮಾಡುವ ಯಜ್ಞ.

2 'ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈತ್ತಿರೀಯ ಉಪನಿಷತ್, ೨-೧)', 'ವಿಜ್ಞಾನಮಾನಂದಂ ಬ್ರಹ್ಮ (ಬೃಹದಾರಣ್ಯಕ ಉಪನಿಷತ್, ೩-೯-೨೮)' ಮುಂತಾದ ಶ್ರುತಿ ವಚನಗಳಿಂದ ಪ್ರಸಿದ್ಧವಾದ ನಿರುಪಾಧಿಕಬ್ರಹ್ಮ.

3 ಜೀವಾತ್ಮನನ್ನು.

[ಉಪಾಧಿಯಿಂದ ಕೂಡಿದ ಆತ್ಮನನ್ನು ನಿರುಪಾಧಿಕವಾದ ಪರಬ್ರಹ್ಮರೂಪದಿಂದ ಕಾಣುವುದೇ ಬ್ರಹ್ಮಾಗ್ನಿಯಲ್ಲಿ ಮಾಡುವ ಯಜ್ಞ.]

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ ವಿಷಯಾನನ್ಯೇ ಇಂದ್ರಿಯಾಗ್ನಿಷು ಜುಹ್ವತಿ ॥ ೨೬ ॥**

ಅನ್ಯೇ (ಇನ್ನು ಕೆಲವರು) ಶ್ರೋತ್ರಾದೀನಿ (ಶ್ರೋತ್ರವೇ ಮೊದಲಾದ) ಇಂದ್ರಿಯಾಣಿ (ಇಂದ್ರಿಯಗಳನ್ನು) ಸಂಯಮಾಗ್ನಿಷು (ಸಂಯಮಗಳೆಂಬ ಅಗ್ನಿಗಳಲ್ಲಿ) ಜುಹ್ವತಿ (ಹೋಮಮಾಡುತ್ತಾರೆ) ಅನ್ಯೇ (ಮತ್ತೆ ಕೆಲವರು) ಶಬ್ದಾದೀನ್ (ಶಬ್ದವೇ ಮೊದಲಾದ) ವಿಷಯಾನ್ (ವಿಷಯಗಳನ್ನು) ಇಂದ್ರಿಯಾಗ್ನಿಷು (ಇಂದ್ರಿಯಗಳೆಂಬ ಅಗ್ನಿಗಳಲ್ಲಿ) ಜುಹ್ವತಿ (ಹೋಮಮಾಡುತ್ತಾರೆ).

೨೬. ಇನ್ನು ಕೆಲವರು ಶ್ರೋತ್ರವೇ ಮೊದಲಾದ ಇಂದ್ರಿಯಗಳನ್ನು ಸಂಯಮಾಗ್ನಿಗಳಲ್ಲಿ ಹೋಮಮಾಡುತ್ತಾರೆ;[1] ಮತ್ತೆ ಕೆಲವರು ಶಬ್ದವೇ ಮೊದಲಾದ ವಿಷಯಗಳನ್ನು ಇಂದ್ರಿಯಾಗ್ನಿಗಳಲ್ಲಿ ಹೋಮಮಾಡುತ್ತಾರೆ.[2]

1 ಇಂದ್ರಿಯಗಳು ವಿಷಯಗಳ ಕಡೆಗೆ ಹೋಗದೇ ಇರುವ ಹಾಗೆ ಮಾಡುತ್ತಾರೆ.

2 ಶ್ರೋತ್ರಾದಿಗಳ ದ್ವಾರಾ ಅವಿರುದ್ಧ-ವಿಷಯಗಳನ್ನು ಅನುಭವಿಸುವುದು ಹೋಮ

ವೆಂದು ಎಣಿಸುತ್ತಾರೆ (ಶ್ರೀಶಂಕರ). ಇಂದ್ರಿಯಗಳಿಗೆ ಶಬ್ದಾದಿವಿಷಯಗಳಲ್ಲಿರುವ ಆಸಕ್ತಿಯನ್ನು ನಿವಾರಣೆಮಾಡುವುದರಲ್ಲಿ ಪ್ರಯತ್ನಿಸುತ್ತಾರೆ (ಶ್ರೀರಾಮಾನುಜ).

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥**

ಅಪರೇ (ಇನ್ನು ಕೆಲವರು) ಸರ್ವಾಣಿ (ಎಲ್ಲಾ) ಇಂದ್ರಿಯ-ಕರ್ಮಾಣಿ (ಇಂದ್ರಿಯಕರ್ಮಗಳನ್ನೂ) ಪ್ರಾಣ-ಕರ್ಮಾಣಿ ಚ (ಮತ್ತು ಪ್ರಾಣಕರ್ಮಗಳನ್ನೂ) ಜ್ಞಾನ-ದೀಪಿತೇ (ಜ್ಞಾನದಿಂದ ಪ್ರಕಾಶಿಸುವ) ಆತ್ಮಸಂಯಮ-ಯೋಗಾಗ್ನೌ (ಆತ್ಮ-ಸಂಯಮವೆಂಬ ಯೋಗಾಗ್ನಿಯಲ್ಲಿ) ಜುಹ್ವತಿ (ಹೋಮಮಾಡುತ್ತಾರೆ).

೨೭. ಇನ್ನು ಕೆಲವರು ಎಲ್ಲಾ ಇಂದ್ರಿಯಕರ್ಮಗಳನ್ನೂ ಮತ್ತು ಪ್ರಾಣಕರ್ಮಗಳನ್ನೂ ಜ್ಞಾನದಿಂದ[1] ಪ್ರಕಾಶಿಸುವ ಆತ್ಮಸಂಯಮವೆಂಬ[2] ಯೋಗಾಗ್ನಿಯಲ್ಲಿ ಹೋಮಮಾಡುತ್ತಾರೆ.

1 ವಿವೇಕರೂಪವಾದ ಜ್ಞಾನದಿಂದ ಪ್ರಜ್ವಲಿಸುತ್ತಿರುವ.

2 ಆತ್ಮನಲ್ಲಿ ಮಾಡುವ ಸಂಯಮ ಆತ್ಮಸಂಯಮ ಎಂದರೆ ಆತ್ಮನನ್ನು ಧ್ಯಾನಿಸುವಾಗ ಉಂಟಾಗುವ ಚಿತ್ತೈಕಾಗ್ರತೆ.

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮ ॥**

ಅಪರೇ (ಇನ್ನು ಕೆಲವರು) ದ್ರವ್ಯಯಜ್ಞಾಃ (ದ್ರವ್ಯಯಜ್ಞವನ್ನು ಮಾಡುವವರು) ತಥಾ (ಹಾಗೆಯೇ) ತಪೋಯಜ್ಞಾಃ (ತಪೋಯಜ್ಞವನ್ನು ಮಾಡುವವರು) ಯೋಗ-ಯಜ್ಞಾಃ (ಯೋಗಯಜ್ಞವನ್ನು ಮಾಡುವವರು) ಸ್ವಾಧ್ಯಾಯ-ಜ್ಞಾನ-ಯಜ್ಞಾಃ ಚ (ಸ್ವಾಧ್ಯಾಯ-ಯಜ್ಞವನ್ನು ಮತ್ತು ಜ್ಞಾನ-ಯಜ್ಞವನ್ನು ಮಾಡುವವರು) [ಇವರೆಲ್ಲರೂ] ಸಂಶಿತವ್ರತಾಃ (ದೃಢವ್ರತರಾದ) ಯತಯಃ (ಯತಿಗಳು).

೨೮. ಕೆಲವರು ದ್ರವ್ಯದಾನರೂಪವಾದ ಯಜ್ಞವನ್ನು[1] ಮಾಡುವರು, (ಕೆಲವರು) ತಪೋರೂಪವಾದ ಯಜ್ಞವನ್ನು[2] ಮಾಡುವರು, (ಕೆಲವರು) ಯೋಗರೂಪವಾದ ಯಜ್ಞವನ್ನು[3] ಮಾಡುವರು, (ಕೆಲವರು) ಸ್ವಾಧ್ಯಾಯರೂಪವಾದ ಮತ್ತು ಜ್ಞಾನರೂಪವಾದ ಯಜ್ಞಗಳನ್ನು[4] ಮಾಡುವರು; (ಇವರೆಲ್ಲರೂ) ದೃಢವ್ರತರಾದ ಯತಿಗಳು.[5]

1 ಯಜ್ಞವೆಂಬ ಬುದ್ಧಿಯಿಂದ ಸತ್ಪಾತ್ರಗಳಲ್ಲಿ ದ್ರವ್ಯವನ್ನು ದಾನಮಾಡುವವರು.

2 ಕೃಚ್ಛ್ರ, ಚಾಂದ್ರಾಯಣ ಮುಂತಾದ ತಪಸ್ಸನ್ನು ಯಜ್ಞವೆಂದು ಎಣಿಸುವವರು.

3 ಚಿತ್ತವೃತ್ತಿ-ನಿರೋಧರೂಪವಾದ ಯೋಗವನ್ನು ಯಜ್ಞವೆಂದು ಭಾವಿಸುವವರು.

4 ಋಗ್ವೇದ ಮುಂತಾದುವುಗಳನ್ನು ವಿಧಿಪ್ರಕಾರ ಅಧ್ಯಯನಮಾಡುವವರು ಸ್ವಾಧ್ಯಾಯ-ಯಜ್ಞರು; ಶಾಸ್ತ್ರಾರ್ಥದ ಜ್ಞಾನವನ್ನು ಯಜ್ಞವೆಂದು ಎಣಿಸುವವರು ಜ್ಞಾನಯಜ್ಞರು.

5 ಯತ್ನವನ್ನು ಮಾಡುತ್ತಿರುವವರು.

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥ ೨೯ ॥**

ಅಪರೇ (ಕೆಲವರು) ಅಪಾನೇ (ಅಪಾನವಾಯುವಿನಲ್ಲಿ) ಪ್ರಾಣಂ (ಪ್ರಾಣ ವಾಯುವನ್ನು) ತಥಾ (ಹಾಗೆಯೇ) ಪ್ರಾಣೇ (ಪ್ರಾಣವಾಯುವಿನಲ್ಲಿ) ಅಪಾನಂ (ಅಪಾನವಾಯುವನ್ನು) ಜುಹ್ವತಿ (ಹೋಮಮಾಡುತ್ತಾರೆ) ಪ್ರಾಣಾಪಾನ-ಗತೀ (ಪ್ರಾಣಾಪಾನಗಳ ಗತಿಗಳನ್ನು) ರುದ್ಧ್ವಾ (ನಿರೋಧಿಸಿ) ಪ್ರಾಣಾಯಾಮ-ಪರಾ-ಯಣಾಃ (ಪ್ರಾಣಾಯಾಮದಲ್ಲಿ ನಿರತರಾಗಿರುತ್ತಾರೆ).

**೨೯.** ಕೆಲವರು ಅಪಾನವಾಯುವಿನಲ್ಲಿ ಪ್ರಾಣವಾಯುವನ್ನೂ,[1] ಪ್ರಾಣ ವಾಯುವಿನಲ್ಲಿ ಅಪಾನವಾಯುವನ್ನೂ[2] ಹೋಮಮಾಡುತ್ತಾರೆ; [ಮತ್ತೆ ಕೆಲ ವರು] ಪ್ರಾಣಾಪಾನಗಳ ಗತಿಗಳೆರಡನ್ನೂ ನಿರೋಧಿಸಿ ಕುಂಭಕವೆಂಬ ಪ್ರಾಣಾ ಯಾಮವನ್ನು ಮಾಡುತ್ತಾರೆ.

1 ಪೂರಕವೆಂಬ ಪ್ರಾಣಾಯಾಮವನ್ನು.

2 ರೇಚಕವೆಂಬ ಪ್ರಾಣಾಯಾಮವನ್ನು.

**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥ ೩೦ ॥**

ಅಪರೇ (ಇನ್ನು ಕೆಲವರು) ನಿಯತಾಹಾರಾಃ (ನಿಯಮಿತವಾದ ಆಹಾರ ವುಳ್ಳವರಾಗಿ) ಪ್ರಾಣಾನ್ (ಪ್ರಾಣವಾಯುಗಳನ್ನು) ಪ್ರಾಣೇಷು (ಪ್ರಾಣವಾಯು ಗಳಲ್ಲಿಯೇ) ಜುಹ್ವತಿ (ಹೋಮಮಾಡುತ್ತಾರೆ) ಏತೇ ಸರ್ವೇ ಅಪಿ (ಇವರೆಲ್ಲರೂ) ಯಜ್ಞವಿದಃ (ಯಜ್ಞವನ್ನು ತಿಳಿದವರು) ಯಜ್ಞ-ಕ್ಷಪಿತ-ಕಲ್ಮಷಾಃ (ಯಜ್ಞಗಳಿಂದ ಪಾಪವನ್ನು ಹೋಗಲಾಡಿಸಿಕೊಂಡಿರುವವರು).

**೩೦.** ಇನ್ನು ಕೆಲವರು ನಿಯಮಿತವಾದ ಆಹಾರವುಳ್ಳವರಾಗಿ ಪ್ರಾಣ ಗಳೆಂಬ ವಾಯುಗಳನ್ನು ಪ್ರಾಣವಾಯುಗಳಲ್ಲಿಯೇ ಹೋಮಮಾಡುತ್ತಾರೆ;[1]

ಇವರೆಲ್ಲರೂ ಯಜ್ಞವನ್ನು ತಿಳಿದವರು ಮತ್ತು ಯಜ್ಞಗಳಿಂದ ಪಾಪವನ್ನು ಹೋಗಲಾಡಿಸಿಕೊಂಡಿರುವವರು.

1 ಯಾವ ಯಾವ ವಾಯುವನ್ನು ತಡೆದಿರುವರೋ ಅದರಲ್ಲಿ ನಿರುದ್ಧವಾಗದ ವಾಯುವನ್ನು ಹೋಮಮಾಡುವರು ಎಂದರೆ ಸೇರಿಸಿ ನಿರೋಧಿಸುವರು.

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥ ೩೧ ॥**

ಯಜ್ಞ-ಶಿಷ್ಟಾಮೃತ-ಭುಜಃ (ಯಜ್ಞಶೇಷವಾದ ಅಮೃತವನ್ನು ಸೇವಿಸುವವರು) ಸನಾತನಂ (ಸನಾತನವಾದ) ಬ್ರಹ್ಮ (ಬ್ರಹ್ಮವನ್ನು) ಯಾಂತಿ (ಹೊಂದುತ್ತಾರೆ) ಕುರುಸತ್ತಮ (ಎಲೈ ಕುರುಶ್ರೇಷ್ಠನೆ) ಅಯಜ್ಞಸ್ಯ (ಯಜ್ಞವನ್ನು ಮಾಡದವನಿಗೆ) ಅಯಂ ಲೋಕಃ (ಈ ಲೋಕವು) ನ ಅಸ್ತಿ (ಇಲ್ಲ) ಅನ್ಯಃ (ಪರಲೋಕವು) ಕುತಃ (ಎಲ್ಲಿ).

೩೧. ಅಮೃತವೆಂಬ ಹೆಸರುಳ್ಳ ಯಜ್ಞದ ಶೇಷವನ್ನು ಯಾರು ಸೇವಿಸುತ್ತಾರೋ ಅವರು ಸನಾತನವಾದ ಬ್ರಹ್ಮವನ್ನೇ ಹೊಂದುತ್ತಾರೆ; ಎಲೈ ಕುರುಶ್ರೇಷ್ಠನೆ, ಯಜ್ಞವನ್ನು ಮಾಡದವನಿಗೆ ಈ ಲೋಕವೇ ಇಲ್ಲದಿರುವಾಗ ಪರಲೋಕವು ಎಲ್ಲಿ ಬರುವುದು? 1

1 ಈ ಲೋಕಕ್ಕೆ ಸಂಬಂಧಿಸಿದ ಧರ್ಮಾರ್ಥಕಾಮಗಳೇ ಇಲ್ಲದಿರುವಾಗ ಮೋಕ್ಷವೆಂಬ ಪುರುಷಾರ್ಥವು ಹೇಗೆ ಸಂಭವಿಸುವುದು? (ಶ್ರೀರಾಮಾನುಜ).

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ ೩೨ ॥**

ಏವಂ (ಹೀಗೆ) ಬಹುವಿಧಾಃ (ಅನೇಕ ವಿಧಗಳಾದ) ಯಜ್ಞಾಃ (ಯಜ್ಞಗಳು) ಬ್ರಹ್ಮಣಃ (ವೇದದ) ಮುಖೇ (ದ್ವಾರದಲ್ಲಿ) ವಿತತಾಃ (ವಿಸ್ತರಿಸಲ್ಪಟ್ಟಿವೆ) ತಾನ್ ಸರ್ವಾನ್ (ಅವುಗಳೆಲ್ಲವನ್ನೂ) ಕರ್ಮಜಾನ್ (ಕರ್ಮದಿಂದ ಹುಟ್ಟಿದವುಗಳೆಂದು) ವಿದ್ಧಿ (ತಿಳಿ) ಏವಂ (ಈ ಪ್ರಕಾರ) ಜ್ಞಾತ್ವಾ (ತಿಳಿದುಕೊಂಡು) ವಿಮೋಕ್ಷ್ಯಸೇ (ಮುಕ್ತನಾಗುತ್ತೀಯೆ).

೩೨. ಹೀಗೆ ಅನೇಕ ವಿಧಗಳಾದ ಯಜ್ಞಗಳು ವೇದದ ದ್ವಾರದಲ್ಲಿ[1] ವಿಸ್ತರಿಸಲ್ಪಟ್ಟಿವೆ; ಅವುಗಳೆಲ್ಲವನ್ನೂ ಕರ್ಮದಿಂದ[2] ಹುಟ್ಟಿದವುಗಳೆಂದು ತಿಳಿ; ಈ ಪ್ರಕಾರ ತಿಳಿದರೆ ಮುಕ್ತನಾಗುತ್ತೀಯೆ.

1 ವೇದದ ಮೂಲಕ ತಿಳಿಯಬರುವುದರಿಂದ 'ಬ್ರಹ್ಮದ ಮುಖದಲ್ಲಿ' ಎಂದು ಹೇಳಿರುತ್ತದೆ.

2 ಮನೋವಾಕ್ಕಾಯ-ಕರ್ಮಗಳಿಂದ ಎಂದರೆ ಅನಾತ್ಮದಿಂದ.

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥**

ಪರಂತಪ (ಎಲೈ ಪರಂತಪನೆ) ದ್ರವ್ಯಮಯಾತ್ (ದ್ರವ್ಯಮಯವಾದ) ಯಜ್ಞಾತ್ (ಯಜ್ಞಕ್ಕಿಂತಲೂ) ಜ್ಞಾನಯಜ್ಞಃ (ಜ್ಞಾನಯಜ್ಞವು) ಶ್ರೇಯಾನ್ (ಶ್ರೇಯಸ್ಕರವಾದುದು) ಪಾರ್ಥ (ಎಲೈ ಅರ್ಜುನನೆ) ಸರ್ವಂ (ಎಲ್ಲಾ) ಅಖಿಲಂ (ಅಖಿಲವಾದ) ಕರ್ಮ (ಕರ್ಮವು) ಜ್ಞಾನೇ (ಜ್ಞಾನದಲ್ಲಿ) ಪರಿಸಮಾಪ್ಯತೇ (ಪರಿಸಮಾಪ್ತಿಯನ್ನು ಹೊಂದುತ್ತದೆ).

೩೩. ಎಲೈ ಪರಂತಪನೆ, ದ್ರವ್ಯಮಯವಾದ ಯಜ್ಞಕ್ಕಿಂತಲೂ[1] ಜ್ಞಾನಯಜ್ಞವು ಶ್ರೇಯಸ್ಕರವಾದುದು.[2] ಎಲೈ ಅರ್ಜುನ, ಎಲ್ಲಾ ಕರ್ಮವೂ ಜ್ಞಾನದಲ್ಲಿ[3] ನಿಶ್ಶೇಷವಾಗಿ ಪರಿಸಮಾಪ್ತಿಯನ್ನು ಹೊಂದುತ್ತದೆ.

1 ದ್ರವ್ಯವೆಂಬ ಸಾಧನದಿಂದ ಆಗುವ ಯಜ್ಞಕ್ಕಿಂತ.

2 ಜ್ಞಾನಯಜ್ಞವು ಯಾವ ಫಲಕ್ಕೂ ಕಾರಣವಾಗುವುದಿಲ್ಲ.

3 ಮೋಕ್ಷಸಾಧನವಾದ ಜ್ಞಾನದಲ್ಲಿ ಅಡಕವಾಗುತ್ತದೆ

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪ ॥**

ಪ್ರಣಿಪಾತೇನ (ದೀರ್ಘನಮಸ್ಕಾರದಿಂದಲೂ) ಪರಿಪ್ರಶ್ನೇನ (ಪರಿಪ್ರಶ್ನೆಯಿಂದಲೂ) ಸೇವಯಾ (ಗುರುಶುಶ್ರೂಷೆಯಿಂದಲೂ) ತತ್ (ಅದನ್ನು) ವಿದ್ಧಿ (ತಿಳಿದುಕೊ) ತತ್ತ್ವದರ್ಶಿನಃ (ತತ್ತ್ವದರ್ಶಿಗಳಾದ) ಜ್ಞಾನಿನಃ (ಜ್ಞಾನಿಗಳು) ತೇ (ನಿನಗೆ) ಜ್ಞಾನಂ (ಜ್ಞಾನವನ್ನು) ಉಪದೇಕ್ಷ್ಯಂತಿ (ಉಪದೇಶಮಾಡುವರು).

೩೪. ಅದನ್ನು[1] ದೀರ್ಘನಮಸ್ಕಾರದಿಂದಲೂ ಪರಿಪ್ರಶ್ನೆಯಿಂದಲೂ ಗುರುಶುಶ್ರೂಷೆಯಿಂದಲೂ ತಿಳಿದುಕೊ. ತತ್ತ್ವವನ್ನು ಅರಿತ ಜ್ಞಾನಿಗಳು ನಿನಗೆ ಜ್ಞಾನವನ್ನು ಉಪದೇಶಮಾಡುವರು.

1 ಬ್ರಹ್ಮಜ್ಞಾನವನ್ನು.

[ಪ್ರಣಿಪಾತ ಪರಿಪ್ರಶ್ನೆ ಸೇವೆ ಮುಂತಾದ ಸಾಧನಗಳಿಂದ ಆಚಾರ್ಯರನ್ನು ಆಶ್ರಯಿಸಬೇಕು.]

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ ೩೫ ॥**

ಪಾಂಡವ (ಎಲೈ ಪಾಂಡವನೆ) ಯತ್ (ಯಾವುದನ್ನು) ಜ್ಞಾತ್ವಾ (ಪಡೆದು ಕೊಂಡು) ಪುನಃ (ಮತ್ತು) ಏವಂ (ಈ ರೀತಿಯಾಗಿ) ಮೋಹಂ (ಮೋಹವನ್ನು) ನ ಯಾಸ್ಯಸಿ (ಹೊಂದುವುದಿಲ್ಲವೋ) ಯೇನ (ಯಾವುದರಿಂದ) ಅಶೇಷೇಣ (ನಿಶ್ಶೇಷ ವಾಗಿ, ಎಲ್ಲಾ) ಭೂತಾನಿ (ಭೂತಗಳನ್ನು) ಆತ್ಮನಿ (ಆತ್ಮನಲ್ಲಿಯೂ) ಅಥ ಉ (ಮತ್ತು) ಮಯಿ (ನನ್ನಲ್ಲಿ) ದ್ರಕ್ಷ್ಯಸಿ (ನೋಡುವೆಯೋ) [ತತ್ (ಅದನ್ನು) ಭಜ (ಹೊಂದು)].

**೩೫.** ಎಲೈ ಪಾಂಡವನೆ, ಜ್ಞಾನವನ್ನು ಪಡೆದುಕೊಂಡರೆ ಪುನಃ ಹೀಗೆ ಮೋಹವನ್ನು ಹೊಂದುವುದಿಲ್ಲ; ಜ್ಞಾನದಿಂದ ಎಲ್ಲಾ ಭೂತಗಳನ್ನೂ ಆತ್ಮ ನಲ್ಲಿಯೂ ಮತ್ತು ನನ್ನಲ್ಲಿಯೂ ನೋಡುವೆ.

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬ ॥**

ಸರ್ವೇಭ್ಯಃ (ಎಲ್ಲಾ) ಪಾಪೇಭ್ಯಃ (ಪಾಪಿಗಳಿಗಿಂತಲೂ) ಪಾಪಕೃತ್ತಮಃ ಅಪಿ ಚೇತ್ ಅಸಿ (ಹೆಚ್ಚು ಪಾಪವನ್ನು ಮಾಡಿದ್ದರೂ) ಸರ್ವಂ (ಸಮಸ್ತ) ವೃಜಿನಂ (ಪಾಪವನ್ನೂ) ಜ್ಞಾನಪ್ಲವೇನ ಏವ (ಜ್ಞಾನವೆಂಬ ನಾವೆಯಿಂದಲೇ) ಸಂತರಿಷ್ಯಸಿ (ದಾಟುವೆ).

**೩೬.** ನೀನು ಎಲ್ಲಾ ಪಾಪಿಗಳಿಗಿಂತಲೂ ಹೆಚ್ಚು ಪಾಪವನ್ನು ಮಾಡಿ ದ್ದರೂ (ಸಮುದ್ರದ ಹಾಗೆ ಇರುವ) ಆ ಸಮಸ್ತಪಾಪವನ್ನೂ ಜ್ಞಾನವೆಂಬ ನಾವೆಯಿಂದಲೇ ದಾಟುವೆ.

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥ ೩೭ ॥**

ಅರ್ಜುನ (ಎಲೈ ಅರ್ಜುನನೆ) ಯಥಾ (ಹೇಗೆ) ಸಮಿದ್ಧಃ (ಚೆನ್ನಾಗಿ ಪ್ರಜ್ವ ಲಿಸುತ್ತಿರುವ) ಅಗ್ನಿಃ (ಅಗ್ನಿಯು) ಏಧಾಂಸಿ (ಕಟ್ಟಿಗೆಗಳನ್ನು) ಭಸ್ಮಸಾತ್ ಕುರುತೇ (ಬೂದಿಮಾಡುತ್ತದೆಯೋ) ತಥಾ (ಹಾಗೆಯೇ) ಜ್ಞಾನಾಗ್ನಿಃ (ಜ್ಞಾನವೆಂಬ ಅಗ್ನಿಯು) ಸರ್ವಕರ್ಮಾಣಿ (ಕರ್ಮಗಳನ್ನೆಲ್ಲಾ) ಭಸ್ಮಸಾತ್ ಕುರುತೇ (ಭಸ್ಮಮಾಡಿಬಿಡುವುದು).

೩೭. ಎಲೈ ಅರ್ಜುನ, ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯು ಕಟ್ಟಿಗೆಗಳನ್ನು ಹೇಗೆ ಸುಟ್ಟು ಬೂದಿಮಾಡುತ್ತದೆಯೋ ಹಾಗೆಯೇ ಜ್ಞಾನವೆಂಬ ಅಗ್ನಿಯು ಕರ್ಮಗಳನ್ನೆಲ್ಲಾ ಭಸ್ಮಮಾಡಿಬಿಡುವುದು.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮ ॥**

ಇಹ (ಈ ಲೋಕದಲ್ಲಿ) ಜ್ಞಾನೇನ ಸದೃಶಂ (ಜ್ಞಾನಕ್ಕೆ ಸಮಾನವಾದ) ಪವಿತ್ರಂ (ಪವಿತ್ರವಸ್ತು) ನ ಹಿ ವಿದ್ಯತೇ (ಯಾವುದೂ ಇಲ್ಲ) ಕಾಲೇನ (ಕಾಲಕ್ರಮದಲ್ಲಿ) ಯೋಗ-ಸಂಸಿದ್ಧಃ (ಯೋಗದಲ್ಲಿ ಸಿದ್ಧಿಯನ್ನು ಹೊಂದಿದವನು) ಸ್ವಯಂ (ತಾನೇ) ಆತ್ಮನಿ (ತನ್ನಲ್ಲಿ) ತತ್ (ಅದನ್ನು, ಜ್ಞಾನವನ್ನು) ವಿಂದತಿ (ಹೊಂದುತ್ತಾನೆ).

೩೮. ಈ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರವಸ್ತು ಯಾವುದೂ ಇರುವುದಿಲ್ಲ. ಯೋಗದಿಂದ ಸಂಸಿದ್ಧಿಯನ್ನು ಹೊಂದಿದವನು[1] ಕಾಲಕ್ರಮದಲ್ಲಿ ಆ ಜ್ಞಾನವನ್ನು ತನ್ನಲ್ಲಿ ತಾನೇ ಹೊಂದುವನು.

[1] ಕರ್ಮಯೋಗದಿಂದಲೂ ಸಮಾಧಿಯೋಗದಿಂದಲೂ ಸಂಸ್ಕಾರವನ್ನು ಹೊಂದಿ ಜ್ಞಾನಕ್ಕೆ ಯೋಗ್ಯತೆಯನ್ನು ಪಡೆದವನು.

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೩೯ ॥**

ಶ್ರದ್ಧಾವಾನ್ (ಶ್ರದ್ಧೆಯುಳ್ಳವನೂ) ತತ್ಪರಃ (ತತ್ಪರನೂ) ಸಂಯತೇಂದ್ರಿಯಃ (ಜಿತೇಂದ್ರಿಯನೂ ಆದವನು) ಜ್ಞಾನಂ (ಜ್ಞಾನವನ್ನು) ಲಭತೇ (ಹೊಂದುತ್ತಾನೆ) ಜ್ಞಾನಂ (ಜ್ಞಾನವನ್ನು) ಲಬ್ಧ್ವಾ (ಹೊಂದಿ) ಅಚಿರೇಣ (ಶೀಘ್ರದಲ್ಲಿಯೇ) ಪರಾಂ ಶಾಂತಿಂ (ಪರಮ ಶಾಂತಿಯನ್ನು) ಅಧಿಗಚ್ಛತಿ (ಪಡೆಯುತ್ತಾನೆ).

೩೯. ಶ್ರದ್ಧೆಯುಳ್ಳವನೂ ತತ್ಪರನೂ[1] ಜಿತೇಂದ್ರಿಯನೂ (ಆದ ಮುಮುಕ್ಷುವು) ಜ್ಞಾನವನ್ನು ಹೊಂದುತ್ತಾನೆ; ಜ್ಞಾನವನ್ನು ಪಡೆದು ಶೀಘ್ರದಲ್ಲಿಯೇ ಪರಮಶಾಂತಿಯನ್ನು[2] ಪಡೆಯುತ್ತಾನೆ.

[1] ಗುರುಸೇವೆ, ಜ್ಞಾನನಿಷ್ಠೆ ಮೊದಲಾದುವುಗಳಲ್ಲಿ ಆಸಕ್ತನಾಗಿರುವವನು.

[2] ಮೋಕ್ಷವೆಂಬ ಶಾಂತಿಯನ್ನು.

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥ ೪೦ ॥**

ಅಜ್ಞಃ (ಜ್ಞಾನವಿಲ್ಲದವನೂ) ಅಶ್ರದ್ದಧಾನಃ (ಶ್ರದ್ಧೆಯಿಲ್ಲದವನೂ) ಸಂಶ-ಯಾತ್ಮಾ(ಸಂಶಯ-ಚಿತ್ತವುಳ್ಳವನೂ) ವಿನಶ್ಯತಿ (ನಾಶವಾಗುತ್ತಾನೆ) ಸಂಶಯಾತ್ಮನಃ (ಸಂಶಯಾತ್ಮನಿಗೆ) ಅಯಂ ಲೋಕಃ (ಈ ಲೋಕವು) ನ ಅಸ್ತಿ (ಇಲ್ಲ) ನ ಪರಃ (ಪರಲೋಕವಿಲ್ಲ) ನ ಸುಖಂ (ಸುಖವಿಲ್ಲ).

**೪೦.** ಜ್ಞಾನವಿಲ್ಲದವನೂ,[1] ಶ್ರದ್ಧೆಯಿಲ್ಲದವನೂ,[2] ಸಂಶಯಾತ್ಮನೂ-(ಈ ಮೂವರೂ) ನಾಶಹೊಂದುವರು; ಸಂಶಯಾತ್ಮನಿಗೆ ಈ ಲೋಕವಿಲ್ಲ, ಪರಲೋಕವೂ ಇಲ್ಲ, ಸುಖವೂ ಇಲ್ಲ.

1 ಆತ್ಮನನ್ನು ಅರಿತುಕೊಳ್ಳದವನು.

2 ಗುರುವಾಕ್ಯ ಶಾಸ್ತ್ರ ಮೊದಲಾದುವುಗಳಲ್ಲಿ ವಿಶ್ವಾಸವಿಲ್ಲದವನು.

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಂ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧ ॥**

ಧನಂಜಯ (ಎಲೈ ಅರ್ಜುನನೆ) ಯೋಗ-ಸಂನ್ಯಸ್ತ-ಕರ್ಮಾಣಂ (ಯೋಗದಿಂದ ಕರ್ಮಗಳನ್ನು ತ್ಯಾಗಮಾಡಿದವನನ್ನು) ಜ್ಞಾನ-ಸಂಛಿನ್ನ-ಸಂಶಯಂ (ಜ್ಞಾನದಿಂದ ಸಂಶಯವನ್ನು ನಾಶಮಾಡಿದವನನ್ನು) ಆತ್ಮವಂತಂ (ಆತ್ಮವಂತನನ್ನು) ಕರ್ಮಾಣಿ (ಕರ್ಮಗಳು) ನ ನಿಬಧ್ನಂತಿ (ಬಂಧಿಸಲಾರವು).

**೪೧.** ಎಲೈ ಅರ್ಜುನ, ಯೋಗದಿಂದ ಕರ್ಮಗಳನ್ನು ನಾಶಮಾಡಿದವನೂ,[1] ಜ್ಞಾನದಿಂದ ಸಂಶಯವನ್ನು ನಾಶಮಾಡಿದವನೂ[2] ಆತ್ಮವಂತನೂ[3] ಆದ (ಪುರುಷನನ್ನು) ಕರ್ಮಗಳು ಬಂಧಿಸಲಾರವು.

1 ಪರಮಾರ್ಥ-ದರ್ಶನವೆಂಬ ಯೋಗದಿಂದ ಧರ್ಮಾಧರ್ಮವೆಂಬ ಹೆಸರಿನ ಕರ್ಮಗಳನ್ನು ತ್ಯಾಗಮಾಡಿರುವವನೂ.

2 ಆತ್ಮನೂ ಈಶ್ವರನೂ ಒಂದೇ ಎಂಬ ಜ್ಞಾನದಿಂದ ಸಂಶಯವನ್ನು ನಾಶಮಾಡಿಕೊಂಡಿರುವವನೂ.

3 ಪ್ರಮತ್ತನಾಗದೆ ಇರುವವನೂ.

**ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥**

ತಸ್ಮಾತ್ (ಆದುದರಿಂದ) ಅಜ್ಞಾನ-ಸಂಭೂತಂ (ಅಜ್ಞಾನದಿಂದ ಹುಟ್ಟಿದ) ಹೃತ್ಸ್ಥಂ (ಮನಸ್ಸಿನಲ್ಲಿ ಅಡಗಿರುವ) ಆತ್ಮನಃ (ಆತ್ಮವಿಷಯವಾದ) ಏನಂ ಸಂಶಯಂ (ಈ ಸಂಶಯವನ್ನು) ಜ್ಞಾನಾಸಿನಾ (ಜ್ಞಾನವೆಂಬ ಕತ್ತಿಯಿಂದ) ಛಿತ್ವಾ (ಕತ್ತರಿಸಿ) ಯೋಗಂ (ಯೋಗವನ್ನು) ಆತಿಷ್ಠ (ಅನುಷ್ಠಾನಮಾಡು) ಭಾರತ (ಎಲೈ ಅರ್ಜುನನೆ) ಉತ್ತಿಷ್ಠ (ಏಳು).

೪೨. ಆದುದರಿಂದ ಅಜ್ಞಾನದಿಂದ ಹುಟ್ಟಿದ, ನಿನ್ನ ಮನಸ್ಸಿನಲ್ಲಿ ಅಡಗಿರುವ ಆತ್ಮವಿಷಯವಾದ ಈ ಸಂಶಯವನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿ ಕರ್ಮಯೋಗವನ್ನು ಅನುಷ್ಠಾನಮಾಡು ಮತ್ತು ಎಲೈ ಅರ್ಜುನ, (ಯುದ್ಧಕ್ಕೆ) ಏಳು.

**ಇತಿ ಜ್ಞಾನಯೋಗೋ ನಾಮ ಚತುರ್ಥೋಽಧ್ಯಾಯಃ ।**

ಜ್ಞಾನಯೋಗವೆಂಬ ನಾಲ್ಕನೆಯ ಅಧ್ಯಾಯವು ಮುಗಿಯಿತು.

# ಐದನೆಯ ಅಧ್ಯಾಯ

## ಸಂನ್ಯಾಸಯೋಗ

### ಅರ್ಜುನ ಉವಾಚ

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥ ೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ಕೃಷ್ಣ (ಎಲೈ ಕೃಷ್ಣನೆ) ಕರ್ಮಣಾಂ (ಕರ್ಮಗಳ) ಸಂನ್ಯಾಸಂ (ಸಂನ್ಯಾಸವನ್ನು) ಪುನಃ (ಮತ್ತೆ) [ಕರ್ಮಣಾಂ (ಕರ್ಮಗಳ)] ಯೋಗಂ ಚ (ಯೋಗವನ್ನು) ಶಂಸಸಿ (ಹೇಳುತ್ತಿದ್ದೀಯೆ) ಏತಯೋಃ (ಇವೆರಡರಲ್ಲಿ) ಯತ್ (ಯಾವುದು) ಶ್ರೇಯಃ (ಶ್ರೇಯಸ್ಕರವೋ) ತತ್ ಏಕಂ (ಅದು ಒಂದನ್ನೇ) ಮೇ (ನನಗೆ) ಸುನಿಶ್ಚಿತಂ (ನಿಶ್ಚಿತವಾಗಿ) ಬ್ರೂಹಿ (ಹೇಳು).

### ಅರ್ಜುನನು ಹೇಳಿದನು

೧. ಎಲೈ ಕೃಷ್ಣ, ನೀನು ಕರ್ಮಗಳ ಸಂನ್ಯಾಸವನ್ನೂ ಮತ್ತೆ (ಕರ್ಮಗಳ) ಅನುಷ್ಠಾನವನ್ನೂ ಹೇಳುತ್ತಿದ್ದೀಯೆ; ಇವೆರಡರಲ್ಲಿ ಯಾವುದು ಶ್ರೇಯಸ್ಕರವೋ ಅದನ್ನು ನನಗೆ ನಿಶ್ಚಿತವಾಗಿ ಹೇಳು.

### ಶ್ರೀಭಗವಾನ್ ಉವಾಚ

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ**
**ವಿಶಿಷ್ಯತೇ ॥ ೨ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಸಂನ್ಯಾಸಃ (ಕರ್ಮತ್ಯಾಗ) ಕರ್ಮಯೋಗಃ ಚ (ಮತ್ತು ಕರ್ಮಯೋಗ) ಉಭೌ (ಈ ಎರಡೂ) ನಿಃಶ್ರೇಯಸಕರೌ (ಮೋಕ್ಷವನ್ನುಂಟುಮಾಡುವುವು) ತು (ಆದರೆ) ತಯೋಃ (ಅವುಗಳಲ್ಲಿ) ಕರ್ಮಸಂನ್ಯಾಸಾತ್ (ಕರ್ಮತ್ಯಾಗಕ್ಕಿಂತ) ಕರ್ಮಯೋಗಃ (ಕರ್ಮಯೋಗವು) ವಿಶಿಷ್ಯತೇ (ಉತ್ಕೃಷ್ಟವಾದುದು).

ಶ್ರೀಕೃಷ್ಣನು ಹೇಳಿದನು

೨. ಕರ್ಮತ್ಯಾಗ ಮತ್ತು ಕರ್ಮಯೋಗ— ಈ ಎರಡೂ ಮೋಕ್ಷವನ್ನುಂಟುಮಾಡುವುವು; ಆದರೆ ಅವುಗಳಲ್ಲಿ ಕರ್ಮತ್ಯಾಗಕ್ಕಿಂತ ಕರ್ಮಯೋಗವು ಉತ್ಕೃಷ್ಟವಾದುದು.

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ ಪ್ರಮುಚ್ಯತೇ ॥ ೩ ॥**

ಯಃ (ಯಾವನು) ನ ದ್ವೇಷ್ಟಿ (ದ್ವೇಷಿಸುವುದಿಲ್ಲವೋ) ನ ಕಾಂಕ್ಷತಿ (ಬಯಸುವುದಿಲ್ಲವೋ) ಸಃ (ಅವನು) ನಿತ್ಯಸಂನ್ಯಾಸೀ (ನಿತ್ಯಸಂನ್ಯಾಸಿ ಎಂದು) ಜ್ಞೇಯಃ (ತಿಳಿಯತಕ್ಕದ್ದು) ಮಹಾಬಾಹೋ (ಎಲೈ ಮಹಾಬಾಹುವೆ) ಹಿ (ಏಕೆಂದರೆ) ನಿರ್ದ್ವಂದ್ವಃ (ಸುಖದುಃಖಾದಿ ದ್ವಂದ್ವಗಳಿಲ್ಲದವನು) ಸುಖಂ (ಆಯಾಸವಿಲ್ಲದೆ) ಬಂಧಾತ್ (ಬಂಧನದಿಂದ) ಪ್ರಮುಚ್ಯತೇ (ಮುಕ್ತನಾಗುತ್ತಾನೆ).

೩. ಯಾವನು ದ್ವೇಷಿಸುವುದಿಲ್ಲವೋ ಬಯಸುವುದಿಲ್ಲವೋ ಅವನು ನಿತ್ಯಸಂನ್ಯಾಸಿ ಎಂದು ತಿಳಿಯತಕ್ಕದ್ದು; ಏಕೆಂದರೆ ಎಲೈ ಮಹಾಬಾಹುವೆ, ದ್ವಂದ್ವಗಳಿಲ್ಲದವನು ಆಯಾಸವಿಲ್ಲದೆ ಸಂಸಾರಬಂಧನದಿಂದ ಮುಕ್ತನಾಗುತ್ತಾನೆ.

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥ ೪ ॥**

ಬಾಲಾಃ (ಹುಡುಗರು, ಅಜ್ಞಾನಿಗಳು) ಸಾಂಖ್ಯಯೋಗೌ (ಜ್ಞಾನಯೋಗ ಮತ್ತು ಕರ್ಮಯೋಗಗಳು) ಪೃಥಕ್ (ಬೇರೆಬೇರೆಯೆಂದು) ಪ್ರವದಂತಿ (ಹೇಳುತ್ತಾರೆ) ನ ಪಂಡಿತಾಃ (ಪಂಡಿತರು ಹೇಳುವುದಿಲ್ಲ) ಏಕಂ ಅಪಿ (ಎರಡರಲ್ಲಿ ಒಂದನ್ನಾಗಲೀ) ಸಮ್ಯಕ್ (ಚೆನ್ನಾಗಿ) ಆಸ್ಥಿತಃ (ಅನುಷ್ಠಾನಮಾಡಿದವನು) ಉಭಯೋಃ (ಎರಡರ) ಫಲಂ (ಫಲವನ್ನು) ವಿಂದತೇ (ಹೊಂದುತ್ತಾನೆ).

೪. ಜ್ಞಾನಯೋಗ ಮತ್ತು ಕರ್ಮಯೋಗಗಳು ಬೇರೆಬೇರೆಯೆಂದು ಅಜ್ಞಾನಿಗಳು ಹೇಳುತ್ತಾರೆ, ಪಂಡಿತರು (ಹಾಗೆ) ಹೇಳುವುದಿಲ್ಲ; (ಏಕೆಂದರೆ ಇವುಗಳಲ್ಲಿ) ಒಂದನ್ನೇ ಆಗಲಿ ಚೆನ್ನಾಗಿ ಅನುಷ್ಠಾನಮಾಡಿದವನು ಎರಡರ ಫಲವನ್ನೂ[1] ಹೊಂದುತ್ತಾನೆ.

1 ಜ್ಞಾನಯೋಗ-ಕರ್ಮಯೋಗಗಳಿಗೆ ಫಲವು ಮೋಕ್ಷವು. ಆದುದರಿಂದ ಫಲದಲ್ಲಿ ಯಾವ ವಿರೋಧವೂ ಇಲ್ಲ.

**ಯತ್ ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥**

ಸಾಂಖ್ಯೈಃ (ಜ್ಞಾನನಿಷ್ಠರಿಂದ) ಯತ್ (ಯಾವ) ಸ್ಥಾನಂ (ಸ್ಥಾನವು) ಪ್ರಾಪ್ಯತೇ (ಹೊಂದಲ್ಪಡುತ್ತದೆಯೋ) ಯೋಗೈಃ ಅಪಿ (ಕರ್ಮಯೋಗಿಗಳಿಂದಲೂ) ತತ್ (ಅದು) ಗಮ್ಯತೇ (ಹೊಂದಲ್ಪಡುತ್ತದೆ) ಯಃ (ಯಾವನು) ಸಾಂಖ್ಯಂ ಚ (ಜ್ಞಾನಯೋಗವನ್ನು) ಯೋಗಂ ಚ (ಕರ್ಮಯೋಗವನ್ನು) ಏಕಂ (ಒಂದೇ ಎಂದು) ಪಶ್ಯತಿ (ನೋಡುತ್ತಾನೆಯೋ) ಸಃ (ಅವನು) ಪಶ್ಯತಿ (ನಿಜವಾಗಿ ನೋಡುತ್ತಾನೆ).

೫. ಜ್ಞಾನನಿಷ್ಠರು ಯಾವ ಸ್ಥಾನವನ್ನು[1] ಹೊಂದುತ್ತಾರೆಯೋ ಅದನ್ನೇ ನಿಷ್ಕಾಮಕರ್ಮಯೋಗಿಗಳೂ ಹೊಂದುತ್ತಾರೆ; ಜ್ಞಾನಯೋಗವನ್ನೂ ಮತ್ತು ಕರ್ಮಯೋಗವನ್ನೂ ಒಂದೇ[2] ಎಂದು ಯಾವನು ನೋಡುವನೋ ಅವನೇ ನಿಜವಾಗಿ ನೋಡಿದವನು.

1 ಮೋಕ್ಷವೆಂಬ ಸ್ಥಾನವನ್ನು.

2 ಫಲವು ಒಂದೇ ಆದುದರಿಂದ.

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥ ೬ ॥**

ತು (ಆದರೆ) ಮಹಾಬಾಹೋ (ಎಲೈ ಮಹಾಬಾಹುವೆ) ಸಂನ್ಯಾಸಃ (ಸಂನ್ಯಾಸವು) ಅಯೋಗತಃ (ಕರ್ಮಯೋಗದ ಸಹಾಯವಿಲ್ಲದೆ) ಆಪ್ತುಂ (ಹೊಂದಲು) ದುಃಖಂ (ಕಷ್ಟವಾಗಿದೆ) ಯೋಗಯುಕ್ತಃ (ಯೋಗದಿಂದ ಕೂಡಿರುವ) ಮುನಿಃ (ಮುನಿಯು) ನ ಚಿರೇಣ (ಶೀಘ್ರವಾಗಿ) ಬ್ರಹ್ಮ (ಬ್ರಹ್ಮವನ್ನು) ಅಧಿಗಚ್ಛತಿ (ಹೊಂದುತ್ತಾನೆ).

೬. ಆದರೆ ಎಲೈ ಮಹಾಬಾಹುವೆ, ಕರ್ಮಯೋಗದ ಸಹಾಯವಿಲ್ಲದೆ ಸಂನ್ಯಾಸವನ್ನು[1] ಹೊಂದುವುದು ಕಷ್ಟ; ಯೋಗದಿಂದ ಕೂಡಿರುವ ಮುನಿಯು ಶೀಘ್ರವಾಗಿ ಬ್ರಹ್ಮವನ್ನು ಹೊಂದುತ್ತಾನೆ.

1 ಕರ್ಮತ್ಯಾಗವನ್ನು ಅಥವಾ ಜ್ಞಾನಯೋಗವನ್ನು.

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥**

ಯೋಗಯುಕ್ತಃ (ಯೋಗದಿಂದ ಕೂಡಿದವನು) ವಿಶುದ್ಧಾತ್ಮಾ (ವಿಶುದ್ಧಾತ್ಮನು) ವಿಜಿತಾತ್ಮಾ (ವಿಜಿತಾತ್ಮನು) ಜಿತೇಂದ್ರಿಯಃ (ಜಿತೇಂದ್ರಿಯನು) ಸರ್ವ-ಭೂತಾತ್ಮಭೂತಾತ್ಮಾ (ಸರ್ವಭೂತಗಳ ಆತ್ಮವನ್ನು ತನ್ನ ಆತ್ಮನೆಂದು ಭಾವಿಸುವವನು) ಕುರ್ವನ್ ಅಪಿ (ಕರ್ಮವನ್ನು ಮಾಡುತ್ತಿದ್ದರೂ) ನ ಲಿಪ್ಯತೇ (ಲಿಪ್ತನಾಗುವುದಿಲ್ಲ).

೭. ಯೋಗದಿಂದ ಕೂಡಿದವನೂ ವಿಶುದ್ಧಾತ್ಮನೂ[1] ವಿಜಿತಾತ್ಮನೂ[2] ಜಿತೇಂದ್ರಿಯನೂ[3] ಸರ್ವಭೂತಗಳ ಆತ್ಮವನ್ನು ತನ್ನ ಆತ್ಮನೆಂದು ಭಾವಿಸುವವನೂ (ಆದ ಪುರುಷನು ಕರ್ಮವನ್ನು) ಮಾಡುತ್ತಿದ್ದರೂ ಲಿಪ್ತನಾಗುವುದಿಲ್ಲ.[4]

[1] ಶುದ್ಧ-ಸತ್ತ್ವವುಳ್ಳವನೂ.
[2] ದೇಹವನ್ನು ವಶದಲ್ಲಿಟ್ಟುಕೊಂಡಿರುವವನೂ.
[3] ಇಂದ್ರಿಯಗಳನ್ನು ಜಯಿಸಿದವನೂ.
[4] ಕರ್ಮಗಳಿಂದ ಬಂಧಿಸಲ್ಪಡುವುದಿಲ್ಲ.

**ನೈವ ಕಿಂಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥ ೮ ॥**

**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥ ೯ ॥**

ತತ್ತ್ವವಿತ್ (ತತ್ತ್ವಜ್ಞಾನಿಯು) ಯುಕ್ತಃ (ಯೋಗಿಯು) ಪಶ್ಯನ್ (ನೋಡುವಾಗ) ಶೃಣ್ವನ್ (ಕೇಳುವಾಗ) ಸ್ಪೃಶನ್ (ಮುಟ್ಟುವಾಗ) ಜಿಘ್ರನ್ (ಮೂಸುವಾಗ) ಅಶ್ನನ್ (ತಿನ್ನುವಾಗ) ಗಚ್ಛನ್ (ನಡೆಯುವಾಗ) ಸ್ವಪನ್ (ನಿದ್ರೆಮಾಡುವಾಗ) ಶ್ವಸನ್ (ಉಸಿರುಬಿಡುವಾಗ) ಪ್ರಲಪನ್ (ಮಾತನಾಡುವಾಗ) ವಿಸೃಜನ್ (ಮಲಮೂತ್ರಾದಿಗಳನ್ನು ಬಿಡುವಾಗ) ಗೃಹ್ಣನ್ (ತೆಗೆದುಕೊಳ್ಳುವಾಗ) ಉನ್ಮಿಷನ್ ನಿಮಿಷನ್ ಅಪಿ (ಕಣ್ಣು ತೆರೆಯುವಾಗ ಮತ್ತು ಮುಚ್ಚುವಾಗಲೂ) ಇಂದ್ರಿಯಾಣಿ (ಇಂದ್ರಿಯಗಳು) ಇಂದ್ರಿಯಾರ್ಥೇಷು (ಇಂದ್ರಿಗಳ ವಿಷಯಗಳಲ್ಲಿ) ವರ್ತಂತೇ (ಪ್ರವರ್ತಿಸುತ್ತವೆ) ಇತಿ ಧಾರಯನ್ (ಎಂದು ನಿಶ್ಚಯಿಸಿ) ಕಿಂಚಿತ್ ಏವ (ಏನನ್ನೂ) ನ ಕರೋಮಿ (ಮಾಡುತ್ತಿಲ್ಲ) ಇತಿ ಮನ್ಯೇತ (ಎಂದು ತಿಳಿಯಬೇಕು).

**೮-೯.** ತತ್ತ್ವಜ್ಞಾನಿಯಾದ ಯೋಗಿಯು ತಾನು ನೋಡುವಾಗಲೂ, ಕೇಳುವಾಗಲೂ, ಮುಟ್ಟುವಾಗಲೂ, ಮೂಸುವಾಗಲೂ, ತಿನ್ನುವಾಗಲೂ, ನಡೆಯುವಾಗಲೂ, ಉಸಿರುಬಿಡುವಾಗಲೂ, ಮಾತನಾಡುವಾಗಲೂ, ಮಲ ಮೂತ್ರಾದಿಗಳನ್ನು ವಿಸರ್ಜಿಸುವಾಗಲೂ, ತೆಗೆದುಕೊಳ್ಳುವಾಗಲೂ, ಕಣ್ಣು ತೆರೆಯುವಾಗಲೂ ಮತ್ತು ಮುಚ್ಚುವಾಗಲೂ, 'ಇಂದ್ರಿಯಗಳು ತಮ್ಮ ವಿಷಯ ಗಳಲ್ಲಿ ಪ್ರವರ್ತಿಸುತ್ತವೆ' ಎಂದು ನಿಶ್ಚಯಿಸಿ, 'ನಾನು ಏನನ್ನೂ ಮಾಡುತ್ತಿಲ್ಲ' ಎಂದು ತಿಳಿಯಬೇಕು.

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦ ॥**

ಯಃ (ಯಾವನು) ಬ್ರಹ್ಮಣಿ (ಈಶ್ವರನಲ್ಲಿ) ಕರ್ಮಾಣಿ (ಕರ್ಮಗಳನ್ನು) ಆಧಾಯ (ಸಮರ್ಪಿಸಿ) ಸಂಗಂ (ಸಂಗವನ್ನು) ತ್ಯಕ್ತ್ವಾ (ಬಿಟ್ಟು) ಕರೋತಿ (ಕರ್ಮವನ್ನು ಮಾಡುತ್ತಾನೆಯೋ) ಸಃ (ಅವನು) ಅಂಭಸಾ (ನೀರಿನಿಂದ) ಪದ್ಮ-ಪತ್ರಂ ಇವ (ತಾವರೆ ಎಲೆಯಂತೆ) ನ ಲಿಪ್ಯತೇ (ಲಿಪ್ತನಾಗುವುದಿಲ್ಲ).

**೧೦.** ಯಾವನು ಈಶ್ವರನಲ್ಲಿ[1] ಕರ್ಮಗಳನ್ನಿಟ್ಟು, (ಫಲದಲ್ಲಿ) ಆಸಕ್ತಿ ಯನ್ನು ಬಿಟ್ಟು ಕರ್ಮವನ್ನು ಮಾಡುತ್ತಾನೆಯೋ ಅವನು—ತಾವರೆ ಎಲೆಯು ನೀರಿನಿಂದ ಲಿಪ್ತವಾಗದ ಹಾಗೆ—ಪಾಪದಿಂದ ಲಿಪ್ತನಾಗುವುದಿಲ್ಲ.

[1] 'ಬ್ರಹ್ಮ' ಶಬ್ದಕ್ಕೆ ಪ್ರಕೃತಿ ಎಂಬ ಅರ್ಥವನ್ನು ಶ್ರೀರಾಮಾನುಜಾಚಾರ್ಯರು ಕೊಟ್ಟಿರುತ್ತಾರೆ. ದೇಹೇಂದ್ರಿಯಪ್ರಾಣಾದಿಗಳೆಲ್ಲವೂ ಪ್ರಕೃತಿಯ ಪರಿಣಾಮ. ಹಿಂದಿನ ಶ್ಲೋಕದಲ್ಲಿ 'ಇಂದ್ರಿಯಾಣಿ ಇಂದ್ರಿಯಾರ್ಥೇಷು ವರ್ತಂತೇ' ಎಂದು ಹೇಳಿದ ಹಾಗೆ ಸಮಸ್ತ ಕರ್ಮಗಳನ್ನು ಇಂದ್ರಿಯಾದಿಗಳಿಗೆ ಬಿಟ್ಟು, ಫಲದಲ್ಲಿ ಆಸಕ್ತಿಯನ್ನು ತ್ಯಜಿಸಿ 'ನೈವ ಕಿಂಚಿತ್ ಕರೋಮಿ' ಎಂದು ಯಾವನು ಕೆಲಸಮಾಡುತ್ತಾನೆಯೋ ಅವನಿಗೆ ಪಾಪವು ಅಂಟಲಾರದು. ತಾವರೆ ಎಲೆಗೆ ಹುಟ್ಟು, ಬೆಳವಣಿಗೆ ಮೊದ ಲಾದುವುಗಳೆಲ್ಲ ನೀರಿನ ಸಂಬಂಧದಿಂದ ಉಂಟಾದರೂ ನೀರಿನಿಂದ ನೆನೆಯುವುದಿಲ್ಲ. ಜೀವಾತ್ಮನಿಗೆ ಸಂಸಾರದಲ್ಲಿ ಪ್ರಕೃತಿಸಂಬಂಧವಿದ್ದರೂ ಅವನು ಅದರಿಂದ ಲಿಪ್ತನಾಗದೆ ಇರಬೇಕು.

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥ ೧೧ ॥**

ಯೋಗಿನಃ (ಯೋಗಿಗಳು) ಕಾಯೇನ (ದೇಹದಿಂದಲೂ) ಮನಸಾ (ಮನಸ್ಸಿ ನಿಂದಲೂ) ಬುದ್ಧ್ಯಾ (ಬುದ್ಧಿಯಿಂದಲೂ) ಕೇವಲೈಃ (ಕೇವಲ) ಇಂದ್ರಿಯೈಃ ಅಪಿ

(ಇಂದ್ರಿಯಗಳಿಂದಲೂ) ಸಂಗಂ (ಆಸಕ್ತಿಯನ್ನು) ತ್ಯಕ್ತ್ವಾ (ಬಿಟ್ಟು) ಆತ್ಮಶುದ್ಧಯೇ (ಸತ್ತ್ವಶುದ್ಧಿಗಾಗಿ) ಕರ್ಮ (ಕರ್ಮವನ್ನು) ಕುರ್ವಂತಿ (ಮಾಡುತ್ತಾರೆ).

೧೧. ದೇಹದಿಂದಲೂ ಮನಸ್ಸಿನಿಂದಲೂ ಬುದ್ಧಿಯಿಂದಲೂ ಕೇವಲ[1] ಇಂದ್ರಿಯಗಳಿಂದಲೂ ಯೋಗಿಗಳು (ಫಲದಲ್ಲಿ) ಆಸಕ್ತಿಯನ್ನು ಬಿಟ್ಟು ಸತ್ತ್ವ ಶುದ್ಧಿಗಾಗಿ ಕರ್ಮವನ್ನು ಮಾಡುತ್ತಾರೆ.

1 ಕೇವಲ ದೇಹದಿಂದ, ಕೇವಲ ಮನಸ್ಸಿನಿಂದ, ಕೇವಲ ಬುದ್ಧಿಯಿಂದ, ಎಂದು ಅನ್ವಯಿಸಿಕೊಳ್ಳಬೇಕು; ಕರ್ತೃತ್ವಬುದ್ಧಿಯಿಲ್ಲದೆ ಮಮತೆಯಿಲ್ಲದೆ ಈಶ್ವರನಿಗೋಸ್ಕರ ಕರ್ಮವನ್ನು ಮಾಡಬೇಕು ಎಂದು ಅರ್ಥ.

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥**

ಯುಕ್ತಃ (ಯೋಗಿಯು) ಕರ್ಮಫಲಂ (ಕರ್ಮಫಲವನ್ನು) ತ್ಯಕ್ತ್ವಾ (ಬಿಟ್ಟು) ನೈಷ್ಠಿಕೀಂ (ನಿಷ್ಠಾರೂಪವಾದ) ಶಾಂತಿಂ (ಶಾಂತಿಯನ್ನು) ಆಪ್ನೋತಿ (ಪಡೆಯುತ್ತಾನೆ) ಅಯುಕ್ತಃ (ಯುಕ್ತನಾಗದವನು) ಕಾಮಕಾರೇಣ (ಕಾಮಪ್ರೇರಣೆಯಿಂದ) ಫಲೇ (ಫಲದಲ್ಲಿ) ಸಕ್ತಃ (ಆಸಕ್ತನಾಗಿ) ನಿಬಧ್ಯತೇ (ಬಂಧಿಸಲ್ಪಡುತ್ತಾನೆ).

೧೨. ಯೋಗಿಯು ಕರ್ಮಫಲವನ್ನು ಬಿಟ್ಟು ನಿಷ್ಠಾರೂಪವಾದ ಶಾಂತಿಯನ್ನು[1] ಪಡೆಯುತ್ತಾನೆ; ಯುಕ್ತನಾಗದವನು[2] ಕಾಮಪ್ರೇರಣೆಯಿಂದ ಫಲದಲ್ಲಿ ಆಸಕ್ತನಾಗಿ ಬಂಧಿಸಲ್ಪಡುತ್ತಾನೆ.

1 ನಿಷ್ಠೆಯಿಂದ ಉಂಟಾಗುವ ಮೋಕ್ಷವೆಂಬ ಶಾಂತಿಯನ್ನು.
2 ಮನಸ್ಸಮಾಧಾನವಿಲ್ಲದವನು.

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ ನ ಕಾರಯನ್ ॥ ೧೩ ॥**

ವಶೀ ದೇಹೀ (ಜಿತೇಂದ್ರಿಯನಾದ ಪುರುಷನು) ಮನಸಾ (ಮನಸ್ಸಿನಿಂದಲೇ) ಸರ್ವಕರ್ಮಾಣಿ (ಸರ್ವಕರ್ಮಗಳನ್ನು) ಸಂನ್ಯಸ್ಯ (ತ್ಯಾಗಮಾಡಿ) ನವದ್ವಾರೇ (ನವ ದ್ವಾರಗಳುಳ್ಳ) ಪುರೇ (ಪುರದಲ್ಲಿ) ನ ಕುರ್ವನ್ (ಏನನ್ನೂ ಮಾಡದೆ) ನ ಕಾರಯನ್ ಏವ (ಏನನ್ನೂ ಮಾಡಿಸದೆ) ಸುಖಂ ಆಸ್ತೇ (ಸುಖವಾಗಿ ಇರುತ್ತಾನೆ).

೧೩. ಜಿತೇಂದ್ರಿಯನಾದ ಪುರುಷನು ಸರ್ವಕರ್ಮಗಳನ್ನೂ ಮನಸ್ಸಿನಿಂದ[1] ತ್ಯಾಗಮಾಡಿ ನವದ್ವಾರಗಳುಳ್ಳ[2] ಪುರದಲ್ಲಿ ಏನನ್ನೂ ಮಾಡದೆ,[3] ಏನನ್ನೂ ಮಾಡಿಸದೆ[4] ಸುಖವಾಗಿ[5] ಇರುತ್ತಾನೆ.

1 ನಾಲ್ಕನೆಯ ಅಧ್ಯಾಯದ ಹದಿನೆಂಟನೆಯ ಶ್ಲೋಕದಲ್ಲಿ ಹೇಳಿರುವಂತೆ ವಿವೇಕ ಬುದ್ಧಿಯ ದ್ವಾರಾ ಕರ್ಮದಲ್ಲಿ ಅಕರ್ಮವನ್ನೂ, ಅಕರ್ಮದಲ್ಲಿ ಕರ್ಮವನ್ನೂ ನೋಡುವುದು.

2 ಕಣ್ಣುಗಳು, ಕಿವಿಗಳು, ಮೂಗಿನ ರಂಧ್ರಗಳು, ಬಾಯಿ, ಮೂತ್ರದ್ವಾರ ಮತ್ತು ಮಲದ್ವಾರ.

3 ಅಹಂಕಾರವಿಲ್ಲದಿರುವುದರಿಂದ ಶರೀರದ ಮೂಲಕ ತಾನು ಏನೂ ಮಾಡುವುದಿಲ್ಲ.

4 ಮಮಕಾರವಿಲ್ಲದಿರುವುದರಿಂದ ಶರೀರದಿಂದ ಏನನ್ನೂ ಮಾಡಿಸುವುದಿಲ್ಲ.

5 ಚಿತ್ತಪ್ರಸನ್ನತೆಯನ್ನು ಹೊಂದಿ ಆತ್ಮನನ್ನು ಬಿಟ್ಟು ಬೇರೆ ಬೇರೆ ಕಡೆಯಲ್ಲಿ ಯಾವುದೊಂದು ಪ್ರಯೋಜನವನ್ನೂ ಬಯಸದೆ ಸುಖವಾಗಿ ಇರುತ್ತಾನೆ.

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪ ॥**

ಪ್ರಭುಃ (ಆತ್ಮನು) ಲೋಕಸ್ಯ (ಜನರ) ಕರ್ತೃತ್ವಂ (ಕರ್ತೃತ್ವವನ್ನು) ನ ಸೃಜತಿ (ಸೃಷ್ಟಿಸಿರುವುದಿಲ್ಲ) ನ ಕರ್ಮಾಣಿ (ಕರ್ಮಗಳನ್ನು ಸೃಷ್ಟಿಸಿರುವುದಿಲ್ಲ) ನ ಕರ್ಮ-ಫಲಸಂಯೋಗಂ (ಕರ್ಮಫಲ–ಸಂಬಂಧವನ್ನೂ ಸೃಷ್ಟಿಸಿರುವುದಿಲ್ಲ) ತು (ಆದರೆ) ಸ್ವಭಾವಃ (ಸ್ವಭಾವವು) ಪ್ರವರ್ತತೇ (ಕೆಲಸಮಾಡುತ್ತದೆ).

**೧೪.** ಆತ್ಮನು ಜನರಿಗೆ ಕರ್ತೃತ್ವವನ್ನಾಗಲೀ, ಕರ್ಮಗಳನ್ನಾಗಲೀ, ಕರ್ಮಫಲದ ಸಂಬಂಧವನ್ನಾಗಲೀ ಸೃಷ್ಟಿಸಿರುವುದಿಲ್ಲ; ಆದರೆ ಸ್ವಭಾವವೇ[1] ಕೆಲಸಮಾಡುವುದು.

1 ಅವಿದ್ಯಾರೂಪವಾದ ಪ್ರಕೃತಿ; ಇದನ್ನು ನಮ್ಮ ಸ್ವಭಾವ ಎಂದು ತಿಳಿದು ಕೊಂಡಿರುತ್ತೇವೆ.

**ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥ ೧೫ ॥**

ವಿಭುಃ (ಆತ್ಮನು) ಕಸ್ಯಚಿತ್ (ಯಾರೊಬ್ಬರ) ಪಾಪಂ (ಪಾಪವನ್ನು) ಸುಕೃತಂ ಚ (ಪುಣ್ಯವನ್ನು) ನ ಆದತ್ತೇ (ತೆಗೆದುಕೊಳ್ಳುವುದಿಲ್ಲ) ಅಜ್ಞಾನೇನ (ಅಜ್ಞಾನದಿಂದ) ಜ್ಞಾನಂ (ಜ್ಞಾನವು) ಆವೃತಂ (ಮುಚ್ಚಲ್ಪಟ್ಟಿದೆ) ತೇನ (ಅದರಿಂದ) ಜಂತವಃ (ಪ್ರಾಣಿಗಳು) ಮುಹ್ಯಂತಿ (ಮೋಹಗೊಳ್ಳುತ್ತಿರುವುವು).

**೧೫.** ಆತ್ಮನು ಯಾರೊಬ್ಬರ ಪಾಪವನ್ನಾಗಲೀ ಪುಣ್ಯವನ್ನಾಗಲೀ ತೆಗೆದುಕೊಳ್ಳುವುದಿಲ್ಲ. ಜ್ಞಾನವು ಅಜ್ಞಾನದಿಂದ ಮುಚ್ಚಲ್ಪಟ್ಟಿದೆ; ಅದರಿಂದ[1] ಪ್ರಾಣಿಗಳು ಮೋಹಗೊಳ್ಳುತ್ತಿರುವುವು.

1 ಜ್ಞಾನಾವರಣರೂಪವಾದ ಕರ್ಮದಿಂದ (ಶ್ರೀರಾಮಾನುಜ).

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥ ೧೬ ॥**

ತು (ಆದರೆ) ಆತ್ಮನಃ ಜ್ಞಾನೇನ (ಆತ್ಮಜ್ಞಾನದಿಂದ) ಯೇಷಾಂ (ಯಾರ) ತತ್ ಅಜ್ಞಾನಂ (ಆ ಅಜ್ಞಾನವು) ನಾಶಿತಂ (ನಾಶವಾಗಿದೆಯೋ) ತೇಷಾಂ (ಅವರ) ತತ್ ಜ್ಞಾನಂ (ಆ ಜ್ಞಾನವು) ಆದಿತ್ಯವತ್ (ಸೂರ್ಯನ ಹಾಗೆ) ಪರಂ (ಪರಬ್ರಹ್ಮವನ್ನು) ಪ್ರಕಾಶಯತಿ (ಪ್ರಕಾಶಿಸುವುದು).

೧೬. ಆದರೆ ಆತ್ಮಜ್ಞಾನದ ದ್ವಾರಾ ಯಾರ ಅಜ್ಞಾನವು ನಾಶವಾಗಿದೆಯೋ ಅವರ ಆತ್ಮಜ್ಞಾನವು ಸೂರ್ಯನ ಹಾಗೆ ಪರಬ್ರಹ್ಮವನ್ನು ಪ್ರಕಾಶಿಸುವುದು.

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭ ॥**

ತದ್ಬುದ್ಧಯಃ (ಅದರಲ್ಲಿ ಬುದ್ಧಿಯನ್ನು ಇಟ್ಟಿರುವವರು) ತದಾತ್ಮಾನಃ (ಅದರಲ್ಲಿ ಮನಸ್ಸನ್ನು ಇಟ್ಟಿರುವವರು) ತನ್ನಿಷ್ಠಾಃ (ಅದರಲ್ಲಿ ನಿಷ್ಠರಾಗಿರುವವರು) ತತ್ಪರಾಯಣಾಃ (ಅದನ್ನೇ ಗತಿಯೆಂದು ನೆನೆಸಿರುವವರು) ಜ್ಞಾನ-ನಿರ್ಧೂತ-ಕಲ್ಮಷಾಃ (ಜ್ಞಾನದಿಂದ ತೊಳೆಯಲ್ಪಟ್ಟ ಕಲ್ಮಷವುಳ್ಳವರು) ಅಪುನರಾವೃತ್ತಿಂ (ಹಿಂತಿರುಗದಿರುವಿಕೆಯನ್ನು) ಗಚ್ಛಂತಿ (ಹೊಂದುತ್ತಾರೆ).

೧೭. ಯಾರು ಬ್ರಹ್ಮದಲ್ಲಿಯೇ ನಿಶ್ಚಯಬುದ್ಧಿಯುಳ್ಳವರಾಗಿರುವರೋ, ಯಾರು ಬ್ರಹ್ಮದಲ್ಲಿಯೇ ಮನಸ್ಸನ್ನಿಟ್ಟಿರುವರೋ, ಯಾರು ಬ್ರಹ್ಮನಿಷ್ಠರಾಗಿರುವರೋ, ಯಾರು ಬ್ರಹ್ಮವನ್ನೇ ಗತಿಯೆಂದು ನೆನೆಸಿರುವರೋ, ಯಾರು ಜ್ಞಾನದಿಂದ ಕಲ್ಮಷಗಳನ್ನು[1] ತೊಳೆದುಕೊಂಡಿರುವರೋ, ಅವರು ಮೋಕ್ಷವನ್ನು ಹೊಂದುತ್ತಾರೆ.

[1] ಪಾಪವೇ ಮೊದಲಾದ ಸಂಸಾರಕ್ಕೆ ಕಾರಣವಾಗಿರುವ ದೋಷಗಳನ್ನು.

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ೧೮ ॥**

ಪಂಡಿತಾಃ (ಜ್ಞಾನಿಗಳು) ವಿದ್ಯಾ-ವಿನಯ-ಸಂಪನ್ನೇ (ವಿದ್ಯಾವಿನಯಗಳಿಂದ ಕೂಡಿದ) ಬ್ರಾಹ್ಮಣೇ (ಬ್ರಾಹ್ಮಣನಲ್ಲಿ) ಗವಿ (ಗೋವಿನಲ್ಲಿ) ಹಸ್ತಿನಿ (ಆನೆಯಲ್ಲಿ) ಶುನಿ ಚ ಏವ (ನಾಯಿಯಲ್ಲಿ) ಶ್ವಪಾಕೇ ಚ (ನಾಯಿಯ ಮಾಂಸವನ್ನು ತಿನ್ನುವವನಲ್ಲಿ) ಸಮದರ್ಶಿನಃ (ಸಮದರ್ಶಿಗಳಾಗಿರುವರು).

**೧೮.** ವಿದ್ಯಾವಿನಯಗಳಿಂದ ಕೂಡಿದ ಬ್ರಾಹ್ಮಣ, ಗೋವು, ಆನೆ, ನಾಯಿ ಮತ್ತು ನಾಯಿಯ ಮಾಂಸವನ್ನು ತಿನ್ನುವವನು– ಇವರೆಲ್ಲರಲ್ಲಿ ಜ್ಞಾನಿಗಳು ಸಮದರ್ಶಿಗಳಾಗಿರುವರು.[1]

[1] 'ಸಮಂ' ಎಂದರೆ ಏಕವೂ ಅವಿಕಾರವೂ ಆದ ಬ್ರಹ್ಮವನ್ನು—ಶ್ರೀಶಂಕರ.

ವಿಷಮವಾದ ಆಕಾರಗಳು ಪ್ರಕೃತಿಗೆ ಸೇರಿದ್ದು, ಆತ್ಮನಿಗೆ ಸಂಬಂಧಿಸಿದುದಲ್ಲ; ಆದರೆ ಆತ್ಮನು ಎಲ್ಲಾ ಪ್ರಾಣಿಗಳಲ್ಲಿಯೂ ಜ್ಞಾನೈಕಾಕಾರತೆಯಿಂದ **ಸಮನಾಗಿರು ವನು**—ಶ್ರೀರಾಮಾನುಜ.

[ಶ್ರೀರಾಮಾನುಜಾಚಾರ್ಯರು 'ವಿದ್ಯಾವಿನಯಸಂಪನ್ನೇ' ಎಂಬುದನ್ನು 'ಬ್ರಾಹ್ಮಣೇ' ಎಂಬ ಶಬ್ದಕ್ಕೆ ವಿಶೇಷಣವಾಗಿ ಅನ್ವಯಿಸಿಲ್ಲ. 'ವಿದ್ಯಾವಿನಯಸಂಪನ್ನೇ' ಎಂದರೆ ವಿದ್ಯಾವಿನಯಸಂಪನ್ನನಾದ ಚೇತನನು. ಇದು ಸಮಸ್ತ ಮನುಷ್ಯವರ್ಗಕ್ಕೆ ಉಪಲಕ್ಷಣ. 'ಬ್ರಾಹ್ಮಣೇ' ಎಂದರೆ ಕೇವಲ ಹುಟ್ಟುಬ್ರಾಹ್ಮಣ.]

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥ ೧೯ ॥**

ಯೇಷಾಂ (ಯಾರ) ಮನಃ (ಮನಸ್ಸು) ಸಾಮ್ಯೇ (ಸಾಮ್ಯದಲ್ಲಿ) ಸ್ಥಿತಂ (ನಿಂತಿರುವುದೋ) ತೈಃ (ಅವರಿಂದ) ಇಹ ಏವ (ಇಲ್ಲಿಯೇ) ಸರ್ಗಃ (ಸಂಸಾರವು) ಜಿತಃ (ಜಯಿಸಲ್ಪಟ್ಟಿದೆ) ಹಿ (ಏಕೆಂದರೆ) ಬ್ರಹ್ಮ (ಬ್ರಹ್ಮವು) ನಿರ್ದೋಷಂ (ದೋಷರಹಿತವು) ಸಮಂ (ಸಮವು) ತಸ್ಮಾತ್ (ಆದುದರಿಂದ) ತೇ (ಅವರು) ಬ್ರಹ್ಮಣಿ (ಬ್ರಹ್ಮದಲ್ಲಿಯೇ) ಸ್ಥಿತಾಃ (ಸ್ಥಿತರಾಗಿದ್ದಾರೆ).

**೧೯.** ಯಾರ ಮನಸ್ಸು ಸಾಮ್ಯದಲ್ಲಿ[1] ನಿಂತಿರುವುದೋ ಅವರು ಇಲ್ಲಿಯೇ[2] ಸಂಸಾರವನ್ನು ಜಯಿಸುತ್ತಾರೆ. ಏಕೆಂದರೆ ಬ್ರಹ್ಮವು ದೋಷರಹಿತವಾಗಿಯೂ[3] ಸಮವಾಗಿಯೂ[4] ಇರುತ್ತದೆ; ಆದುದರಿಂದ ಅವರು ಬ್ರಹ್ಮದಲ್ಲಿಯೇ ಸ್ಥಿತರಾಗಿದ್ದಾರೆ.

[1] ಬ್ರಹ್ಮದಲ್ಲಿ.
[2] ಬದುಕಿರುವಾಗಲೇ.
[3] ಶ್ವಪಾಕಾದಿಗಳಲ್ಲಿರುವ ಬ್ರಹ್ಮವು ಅವರ ದೋಷಗಳಿಂದ ದೂಷಿತವಾಗಿಲ್ಲ.
[4] ಭೇದವನ್ನು ಉಂಟುಮಾಡುವ ಯಾವ ಅಂತ್ಯವಿಶೇಷಗಳೂ ಇಲ್ಲ.

**ನ ಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥ ೨೦ ॥**

ಸ್ಥಿರಬುದ್ಧಿಃ (ಸ್ಥಿರಬುದ್ಧಿಯುಳ್ಳವನೂ) ಅಸಂಮೂಢಃ (ಮೋಹವಿಲ್ಲದವನೂ) ಬ್ರಹ್ಮಣಿ ಸ್ಥಿತಃ (ಬ್ರಹ್ಮದಲ್ಲಿ ಇರುವವನೂ) [ಆದ] ಬ್ರಹ್ಮವಿತ್ (ಬ್ರಹ್ಮಜ್ಞಾನಿಯು) ಪ್ರಿಯಂ (ಪ್ರಿಯವಾದುದನ್ನು) ಪ್ರಾಪ್ಯ (ಹೊಂದಿ) ನ ಪ್ರಹೃಷ್ಯೇತ್ (ಹಿಗ್ಗ ಕೂಡದು) ಅಪ್ರಿಯಂ ಚ (ಅಪ್ರಿಯವಾದುದನ್ನು) ಪ್ರಾಪ್ಯ (ಹೊಂದಿ) ನ ಉದ್ವಿಜೇತ್ (ಕುಗ್ಗ ಕೂಡದು).

೨೦. ಸ್ಥಿರಬುದ್ಧಿಯುಳ್ಳವನೂ,[1] ಮೋಹವಿಲ್ಲದವನೂ, ಬ್ರಹ್ಮದಲ್ಲಿಯೇ ಇರುವವನೂ ಆದ ಬ್ರಹ್ಮಜ್ಞಾನಿಯು ಪ್ರಿಯವಾದುದನ್ನು ಹೊಂದಿ ಹಿಗ್ಗ ಕೂಡದು, ಅಪ್ರಿಯವಾದುದನ್ನು ಹೊಂದಿ ಕುಗ್ಗ ಕೂಡದು.

[1] ಸರ್ವಭೂತಗಳಲ್ಲಿಯೂ, ಸಮನಾಗಿಯೂ ದೋಷರಹಿತನಾಗಿಯೂ ಇರುವ ಒಬ್ಬನೇ ಆತ್ಮನು ಇರುವನೆಂದು ಸ್ಥಿರವಾದ ಸಂಶಯವಿಲ್ಲದ ಬುದ್ಧಿಯುಳ್ಳವನು.

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥ ೨೧ ॥**

ಬಾಹ್ಯ-ಸ್ಪರ್ಶೇಷು (ಬಾಹ್ಯಶಬ್ದಾದಿ ವಿಷಯಗಳಲ್ಲಿ) ಅಸಕ್ತಾತ್ಮಾ (ಆಸಕ್ತಿಯಿಲ್ಲದವನು) ಯತ್ ಸುಖಂ (ಯಾವ ಸುಖವಿದೆಯೋ) [ತತ್ (ಅದನ್ನು)] ಆತ್ಮನಿ (ಅಂತಃಕರಣದಲ್ಲಿ) ವಿಂದತೇ (ಪಡೆಯುತ್ತಾನೆ) ಸಃ ಬ್ರಹ್ಮಯೋಗ-ಯುಕ್ತಾತ್ಮಾ (ಬ್ರಹ್ಮಯೋಗದಿಂದ ಕೂಡಿದ ಆತ್ಮವುಳ್ಳ ಆತನು) ಅಕ್ಷಯ್ಯಂ (ಅಕ್ಷಯವಾದ) ಸುಖಂ (ಸುಖವನ್ನು) ಅಶ್ನುತೇ (ಪಡೆಯುತ್ತಾನೆ).

೨೧. ಶಬ್ದಾದಿ ಬಾಹ್ಯವಿಷಯಗಳಲ್ಲಿ ಆಸಕ್ತಿಯಿಲ್ಲದವನು ಅಂತಃಕರಣದಲ್ಲಿ (ವಿಷಯನಿರಪೇಕ್ಷವಾದ) ಸುಖವನ್ನು ಪಡೆಯುತ್ತಾನೆ. ಬ್ರಹ್ಮಯೋಗದಿಂದ ಕೂಡಿದ ಆತ್ಮವುಳ್ಳ[1] ಆ ಯೋಗಿಯು ಅಕ್ಷಯವಾದ ಸುಖವನ್ನು ಪಡೆಯುತ್ತಾನೆ.

[1] ಬ್ರಹ್ಮದಲ್ಲಿ ಸಮಾಹಿತಚಿತ್ತನಾದ ಯೋಗಿ.

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨ ॥**

ಕೌಂತೇಯ (ಎಲೈ ಅರ್ಜುನನೆ) ಯೇ ಹಿ (ಯಾವ) ಸಂಸ್ಪರ್ಶಜಾಃ (ವಿಷಯಜನ್ಯವಾದ) ಭೋಗಾಃ (ಭೋಗಗಳುಂಟೋ) ತೇ (ಅವು) ದುಃಖಯೋನಯಃ ಏವ (ದುಃಖಕ್ಕೆ ಕಾರಣಗಳಾಗಿರುವುವು) ಆದ್ಯಂತವಂತಃ (ಉತ್ಪತ್ತಿನಾಶಗಳುಳ್ಳವುಗಳು) ಬುಧಃ (ಜ್ಞಾನಿಯು) ತೇಷು (ಅವುಗಳಲ್ಲಿ) ನ ರಮತೇ (ರಮಿಸುವುದಿಲ್ಲ).

೨೨. ಎಲೈ ಅರ್ಜುನ, ವಿಷಯೇಂದ್ರಿಯಗಳ ಸಂಯೋಗದಿಂದ ಯಾವ ಭೋಗಗಳು ಉಂಟಾಗುವುವೋ, ಅವು ದುಃಖಕ್ಕೆ ಕಾರಣಗಳಾಗಿರುವುವು ಮತ್ತು ಉತ್ಪತ್ತಿನಾಶಗಳುಳ್ಳವುಗಳು. ಜ್ಞಾನಿಯು ಅವುಗಳಲ್ಲಿ ರಮಿಸುವುದಿಲ್ಲ.

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ ೨೩ ॥**

ಯಃ (ಯಾವನು) ಶರೀರ-ವಿಮೋಕ್ಷಣಾತ್ ಪ್ರಾಕ್ (ಶರೀರಪಾತಕ್ಕೆ ಮೊದಲು) ಕಾಮ-ಕ್ರೋಧೋದ್ಭವಂ (ಕಾಮಕ್ರೋಧಗಳಿಂದ ಉಂಟಾದ) ವೇಗಂ (ವೇಗವನ್ನು) ಇಹ ಏವ (ಇಲ್ಲಿಯೇ) ಸೋಢುಂ (ಸಹಿಸಿಕೊಳ್ಳಲು) ಶಕ್ನೋತಿ (ಶಕ್ತನಾಗುತ್ತಾನೆಯೋ) ಸಃ (ಅವನು) ಯುಕ್ತಃ (ಯೋಗಿಯು) ಸಃ (ಅವನು) ಸುಖೀ ನರಃ (ಸುಖಿಯಾದ ಮನುಷ್ಯನು).

೨೩. ಶರೀರಪಾತಕ್ಕೆ ಮೊದಲು ಯಾವನು ಇಲ್ಲಿಯೇ ಕಾಮಕ್ರೋಧಗಳಿಂದ ಉಂಟಾದ ವೇಗವನ್ನು ಸಹಿಸಿಕೊಳ್ಳಲು ಶಕ್ತನಾಗುವನೋ, ಅವನೇ ಯೋಗಿಯು, ಅವನೇ ಸುಖಿಯಾದ ಮನುಷ್ಯನು.

**ಯೋಽಂತಃಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪ ॥**

ಯಃ (ಯಾವನು) ಅಂತಃಸುಖಃ (ಆತ್ಮನಲ್ಲಿಯೇ ಸುಖವುಳ್ಳವನೋ) ಅಂತರಾರಾಮಃ (ಆತ್ಮನಲ್ಲಿಯೇ ಆರಾಮವುಳ್ಳವನೋ) ತಥಾ (ಹಾಗೆಯೇ) ಯಃ (ಯಾವನು) ಅಂತರ್ಜ್ಯೋತಿಃ (ಆತ್ಮನಲ್ಲಿಯೇ ಪ್ರಕಾಶವುಳ್ಳವನೋ) ಸಃ ಯೋಗೀ (ಆ ಯೋಗಿಯು) ಬ್ರಹ್ಮಭೂತಃ (ಬ್ರಹ್ಮಸ್ವರೂಪವನ್ನು ಹೊಂದಿ) ಬ್ರಹ್ಮ-ನಿರ್ವಾಣಂ (ಮುಕ್ತಿಯನ್ನು) ಅಧಿಗಚ್ಛತಿ (ಪಡೆಯುತ್ತಾನೆ).

೨೪. ಯಾವನು ಆತ್ಮನಲ್ಲಿಯೇ ಸುಖವುಳ್ಳವನೋ, ಆತ್ಮನಲ್ಲಿಯೇ ಆರಾಮವುಳ್ಳವನೋ, ಹಾಗೆಯೇ ಆತ್ಮನಲ್ಲಿಯೇ ಪ್ರಕಾಶವುಳ್ಳವನೋ, ಆ ಯೋಗಿಯು ಬ್ರಹ್ಮಸ್ವರೂಪವನ್ನು ಹೊಂದಿ ಮುಕ್ತಿಯನ್ನು ಪಡೆಯುತ್ತಾನೆ.

**ಲಭಂತೇ ಬ್ರಹ್ಮನಿರ್ವಾಣಂ ಋಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫ ॥**

ಕ್ಷೀಣ-ಕಲ್ಮಷಾಃ (ಕಲ್ಮಷಗಳನ್ನು ಕಳೆದುಕೊಂಡಿರುವವರೂ) ಛಿನ್ನ-ದ್ವೈಧಾಃ (ದ್ವಂದ್ವರಹಿತರೂ) ಯತಾತ್ಮಾನಃ (ಜಿತೇಂದ್ರಿಯರೂ) ಸರ್ವಭೂತ-ಹಿತೇ ರತಾಃ

(ಸರ್ವಭೂತಗಳ ಹಿತದಲ್ಲಿ ನಿರತರೂ) [ಆದ] ಋಷಯಃ (ಋಷಿಗಳು) ಬ್ರಹ್ಮ ನಿರ್ವಾಣಂ (ಮುಕ್ತಿಯನ್ನು) ಲಭಂತೇ (ಪಡೆಯುತ್ತಾರೆ).

**೨೫.** ಕಲ್ಮಷವಿಲ್ಲದವರೂ ದ್ವಂದ್ವರಹಿತರೂ ಜಿತೇಂದ್ರಿಯರೂ ಸರ್ವ ಭೂತಹಿತದಲ್ಲಿ ನಿರತರೂ ಆದ ಋಷಿಗಳು ಮುಕ್ತಿಯನ್ನು ಪಡೆಯುತ್ತಾರೆ.

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥ ೨೬ ॥**

ಕಾಮ-ಕ್ರೋಧ-ವಿಯುಕ್ತಾನಾಂ (ಕಾಮಕ್ರೋಧಗಳಿಂದ ಮುಕ್ತರೂ) ಯತ-ಚೇತಸಾಂ (ಸಂಯತಚಿತ್ತರೂ) ವಿದಿತಾತ್ಮನಾಂ (ಆತ್ಮನನ್ನು ತಿಳಿದುಕೊಂಡಿರುವವರೂ) [ಆದ] ಯತೀನಾಂ (ಯತಿಗಳಿಗೆ) ಅಭಿತಃ (ಸರ್ವತ್ರ) ಬ್ರಹ್ಮನಿರ್ವಾಣಂ (ಬ್ರಹ್ಮ ನಿರ್ವಾಣವು) ವರ್ತತೇ (ಇರುತ್ತದೆ).

**೨೬.** ಕಾಮಕ್ರೋಧಗಳಿಂದ ಬಿಡುಗಡೆಯನ್ನು ಹೊಂದಿರುವವರೂ, ಮನಸ್ಸನ್ನು ವಶದಲ್ಲಿಟ್ಟುಕೊಂಡಿರುವವರೂ ಆತ್ಮನನ್ನು ಸರಿಯಾಗಿ ತಿಳಿದು ಕೊಂಡಿರುವವರೂ ಆದ ಯತಿಗಳಿಗೆ ಸರ್ವತ್ರ[1] ಬ್ರಹ್ಮನಿರ್ವಾಣವು ಇರುತ್ತದೆ.

[1] ಬದುಕಿರುವಾಗಲೂ, ಮರಣಾನಂತರದಲ್ಲಿಯೂ.

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭ ॥**
**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥ ೨೮ ॥**

ಬಾಹ್ಯಾನ್ (ಹೊರಗಿನ) ಸ್ಪರ್ಶಾನ್ (ವಿಷಯಗಳನ್ನು) ಬಹಿಃ ಕೃತ್ವಾ (ದೂರ ಮಾಡಿ) ಚಕ್ಷುಃ ಚ (ದೃಷ್ಟಿಯನ್ನು) ಭ್ರುವೋಃ ಅಂತರೇ (ಹುಬ್ಬುಗಳ ನಡುವೆ) [ನಿಲ್ಲಿಸಿ] ನಾಸಾಭ್ಯಂತರಚಾರಿಣೌ (ಮೂಗಿನೊಳಗೆ ಸಂಚರಿಸುವ) ಪ್ರಾಣಾಪಾನೌ (ಪ್ರಾಣಾಪಾನಗಳನ್ನು) ಸಮೌ ಕೃತ್ವಾ (ಸಮವಾಗಿ ಮಾಡಿ) ಯತೇಂದ್ರಿಯ-ಮನೋಬುದ್ಧಿಃ (ಇಂದ್ರಿಯಮನೋಬುದ್ಧಿಗಳನ್ನು ಜಯಿಸಿರುವವನೂ) ಮೋಕ್ಷ-ಪರಾಯಣಃ (ಮೋಕ್ಷಪರಾಯಣನೂ) ವಿಗತೇಚ್ಛಾಭಯಕ್ರೋಧಃ (ಇಚ್ಛಾ-ಭಯ-ಕ್ರೋಧರಹಿತನೂ ಆದ) ಯಃ (ಯಾವ) ಮುನಿಃ (ಮುನಿಯೋ) ಸಃ (ಅವನು) ಸದಾ (ಯಾವಾಗಲೂ) ಮುಕ್ತಃ ಏವ (ಮುಕ್ತನೇ).

**೨೭-೨೮.** ಹೊರಗಿನ ವಿಷಯಗಳನ್ನು ದೂರಗೊಳಿಸಿ, ದೃಷ್ಟಿಯನ್ನು ಹುಬ್ಬುಗಳ ನಡುವೆ ಇಟ್ಟು, ಮೂಗಿನೊಳಗೆ ಸಂಚರಿಸುವ ಪ್ರಾಣಾಪಾನ

ಗಳನ್ನು ಸಮವಾಗಿ ಮಾಡಿ, ಇಂದ್ರಿಯಮನೋಬುದ್ಧಿಗಳನ್ನು ನಿಯಮಿಸಿರುವ ಮೋಕ್ಷಪರಾಯಣನಾದ ಇಚ್ಛಾಭಯಕ್ರೋಧರಹಿತನಾದ ಯಾವ ಮುನಿ ಇರುವನೋ ಅವನು ಯಾವಾಗಲೂ ಮುಕ್ತನೇ.

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥ ೨೯ ॥**

ಯಜ್ಞತಪಸಾಂ (ಯಜ್ಞಗಳ ಮತ್ತು ತಪಸ್ಸುಗಳ) ಭೋಕ್ತಾರಂ (ಭೋಕ್ತೃವನ್ನಾಗಿಯೂ) ಸರ್ವಲೋಕ-ಮಹೇಶ್ವರಂ (ಸರ್ವಲೋಕಗಳ ಮಹೇಶ್ವರನನ್ನಾಗಿಯೂ) ಸರ್ವಭೂತಾನಾಂ (ಸರ್ವಪ್ರಾಣಿಗಳ) ಸುಹೃದಂ (ಸುಹೃತ್ ಎಂದೂ) ಮಾಂ (ನನ್ನನ್ನು) ಜ್ಞಾತ್ವಾ (ತಿಳಿದು) ಶಾಂತಿಂ (ಶಾಂತಿಯನ್ನು) ಋಚ್ಛತಿ (ಹೊಂದುತ್ತಾನೆ).

**೨೯.** ಯಜ್ಞತಪಸ್ಸುಗಳ ಭೋಕ್ತೃವೆಂದೂ, ಸರ್ವಲೋಕಗಳ ಮಹೇಶ್ವರನೆಂದೂ, ಸರ್ವಪ್ರಾಣಿಗಳ ಸುಹೃತ್[1] ಎಂದೂ ನನ್ನನ್ನು ಅರಿತುಕೊಂಡು (ಯೋಗಿಯು) ಶಾಂತಿಯನ್ನು ಹೊಂದುತ್ತಾನೆ.

[1] ಪ್ರತ್ಯುಪಕಾರವನ್ನು ಬಯಸದೆ ಉಪಕಾರಿಯಾಗಿರುವವನು.

**ಇತಿ ಸಂನ್ಯಾಸಯೋಗೋ ನಾಮ ಪಂಚಮೋಽಧ್ಯಾಯಃ ।**

ಸಂನ್ಯಾಸಯೋಗವೆಂಬ ಐದನೆಯ ಅಧ್ಯಾಯವು ಮುಗಿಯಿತು.

# ಆರನೆಯ ಅಧ್ಯಾಯ

## ಧ್ಯಾನಯೋಗ

ಶ್ರೀಭಗವಾನ್ ಉವಾಚ

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ ೧ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಕರ್ಮಫಲಂ (ಕರ್ಮಫಲವನ್ನು) ಅನಾಶ್ರಿತಃ (ಆಶ್ರಯಿಸದೆ) ಕಾರ್ಯಂ ಕರ್ಮ (ಮಾಡಬೇಕಾದ ಕರ್ಮವನ್ನು) ಯಃ (ಯಾವನು) ಕರೋತಿ (ಮಾಡುತ್ತಾನೆಯೋ) ಸಃ (ಅವನು) ಸಂನ್ಯಾಸೀ ಚ (ಸಂನ್ಯಾಸಿ) ಯೋಗೀ ಚ (ಮತ್ತು ಯೋಗಿ) ನ ನಿರಗ್ನಿಃ (ಅಗ್ನಿಯಿಲ್ಲದವನಲ್ಲ) ನ ಚ ಅಕ್ರಿಯಃ (ಕ್ರಿಯಾರಹಿತನಲ್ಲ).

ಶ್ರೀಕೃಷ್ಣನು ಹೇಳಿದನು

೧. ಕರ್ಮಫಲವನ್ನು ಆಶ್ರಯಿಸದೆ ಮಾಡಬೇಕಾದ ಕರ್ಮವನ್ನು ಯಾವನು ಮಾಡುತ್ತಾನೆಯೋ, ಅವನೇ ಸಂನ್ಯಾಸಿ ಮತ್ತು ಅವನೇ ಯೋಗಿ; ಅಗ್ನಿಯಿಲ್ಲದವನೂ ಅಲ್ಲ, ಕ್ರಿಯಾರಹಿತನೂ ಅಲ್ಲ.

[ವೈದಿಕಕರ್ಮಗಳಿಗೆ ಅಂಗವಾಗಿರುವ ಗಾರ್ಹಪತ್ಯ, ಆಹವನೀಯ ಮೊದಲಾದ ಅಗ್ನಿಗಳನ್ನು ಯಾವನು ತ್ಯಾಗಮಾಡಿರುತ್ತಾನೆಯೋ ಅವನು ನಿರಗ್ನಿಯು; ಅಗ್ನಿ ನಿರಪೇಕ್ಷವಾದ ತಪೋದಾನಾದಿ ಕರ್ಮಗಳನ್ನು ಯಾವನು ತ್ಯಾಗಮಾಡಿರುತ್ತಾನೆಯೋ ಅವನು ಅಕ್ರಿಯನು. ನಿರಗ್ನಿಯು ಮಾತ್ರ ಸಂನ್ಯಾಸಿಯೂ, ಅಕ್ರಿಯನು ಮಾತ್ರ ಯೋಗಿಯೂ ಎಂದು ತಿಳಿಯಕೂಡದು. ಫಲಾಪೇಕ್ಷೆಯಿಲ್ಲದೆ ಕರ್ಮಮಾಡುವವನಿಗೆ ಜ್ಞಾನದಲ್ಲಿಯೂ ನಿಷ್ಠೆಯುಂಟು, ಯೋಗದಲ್ಲಿಯೂ ನಿಷ್ಠೆಯುಂಟು.]

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥**

ಪಾಂಡವ (ಎಲೈ ಅರ್ಜುನನೆ) ಯಂ (ಯಾವುದನ್ನು) ಸಂನ್ಯಾಸಂ ಇತಿ (ಸಂನ್ಯಾಸವೆಂದು) ಪ್ರಾಹುಃ (ಹೇಳುವರೋ) ತಂ (ಅದನ್ನೇ) ಯೋಗಂ (ಯೋಗವೆಂದು) ವಿದ್ಧಿ (ತಿಳಿ) ಹಿ (ಏಕೆಂದರೆ) ಅಸಂನ್ಯಸ್ತ-ಸಂಕಲ್ಪಃ (ಸಂಕಲ್ಪವನ್ನು ತ್ಯಾಗಮಾಡದವನು) ಕಃ ಚನ (ಯಾವನೂ) ಯೋಗೀ (ಯೋಗಿಯು) ನ ಭವತಿ (ಆಗಲಾರನು).

೨. ಎಲೈ ಅರ್ಜುನ, ಯಾವುದನ್ನು ಸಂನ್ಯಾಸವೆಂದು ಹೇಳುವರೋ[1] ಅದನ್ನೇ ಯೋಗವೆಂದು ತಿಳಿ; ಏಕೆಂದರೆ ಸಂಕಲ್ಪವನ್ನು ತ್ಯಾಗಮಾಡದಿರುವ ಯಾವನೂ ಯೋಗಿಯಾಗಲಾರನು.

1 ಶ್ರುತಿಸ್ಮೃತಿಗಳನ್ನು ಬಲ್ಲವರು.

[ಸಂನ್ಯಾಸದಲ್ಲಿ ಕರ್ಮವನ್ನೂ ಫಲದ ಸಂಕಲ್ಪವನ್ನೂ ತ್ಯಾಗಮಾಡಬೇಕು. ಆದರೆ ಕರ್ಮಯೋಗದಲ್ಲಿ ಫಲದ ಸಂಕಲ್ಪವನ್ನು ಮಾತ್ರ ತ್ಯಾಗಮಾಡಬೇಕು. ಸಂಕಲ್ಪ ತ್ಯಾಗವು ಸಂನ್ಯಾಸಕ್ಕೂ ಮತ್ತು ಕರ್ಮಯೋಗಕ್ಕೂ ಸಾಮಾನ್ಯವಾಗಿದೆ. ಈ ದೃಷ್ಟಿ ಯಿಂದ ಸಂನ್ಯಾಸವೇ ಯೋಗವೆಂದು ಹೇಳಿದೆ.]

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩ ॥**

ಯೋಗಂ (ಯೋಗವನ್ನು) ಆರುರುಕ್ಷೋಃ (ಆರೂಢನಾಗಬೇಕೆಂದು ಇಚ್ಛಿಸುವ) ಮುನೇಃ (ಮುನಿಗೆ) ಕರ್ಮ (ಕರ್ಮವು) ಕಾರಣಂ (ಸಾಧನವು) [ಎಂದು] ಉಚ್ಯತೇ (ಹೇಳಲ್ಪಡುತ್ತದೆ) ಯೋಗಾರೂಢಸ್ಯ (ಯೋಗಾರೂಢನಾದ) ತಸ್ಯ ಏವ (ಅವನಿಗೇ) ಶಮಃ (ಶಮವು) ಕಾರಣಂ (ಸಾಧನವು) [ಎಂದು] ಉಚ್ಯತೇ (ಹೇಳಲ್ಪಡುವುದು).

೩. ಯೋಗವನ್ನು ಹೊಂದಬೇಕೆಂದು ಇಚ್ಛಿಸುವ ಮುನಿಗೆ ಕರ್ಮವು[1] ಸಾಧನವೆಂದು ಹೇಳಲ್ಪಡುವುದು; ಯೋಗಾರೂಢನಾದ ಆ ಮುನಿಗೆ ಶಮವು[2] ಸಾಧನವೆಂದು ಹೇಳಲ್ಪಡುವುದು.

1 ಕರ್ಮಯೋಗ.

2 ಕರ್ಮಪರಿತ್ಯಾಗ. ಕಾಮ್ಯಕರ್ಮಗಳು ಕಡಿಮೆಯಾದಷ್ಟೂ ಚಿತ್ತಸಮಾಧಾನವು ಹೆಚ್ಚುತ್ತದೆ.

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥**

ಯದಾ ಹಿ (ಯಾವಾಗ) [ಈ ಯೋಗಿಯು] ಇಂದ್ರಿಯಾರ್ಥೇಷು (ಇಂದ್ರಿಯಗಳ ವಿಷಯಗಳಲ್ಲಿ) ಕರ್ಮಸು (ಕರ್ಮಗಳಲ್ಲಿ) ನ ಅನುಷಜ್ಜತೇ (ಆಸಕ್ತನಾಗುವುದಿಲ್ಲವೋ) ತದಾ (ಆಗ) ಸರ್ವ-ಸಂಕಲ್ಪ-ಸಂನ್ಯಾಸೀ (ಸಂಕಲ್ಪಗಳನ್ನೆಲ್ಲಾ ಬಿಡುವವನಾಗಿ) ಯೋಗಾರೂಢಃ (ಯೋಗಾರೂಢನು ಎಂದು) ಉಚ್ಯತೇ (ಹೇಳಲ್ಪಡುತ್ತಾನೆ).

೪. ಯಾವಾಗ (ಈ ಯೋಗಿಯು) ಇಂದ್ರಿಯಗಳ ವಿಷಯಗಳಲ್ಲಿ (ಮತ್ತು ಅದಕ್ಕೆ ಸಂಬಂಧಪಟ್ಟ) ಕರ್ಮಗಳಲ್ಲಿ ಆಸಕ್ತನಾಗುವುದಿಲ್ಲವೋ,

ಆಗ ಸರ್ವಸಂಕಲ್ಪಗಳನ್ನು ತ್ಯಾಗಮಾಡುವವನಾಗಿ ಯೋಗಾರೂಢನೆಂದು[1] ಹೇಳಲ್ಪಡುತ್ತಾನೆ.

1 ಯೋಗಸಿದ್ಧಿಯನ್ನು ಪಡೆದುಕೊಂಡವನು.

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫ ॥**

ಆತ್ಮನಾ (ಮನಸ್ಸಿನಿಂದಲೇ) ಆತ್ಮಾನಂ (ತನ್ನನ್ನು) ಉದ್ಧರೇತ್ (ಉದ್ಧಾರ ಮಾಡಿಕೊಳ್ಳಬೇಕು) ಆತ್ಮಾನಂ (ತನ್ನನ್ನು) ನ ಅವಸಾದಯೇತ್ (ಕುಗ್ಗಿಸಬಾರದು) ಹಿ (ಏಕೆಂದರೆ) ಆತ್ಮಾ ಏವ (ಮನಸ್ಸೇ) ಆತ್ಮನಃ (ತನ್ನ) ಬಂಧುಃ (ಬಂಧುವು) ಆತ್ಮಾ ಏವ (ಮನಸ್ಸೇ) ಆತ್ಮನಃ (ತನ್ನ) ರಿಪುಃ (ಶತ್ರುವು).

**೫.** ಮನಸ್ಸಿನಿಂದಲೇ ತನ್ನನ್ನು ಸಂಸಾರಸಮುದ್ರದಿಂದ ಉದ್ಧಾರ ಮಾಡಿಕೊಳ್ಳಬೇಕು, ತನ್ನನ್ನು ಕುಗ್ಗಿಸಿಕೊಳ್ಳಬಾರದು; ಏಕೆಂದರೆ ಮನಸ್ಸೇ ತನ್ನ ಬಂಧು, ಮನಸ್ಸೇ ತನ್ನ ಶತ್ರು.

[ಇಂದ್ರಿಯವಿಷಯಗಳಲ್ಲಿ ಅನುರಕ್ತವಾದ ಮನಸ್ಸು ಜೀವಾತ್ಮನ ಶತ್ರು, ಶುದ್ಧವಾದ ಮನಸ್ಸು ಪರಮಹಿತವನ್ನುಂಟುಮಾಡುವ ಬಂಧು.]

**ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥**

ಯೇನ (ಯಾವ) ಆತ್ಮನಾ (ಆತ್ಮನಿಂದ) ಆತ್ಮಾ ಏವ (ತನ್ನ ಮನಸ್ಸೇ) ಜಿತಃ (ಜಯಿಸಲ್ಪಟ್ಟಿದೆಯೋ) ತಸ್ಯ ಆತ್ಮನಃ (ಅಂತಹ ಆತ್ಮನಿಗೆ) ಆತ್ಮಾ (ಮನಸ್ಸು) ಬಂಧುಃ (ಬಂಧುವಾಗಿರುತ್ತದೆ) ತು (ಆದರೆ) ಅನಾತ್ಮನಃ (ಅಜಿತಾತ್ಮನಿಗೆ) ಆತ್ಮಾ ಏವ (ತನ್ನ ಮನಸ್ಸೇ) ಶತ್ರುವತ್ (ಶತ್ರುವಂತೆ) ಶತ್ರುತ್ವೇ (ದ್ವೇಷಭಾವದಲ್ಲಿಯೇ) ವರ್ತೇತ (ಇರುವುದು).

**೬.** ಯಾವ ಆತ್ಮನಿಂದ ತನ್ನ ಮನಸ್ಸೇ ಜಯಿಸಲ್ಪಟ್ಟಿದೆಯೋ ಅಂತಹ ಆತ್ಮನಿಗೆ ಮನಸ್ಸು ಬಂಧುವಾಗಿರುತ್ತದೆ; ಆದರೆ ಅಜಿತೇಂದ್ರಿಯನಿಗೆ ತನ್ನ ಮನಸ್ಸೇ ಶತ್ರುವಿನಂತೆ ದ್ವೇಷಭಾವದಲ್ಲಿಯೇ ಇರುತ್ತದೆ.

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥**

ಶೀತೋಷ್ಣ-ಸುಖ-ದುಃಖೇಷು (ಶೀತೋಷ್ಣಸುಖದುಃಖಗಳಲ್ಲಿ) ತಥಾ (ಹಾಗೆಯೇ) ಮಾನಾಪಮಾನಯೋಃ (ಮಾನಾಪಮಾನಗಳಲ್ಲಿಯೂ) ಜಿತಾತ್ಮನಃ (ಜಯಿ

ಸಲ್ಪಟ್ಟ ಮನಸ್ಸುಳ್ಳ) ಪ್ರಶಾಂತಸ್ಯ (ಪ್ರಶಾಂತನಾದ) [ಪುರುಷನಿಗೆ] ಆತ್ಮಾ (ಆತ್ಮವು) ಪರಂ (ವಿಶೇಷವಾಗಿ) ಸಮಾಹಿತಃ (ಸಮಾಹಿತವಾಗಿರುವುದು).

೭. ಶೀತೋಷ್ಣಸುಖದುಃಖಗಳಲ್ಲಿಯೂ ಮತ್ತು ಮಾನಾಪಮಾನ ಗಳಲ್ಲಿಯೂ ಜಯಿಸಲ್ಪಟ್ಟ ಮನಸ್ಸುಳ್ಳವನೂ, ಪ್ರಶಾಂತನೂ ಆದವನಿಗೆ ಆತ್ಮವು ವಿಶೇಷವಾಗಿ ಸಮಾಹಿತವಾಗಿರುವುದು.

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮ ॥**

ಜ್ಞಾನ-ವಿಜ್ಞಾನ-ತೃಪ್ತಾತ್ಮಾ (ಜ್ಞಾನವಿಜ್ಞಾನಗಳಿಂದ ತೃಪ್ತಿಹೊಂದಿದ ಮನಸ್ಸುಳ್ಳವನು) ಕೂಟಸ್ಥಃ (ಕೂಟಸ್ಥನೂ) ವಿಜಿತೇಂದ್ರಿಯಃ (ಜಿತೇಂದ್ರಿಯನೂ) ಸಮ-ಲೋಷ್ಟಾಶ್ಮ-ಕಾಂಚನಃ (ಮಣ್ಣು ಕಲ್ಲು ಚಿನ್ನಗಳನ್ನು ಸಮವಾಗಿ ನೋಡುವವನೂ) [ಆದ] ಯೋಗೀ (ಯೋಗಿಯು) ಯುಕ್ತಃ ಇತಿ (ಯುಕ್ತನೆಂದು) ಉಚ್ಯತೇ (ಹೇಳಲ್ಪಡುತ್ತಾನೆ).

೮. ಜ್ಞಾನ[1] ಮತ್ತು ವಿಜ್ಞಾನ[2]– ಇವುಗಳಿಂದ ತೃಪ್ತಿಹೊಂದಿದ ಮನಸ್ಸುಳ್ಳವನೂ, ಕೂಟಸ್ಥನೂ,[3] ಜಿತೇಂದ್ರಿಯನೂ, ಮಣ್ಣು ಕಲ್ಲು ಚಿನ್ನ ಇವುಗಳನ್ನು ಸಮವಾಗಿ ನೋಡುವವನೂ ಆದ ಯೋಗಿಯು ಯುಕ್ತನೆಂದು ಹೇಳಲ್ಪಡುತ್ತಾನೆ.

[1] ಶಾಸ್ತ್ರಜ್ಞಾನ.
[2] ಶಾಸ್ತ್ರದಲ್ಲಿ ಹೇಳಿರುವುದನ್ನು ಅನುಭವಕ್ಕೆ ತಂದುಕೊಳ್ಳುವುದು.
[3] ದ್ವಂದ್ವಗಳಿಂದ ವಿಕಾರವನ್ನು ಹೊಂದದೆ ಅಲುಗಾಡದವನೂ.

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥**

ಸುಹೃನ್ಮಿತ್ರಾರ್ಯುದಾಸೀನ-ಮಧ್ಯಸ್ಥ-ದ್ವೇಷ್ಯ-ಬಂಧುಷು (ಸುಹೃತ್ತು, ಮಿತ್ರ, ಅರಿ, ಉದಾಸೀನ, ಮಧ್ಯಸ್ಥ, ದ್ವೇಷ್ಯ, ಬಂಧು–ಇವರಲ್ಲಿ) ಸಾಧುಷು (ಸಾಧುಗಳಲ್ಲಿ) ಪಾಪೇಷು ಅಪಿ ಚ (ಪಾಪಿಗಳಲ್ಲಿಯೂ) ಸಮಬುದ್ಧಿಃ (ಸಮಬುದ್ಧಿಯುಳ್ಳವನು) ವಿಶಿಷ್ಯತೇ (ಶ್ರೇಷ್ಠನಾಗಿರುತ್ತಾನೆ).

೯. ಸುಹೃತ್ತು,[1] ಮಿತ್ರ,[2] ಅರಿ,[3] ಉದಾಸೀನ,[4] ಮಧ್ಯಸ್ಥ,[5] ದ್ವೇಷ್ಯ,[6] ಬಂಧು[7]– ಇವರಲ್ಲಿಯೂ, ಸಾಧುಗಳಲ್ಲಿಯೂ[8] ಮತ್ತು ಪಾಪಿ

ಗಳಲ್ಲಿಯೂ[9] ಸಮಬುದ್ಧಿಯುಳ್ಳವನು[10] (ಯೋಗಾರೂಢರಲ್ಲಿ) ಶ್ರೇಷ್ಠನಾಗಿರುತ್ತಾನೆ.

[1] ಪ್ರತ್ಯುಪಕಾರವನ್ನು ಬಯಸದೆ ಉಪಕಾರವನ್ನು ಮಾಡುವವನು (ಶ್ರೀಶಂಕರ). ವಯಸ್ಸಿನ ನಿಯಮವಿಲ್ಲದೆ ತನ್ನ ಹಿತೈಷಿಯಾಗಿರುವವನು (ಶ್ರೀರಾಮಾನುಜ).

[2] ಸಮಾನವಯಸ್ಕನಾಗಿ ಹಿತೈಷಿಯಾಗಿರುವವನು (ಶ್ರೀರಾಮಾನುಜ).

[3] ಯಾವುದೋ ಒಂದು ಕಾರಣದಿಂದ ಅನರ್ಥವನ್ನು ಬಯಸುವವನು (ಶ್ರೀರಾಮಾನುಜ).

[4] ಹಿತೈಷಿಯೂ ಅಲ್ಲ, ಅನರ್ಥವನ್ನು ಬಯಸುವವನೂ ಅಲ್ಲ (ಶ್ರೀರಾಮಾನುಜ).

[5] ಇಬ್ಬರಿಗೂ ಹಿತವನ್ನು ಕೋರುವವನು (ಶ್ರೀಶಂಕರ). ಜನ್ಮದಿಂದಲೇ ಹಿತಾಹಿತಗಳನ್ನು ಬಯಸದೇ ಇರುವವನು (ಶ್ರೀರಾಮಾನುಜ).

[6] ತನಗೆ ಅಪ್ರಿಯನಾಗಿರುವವನು (ಶ್ರೀಶಂಕರ). ಜನ್ಮದಿಂದಲೇ ಅನಿಷ್ಟವನ್ನು ಬಯಸುವವನು (ಶ್ರೀರಾಮಾನುಜ).

[7] ಜನ್ಮದಿಂದಲೇ ಹಿತವನ್ನು ಬಯಸುವವನು (ಶ್ರೀರಾಮಾನುಜ).

[8] ಶಾಸ್ತ್ರವನ್ನು ಅನುಸರಿಸುವವರು (ಶ್ರೀಶಂಕರ).

[9] ನಿಷಿದ್ಧ ಕರ್ಮಗಳನ್ನು ಆಚರಿಸುವವರು (ಶ್ರೀಶಂಕರ).

[10] ಸುಹೃನ್ಮಿತ್ರಾದಿಗಳಲ್ಲಿ ಪ್ರಯೋಜನವಾಗಲಿ, ವಿರೋಧವಾಗಲಿ ಇಲ್ಲದಿರುವುದರಿಂದ ಅವರಲ್ಲಿ ಸಮಬುದ್ಧಿಯುಳ್ಳವನಾಗಿರುತ್ತಾನೆ.

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥**

ಯೋಗೀ (ಯೋಗಿಯು) ಸತತಂ (ಯಾವಾಗಲೂ) ರಹಸಿ (ನಿರ್ಜನಪ್ರದೇಶದಲ್ಲಿ) ಸ್ಥಿತಃ (ಇದ್ದುಕೊಂಡು) ಏಕಾಕೀ (ಏಕಾಕಿಯೂ) ಯತಚಿತ್ತಾತ್ಮಾ (ಯತಚಿತ್ತಾತ್ಮನೂ) ನಿರಾಶೀಃ (ನಿರಾಶಿಯೂ) ಅಪರಿಗ್ರಹಃ (ಅಪರಿಗ್ರಹನೂ) [ಆಗಿ] ಆತ್ಮಾನಂ (ಮನಸ್ಸನ್ನು) ಯುಂಜೀತ (ಯೋಗದಲ್ಲಿಡಬೇಕು).

೧೦. ನಿರ್ಜನಪ್ರದೇಶದಲ್ಲಿದ್ದುಕೊಂಡು, ಏಕಾಕಿಯೂ, ಯತಚಿತ್ತಾತ್ಮನೂ,[1] ನಿರಾಶಿಯೂ, ಅಪರಿಗ್ರಹನೂ ಆಗಿ, ಯೋಗಿಯು ಯಾವಾಗಲೂ[2] ಮನಸ್ಸನ್ನು ಯೋಗದಲ್ಲಿಡಬೇಕು.

[1] ಚಿತ್ತವೆಂದರೆ ಅಂತಃಕರಣ, ಆತ್ಮವೆಂದರೆ ದೇಹ–ಇವುಗಳನ್ನು ನಿಗ್ರಹಿಸಿರುವವನು.

[2] ಪ್ರತಿದಿನದಲ್ಲಿಯೂ ಯೋಗಕಾಲದಲ್ಲಿ (ಶ್ರೀರಾಮಾನುಜ).

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥ ೧೧ ॥**

ಶುಚೌ (ಶುಚಿಯಾದ) ದೇಶೇ (ಪ್ರದೇಶದಲ್ಲಿ) ಸ್ಥಿರಂ (ಸ್ಥಿರವಾದ) ನ ಅತ್ಯುಚ್ಛ್ರಿತಂ (ಅತಿ ಎತ್ತರವಿಲ್ಲದ) ನ ಅತಿನೀಚಂ (ಅತಿ ತಗ್ಗಿಲ್ಲದ) ಚೈಲಾಜಿನ-ಕುಶೋತ್ತರಂ (ವಸ್ತ್ರಚರ್ಮಕುಶಗಳನ್ನು ಒಂದರ ಮೇಲೊಂದು ಹಾಕಿರುವ) ಆತ್ಮನಃ (ತನ್ನ) ಆಸನಂ (ಆಸನವನ್ನು) ಪ್ರತಿಷ್ಠಾಪ್ಯ (ಸ್ಥಾಪಿಸಿಕೊಂಡು)—

೧೧. ಶುಚಿಯಾದ ಪ್ರದೇಶದಲ್ಲಿ[1] ಸ್ಥಿರವಾದ, ಅತಿ ಎತ್ತರವೂ ಅತಿ ತಗ್ಗೂ ಇಲ್ಲದ ಬಟ್ಟೆ, ಚರ್ಮ, ಕುಶ[2]– ಇವುಗಳನ್ನು ಒಂದರ ಮೇಲೊಂದು ಹಾಕಿರುವ ಆಸನವನ್ನು ಸ್ಥಾಪಿಸಿಕೊಂಡು—

[1] ಸ್ವಭಾವದಿಂದಾಗಲಿ ಸಂಸ್ಕಾರದಿಂದಾಗಲಿ ಶುದ್ಧವಾಗಿರುವ ಏಕಾಂತಪ್ರದೇಶದಲ್ಲಿ.
[2] ಕುಶದ ಮೇಲೆ ಚರ್ಮ, ಚರ್ಮದ ಮೇಲೆ ಬಟ್ಟೆ.

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥ ೧೨ ॥**

ತತ್ರ ಆಸನೇ (ಆ ಆಸನದಲ್ಲಿ) ಉಪವಿಶ್ಯ (ಕುಳಿತುಕೊಂಡು) ಮನಃ (ಮನಸ್ಸನ್ನು) ಏಕಾಗ್ರಂ (ಏಕಾಗ್ರವಾಗಿ) ಕೃತ್ವಾ (ಮಾಡಿ) ಯತ-ಚಿತ್ತೇಂದ್ರಿಯ-ಕ್ರಿಯಃ (ಚಿತ್ತೇಂದ್ರಿಯಗಳನ್ನು ನಿಗ್ರಹಿಸಿದವನು) ಆತ್ಮವಿಶುದ್ಧಯೇ (ಅಂತಃಕರಣ ಶುದ್ಧಿಗಾಗಿ) ಯೋಗಂ (ಯೋಗವನ್ನು) ಯುಂಜ್ಯಾತ್ (ಮಾಡಬೇಕು).

೧೨. ಆ ಆಸನದ ಮೇಲೆ ಕುಳಿತುಕೊಂಡು, ಮನಸ್ಸನ್ನು ಏಕಾಗ್ರವಾಗಿ ಮಾಡಿ, ಚಿತ್ತೇಂದ್ರಿಯಗಳನ್ನು ನಿಗ್ರಹಿಸಿದವನು ಅಂತಃಕರಣಶುದ್ಧಿಗಾಗಿ ಯೋಗವನ್ನು ಮಾಡಬೇಕು.

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥**
**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥**

ಕಾಯ-ಶಿರೋಗ್ರೀವಂ (ಶರೀರ, ಶಿರಸ್ಸು, ಕೊರಳು–ಇವುಗಳನ್ನು) ಸಮಂ (ಸಮವಾಗಿ) ಅಚಲಂ (ಅಚಲವಾಗಿ) ಧಾರಯನ್ (ಇರಿಸಿ) ಸ್ಥಿರಃ (ಸ್ಥಿರನಾಗಿ) ನಾಸಿಕಾಗ್ರಂ (ಮೂಗಿನ ತುದಿಯನ್ನು) ಸಂಪ್ರೇಕ್ಷ್ಯ (ನೋಡುತ್ತಾ) ದಿಶಃ ಚ (ದಿಕ್ಕುಗಳನ್ನು) ಅನವಲೋಕಯನ್ (ನೋಡದೆ) ಪ್ರಶಾಂತಾತ್ಮಾ (ಪ್ರಶಾಂತಾತ್ಮನಾಗಿ) ವಿಗತಭೀಃ (ನಿರ್ಭಯನಾಗಿ) ಬ್ರಹ್ಮಚಾರಿ-ವ್ರತೇ ಸ್ಥಿತಃ (ಬ್ರಹ್ಮಚಾರಿವ್ರತದಲ್ಲಿ ಇರುವವನಾಗಿ) ಮನಃ (ಮನಸ್ಸನ್ನು) ಸಂಯಮ್ಯ (ಸಂಯಮ ಮಾಡಿಕೊಂಡು)

ಮಚ್ಚಿತ್ತಃ (ನನ್ನಲ್ಲಿಯೇ ಚಿತ್ತವುಳ್ಳವನಾಗಿ) ಮತ್ಪರಃ (ನಾನೇ ಪರನೆಂದು ಭಾವನೆಯುಳ್ಳವನಾಗಿ) ಯುಕ್ತಃ ಆಸೀತ (ಯುಕ್ತನಾಗಿರಬೇಕು).

೧೩-೧೪. ಶರೀರ[1] ಶಿರಸ್ಸು ಕೊರಳು — ಇವುಗಳನ್ನು ಸಮವಾಗಿಯೂ ಅಚಲವಾಗಿಯೂ ಇರಿಸಿಕೊಂಡು, ಸ್ಥಿರನಾಗಿ, ತನ್ನ ಮೂಗಿನ ತುದಿಯನ್ನು[2] ನೋಡುತ್ತಾ, ದಿಕ್ಕುಗಳನ್ನು ನೋಡದವನಾಗಿ, ಪ್ರಶಾಂತಾತ್ಮನೂ ನಿರ್ಭಯನೂ ಆಗಿ, ಬ್ರಹ್ಮಚಾರಿವ್ರತದಲ್ಲಿ ಇರುವವನಾಗಿ, ಮನಸ್ಸನ್ನು ಸಂಯಮಮಾಡಿಕೊಂಡು, ನನ್ನಲ್ಲಿಯೇ ಚಿತ್ತವುಳ್ಳವನಾಗಿ, ನಾನೇ ಪರನೆಂದು ಭಾವಿಸಿ ಯುಕ್ತನಾಗಿರಬೇಕು.[3]

1 ಶರೀರದ ಮಧ್ಯಭಾಗ.

2 ಕಣ್ಣುಗಳ ದೃಷ್ಟಿಯನ್ನು ಒಳಕ್ಕೆ ಎಳೆಯಬೇಕು; ಎಂದರೆ ಅಂತಃಕರಣವನ್ನು ಸಮಾಧಾನಮಾಡಬೇಕು.

3 ಸಮಾಹಿತನಾಗಿರಬೇಕು.

**ಯುಂಜನ್ನೇವ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

ನಿಯತಮಾನಸಃ (ನಿಗ್ರಹಿಸಲ್ಪಟ್ಟ ಮನಸ್ಸುಳ್ಳ) ಯೋಗೀ (ಯೋಗಿಯು) ಆತ್ಮಾನಂ (ಮನಸ್ಸನ್ನು) ಏವಂ (ಹೀಗೆ) ಸದಾ (ಯಾವಾಗಲೂ) ಯುಂಜನ್ (ಸೇರಿಸಿಕೊಳ್ಳುತ್ತಾ) ಮತ್ಸಂಸ್ಥಾಂ (ನನ್ನನ್ನು ಆಶ್ರಯಿಸಿರುವ ಅಥವಾ ನನಗೆ ಅಧೀನವಾದ) ನಿರ್ವಾಣ-ಪರಮಾಂ (ಮೋಕ್ಷದಲ್ಲಿ ಕೊನೆಗಾಣುವ) ಶಾಂತಿಂ (ಶಾಂತಿಯನ್ನು) ಅಧಿಗಚ್ಛತಿ (ಹೊಂದುತ್ತಾನೆ).

೧೫. ಮನಸ್ಸನ್ನು ನಿಗ್ರಹಿಸಿದ ಯೋಗಿಯು ಮನಸ್ಸನ್ನು ಹೀಗೆ (ನನ್ನಲ್ಲಿಯೇ) ಯಾವಾಗಲೂ ಸೇರಿಸಿಕೊಳ್ಳುತ್ತಾ ನನ್ನನ್ನು ಆಶ್ರಯಿಸಿರುವ ಮೋಕ್ಷದಲ್ಲಿ ಕೊನೆಗಾಣುವ ಶಾಂತಿಯನ್ನು ಹೊಂದುತ್ತಾನೆ.

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

ಅರ್ಜುನ (ಎಲೈ ಅರ್ಜುನನೆ) ಅತ್ಯಶ್ನತಃ ತು (ಮಿತಿಮೀರಿ ತಿನ್ನುವವನಿಗೆ) ಯೋಗಃ (ಯೋಗವು) ನ ಅಸ್ತಿ (ಇಲ್ಲ) ಚ (ಮತ್ತು) ಏಕಾಂತಂ ಅನಶ್ನತಃ (ಏನೂ ತಿನ್ನದೆ ಇರುವವನಿಗೂ) ನ (ಇಲ್ಲ) ಅತಿ-ಸ್ವಪ್ನ-ಶೀಲಸ್ಯ ಚ (ಅತಿಯಾಗಿ

ನಿದ್ರೆಮಾಡುವವನಿಗೂ) ನ(ಇಲ್ಲ) ಜಾಗ್ರತಃ ಚ (ಎಚ್ಚರವಾಗಿಯೇ ಇರುವವನಿಗೂ) ನ ಏವ (ಇಲ್ಲವೇ ಇಲ್ಲ).

೧೬. ಎಲೈ ಅರ್ಜುನ, ಯೋಗವು ಮಿತಿಮೀರಿ ತಿನ್ನುವವನಿಗೆ ಇಲ್ಲ, ಏನೂ ತಿನ್ನದೆ ಇರುವವನಿಗೂ ಇಲ್ಲ; ಅತಿಯಾಗಿ ನಿದ್ರೆಮಾಡುವವನಿಗೂ ಮತ್ತು ಎಚ್ಚರವಾಗಿಯೇ ಇರುವವನಿಗೂ ಇಲ್ಲವೇ ಇಲ್ಲ.

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥**

ಯುಕ್ತಾಹಾರ-ವಿಹಾರಸ್ಯ(ಆಹಾರವಿಹಾರಗಳಲ್ಲಿ ಮಿತವಾಗಿರುವವನ) ಕರ್ಮ-ಸು (ಕರ್ಮಗಳಲ್ಲಿ) ಯುಕ್ತಚೇಷ್ಟಸ್ಯ (ಮಿತವಾದ ವ್ಯಾಪಾರವುಳ್ಳವನ) ಯುಕ್ತ-ಸ್ವಪ್ನಾವಬೋಧಸ್ಯ (ನಿದ್ರೆ ಮತ್ತು ಎಚ್ಚರಗಳಲ್ಲಿ ಮಿತವಾಗಿರುವವನ) ಯೋಗಃ (ಯೋಗವು) ದುಃಖಹಾ ಭವತಿ (ದುಃಖನಾಶಕವಾಗುತ್ತದೆ).

೧೭. ಆಹಾರ ವಿಹಾರಗಳಲ್ಲಿ ಮಿತವಾಗಿರುವವನ, ಕರ್ಮಗಳಲ್ಲಿ ಮಿತವಾದ ವ್ಯಾಪಾರವುಳ್ಳವನ ಮತ್ತು ನಿದ್ರೆಎಚ್ಚರಗಳಲ್ಲಿ ಮಿತವಾಗಿರುವವನ ಯೋಗವು ದುಃಖನಾಶಕವಾಗುತ್ತದೆ.

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥**

ಯದಾ (ಯಾವಾಗ) ವಿನಿಯತಂ (ನಿಗ್ರಹಿಸಲ್ಪಟ್ಟ) ಚಿತ್ತಂ (ಚಿತ್ತವು) ಆತ್ಮನಿ ಏವ (ಆತ್ಮದಲ್ಲಿಯೇ) ಅವತಿಷ್ಠತೇ (ನಿಲ್ಲುತ್ತದೆಯೋ) ತದಾ (ಆಗ) ಸರ್ವಕಾಮೇಭ್ಯಃ (ಸರ್ವಕಾಮುಗಳಿಂದ) ನಿಃಸ್ಪೃಹಃ (ಬಿಡಲ್ಪಟ್ಟ ಬಯಕೆಯುಳ್ಳವನಾಗಿ) ಯುಕ್ತಃ ಇತಿ (ಯೋಗಿಯೆಂದು) ಉಚ್ಯತೇ (ಹೇಳಲ್ಪಡುತ್ತಾನೆ).

೧೮. ಯಾವಾಗ - ನಿಗ್ರಹಿಸಲ್ಪಟ್ಟ ಚಿತ್ತವು ಆತ್ಮದಲ್ಲಿಯೇ ನಿಲ್ಲುತ್ತದೆಯೋ ಆಗ ಸರ್ವಕಾಮುಗಳಲ್ಲಿ ಬಯಕೆಯಿಲ್ಲದವನಾಗಿ ಯೋಗಿಯು ಎಂದು ಹೇಳಲ್ಪಡುತ್ತಾನೆ.

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥ ೧೯ ॥**

ಯಥಾ (ಹೇಗೆ) ನಿವಾತಸ್ಥಃ (ಗಾಳಿ ಬೀಸದಿರುವ ಪ್ರದೇಶದಲ್ಲಿರುವ) ದೀಪಃ (ದೀಪವು) ನ ಇಂಗತೇ (ಚಲಿಸುವುದಿಲ್ಲವೋ) ಆತ್ಮನಃ (ಆತ್ಮನ) ಯೋಗಂ

(ಯೋಗವನ್ನು) ಯುಂಜತಃ (ಮಾಡುತ್ತಿರುವ) ಯೋಗಿನಃ (ಯೋಗಿಯ) ಯತ-ಚಿತ್ತಸ್ಯ (ನಿಗ್ರಹಿಸಲ್ಪಟ್ಟ ಚಿತ್ತಕ್ಕೆ) ಸಾ (ಅದು) ಉಪಮಾ (ಉಪಮಾನವೆಂದು) ಸ್ಮೃತಾ (ಹೇಳಲ್ಪಟ್ಟಿದೆ).

೧೯. ಗಾಳಿಬೀಸದಿರುವ ಪ್ರದೇಶದಲ್ಲಿರುವ ದೀಪವು ಹೇಗೆ ಚಲಿಸುವುದಿಲ್ಲವೋ, ಹಾಗೆಯೇ ಆತ್ಮಯೋಗವನ್ನು ಮಾಡುತ್ತಿರುವ ಯೋಗಿಯ ನಿಗ್ರಹಿಸಲ್ಪಟ್ಟ ಚಿತ್ತವು ಅದು ನಿಶ್ಚಲವಾಗಿರುವುದು ಎಂದು ಹೇಳಲ್ಪಟ್ಟಿದೆ.

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥**
**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧ ॥**
**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿಂಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥ ೨೨ ॥**
**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥ ೨೩ ॥**

ಯತ್ರ (ಯಾವಾಗ) ಯೋಗಸೇವಯಾ (ಯೋಗಸೇವೆಯಿಂದ) ನಿರುದ್ಧಂ (ನಿರೋಧಿಸಲ್ಪಟ್ಟ) ಚಿತ್ತಂ (ಚಿತ್ತವು) ಉಪರಮತೇ (ಶಾಂತವಾಗುವುದೋ) ಯತ್ರ ಚ (ಯಾವಾಗ) ಆತ್ಮನಾ (ಮನಸ್ಸಿನಿಂದ) ಆತ್ಮಾನಂ (ಆತ್ಮನನ್ನು) ಪಶ್ಯನ್ (ನೋಡುತ್ತಾ) ಆತ್ಮನಿ ಏವ (ತನ್ನಲ್ಲಿಯೇ) ತುಷ್ಯತಿ (ಸಂತೋಷಪಡುತ್ತಾನೆಯೋ) ಬುದ್ಧಿಗ್ರಾಹ್ಯಂ (ಬುದ್ಧಿಗ್ರಾಹ್ಯವೂ) ಅತೀಂದ್ರಿಯಂ (ಇಂದ್ರಿಯಾತೀತವೂ) ಆತ್ಯಂತಿಕಂ (ನಿತ್ಯವೂ) [ಆದ] ಯತ್ ಸುಖಂ (ಯಾವ ಸುಖವಿದೆಯೋ) ತತ್ (ಅದನ್ನು) ವೇತ್ತಿ (ತಿಳಿಯುತ್ತಾನೆಯೋ) ಯತ್ರ ಚ (ಯಾವುದರಲ್ಲಿ) ಸ್ಥಿತಃ (ಇದ್ದುಕೊಂಡು) ಅಯಂ (ಇವನು, ಈ ಯೋಗಿಯು) ತತ್ತ್ವತಃ (ತತ್ತ್ವದಿಂದ) ನ ಏವ ಚಲತಿ (ಚಲಿಸುವುದಿಲ್ಲವೋ) ಯಂ ಚ (ಯಾವುದನ್ನು) ಲಬ್ಧ್ವಾ (ಹೊಂದಿ) ತತಃ (ಅದಕ್ಕಿಂತ) ಅಧಿಕಂ (ಅಧಿಕವಾದ) ಅಪರಂ (ಬೇರೆ) ಲಾಭಂ (ಲಾಭವನ್ನು) ನ ಮನ್ಯತೇ (ಎಣಿಸುವುದಿಲ್ಲವೋ) ಯಸ್ಮಿನ್ (ಯಾವುದರಲ್ಲಿ) ಸ್ಥಿತಃ (ಇದ್ದುಕೊಂಡು) ಗುರುಣಾ (ಮಹತ್ತಾದ) ದುಃಖೇನ ಅಪಿ (ದುಃಖದಿಂದಲೂ) ನ ವಿಚಾಲ್ಯತೇ (ಚಲಿಸಲ್ಪಡದೆ ಇರುವನೋ) ದುಃಖಸಂಯೋಗವಿಯೋಗಂ (ದುಃಖಸಂಬಂಧವನ್ನು ದೂರಮಾಡುವ) ತಂ (ಅದನ್ನು) ಯೋಗಸಂಜ್ಞಿತಂ (ಯೋಗವೆಂಬ ಹೆಸರುಳ್ಳದ್ದು) [ಎಂದು] ವಿದ್ಯಾತ್ (ತಿಳಿಯಬೇಕು) ಸ ಯೋಗಃ (ಆ ಯೋಗವು) ನಿಶ್ಚಯೇನ (ನಿಶ್ಚಯವಾದ) ಅನಿರ್ವಿಣ್ಣ-ಚೇತಸಾ (ಉತ್ಸಾಹಯುಕ್ತವಾದ ಮನಸ್ಸಿನಿಂದ) ಯೋಕ್ತವ್ಯಃ (ಮಾಡಲ್ಪಡಬೇಕು).

**೨೦-೨೩.** ಯಾವಾಗ ಯೋಗಸೇವೆಯಿಂದ ನಿರೋಧಿಸಲ್ಪಟ್ಟ ಚಿತ್ತವು ಶಾಂತವಾಗುವುದೋ, ಯಾವಾಗ ಶುದ್ಧವಾದ ಮನಸ್ಸಿನಿಂದ ಆತ್ಮನನ್ನು ನೋಡುತ್ತಾ ಇವನು ತನ್ನಲ್ಲಿಯೇ ಸಂತೋಷಪಡುವನೋ ಮತ್ತು ಬುದ್ಧಿಗ್ರಾಹ್ಯವೂ ಇಂದ್ರಿಯಾತೀತವೂ ನಿತ್ಯವೂ ಆದ ಯಾವ ಸುಖವಿದೆಯೋ ಅದನ್ನು ತಿಳಿಯುತ್ತಾನೆಯೋ, ಯಾವುದರಲ್ಲಿ ಇದ್ದುಕೊಂಡು ತತ್ತ್ವದಿಂದ ಚಲಿಸದೆ ಇರುವನೋ, ಯಾವುದನ್ನು ಹೊಂದಿ ಬೇರೆ ಲಾಭವನ್ನು ಅದಕ್ಕಿಂತ ಅಧಿಕವೆಂದು ಎಣಿಸುವುದಿಲ್ಲವೋ, ಯಾವುದರಲ್ಲಿ ಇದ್ದುಕೊಂಡು ಮಹತ್ತಾದ ದುಃಖದಿಂದಲೂ ಚಲಿಸದೆ ಇರುವನೋ, ದುಃಖಸಂಬಂಧವನ್ನು ದೂರ ಮಾಡುವ ಅದನ್ನು ಯೋಗವೆಂಬ ಹೆಸರುಳ್ಳದ್ದು ಎಂದು ತಿಳಿಯಬೇಕು. ಅಂತಹ ಯೋಗವನ್ನು ನಿಶ್ಚಯವಾದ ಮತ್ತು ಉತ್ಸಾಹಯುಕ್ತವಾದ ಚಿತ್ತದಿಂದ ಮಾಡಬೇಕು.

**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪ ॥**
**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ ೨೫ ॥**

ಸಂಕಲ್ಪ-ಪ್ರಭವಾನ್ (ಸಂಕಲ್ಪದಿಂದ ಉತ್ಪನ್ನವಾದ) ಸರ್ವಾನ್ (ಎಲ್ಲಾ) ಕಾಮಾನ್ (ಕಾಮಗಳನ್ನು) ಅಶೇಷತಃ (ಸಂಪೂರ್ಣವಾಗಿ) ತ್ಯಕ್ತ್ವಾ (ತ್ಯಜಿಸಿ) ಮನಸಾ ಏವ (ಮನಸ್ಸಿನಿಂದಲೇ) ಇಂದ್ರಿಯ-ಗ್ರಾಮಂ (ಇಂದ್ರಿಯಗಳ ಸಮೂಹವನ್ನು) ಸಮಂತತಃ (ಎಲ್ಲಾ ಕಡೆಯಿಂದಲೂ) ವಿನಿಯಮ್ಯ (ನಿಗ್ರಹಿಸಿ) ಧೃತಿ-ಗೃಹೀತಯಾ (ಧೈರ್ಯದಿಂದ ಕೂಡಿದ) ಬುದ್ಧ್ಯಾ (ಬುದ್ಧಿಯಿಂದ) ಶನೈಃ ಶನೈಃ (ಮೆಲ್ಲಮೆಲ್ಲಗೆ) ಉಪರಮೇತ್ (ಹಿಂತಿರುಗಬೇಕು) ಮನಃ (ಮನಸ್ಸನ್ನು) ಆತ್ಮ-ಸಂಸ್ಥಂ ಕೃತ್ವಾ (ಆತ್ಮನಲ್ಲಿಯೇ ನಿಲ್ಲಿಸಿ) ಕಿಂಚಿತ್ ಅಪಿ (ಏನನ್ನೂ) ನ ಚಿಂತಯೇತ್ (ಚಿಂತಿಸಬಾರದು).

**೨೪-೨೫.** ಸಂಕಲ್ಪದಿಂದ ಉತ್ಪನ್ನವಾದ ಎಲ್ಲಾ ಕಾಮಗಳನ್ನೂ ಸಂಪೂರ್ಣವಾಗಿ ತ್ಯಜಿಸಿ, ಮನಸ್ಸಿನಿಂದಲೇ ಇಂದ್ರಿಯಗಳ ಸಮೂಹವನ್ನು ಎಲ್ಲಾ ಕಡೆಯಿಂದಲೂ ನಿಗ್ರಹಿಸಿ, ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮೆಲ್ಲಮೆಲ್ಲಗೆ ಹಿಂತಿರುಗಬೇಕು; ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸಿ ಏನನ್ನೂ ಚಿಂತಿಸಕೂಡದು.

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥**

ಚಂಚಲಂ (ಚಂಚಲವಾದ) ಅಸ್ಥಿರಂ (ಅಸ್ಥಿರವಾದ) ಮನಃ (ಮನಸ್ಸು) ಯತಃ ಯತಃ (ಯಾವ ಯಾವ ವಿಷಯದಿಂದ) ನಿಶ್ಚರತಿ (ಹೊರಕ್ಕೆ ಬರುವುದೋ) ತತಃ ತತಃ (ಆ ಆ ವಿಷಯದಿಂದಲೇ) ಏತತ್ (ಇದನ್ನು) ನಿಯಮ್ಯ (ನಿಗ್ರಹಿಸಿ) ಆತ್ಮನಿ ಏವ (ಆತ್ಮನಲ್ಲಿಯೇ) ವಶಂ ನಯೇತ್ (ವಶಪಡಿಸಿಕೊಳ್ಳಬೇಕು).

೨೬. ಚಂಚಲವೂ ಅಸ್ಥಿರವೂ ಆದ ಮನಸ್ಸು ಯಾವ ಯಾವ ವಿಷಯದಿಂದ ಹೊರಕ್ಕೆ ಬರುವುದೋ ಆ ಆ ವಿಷಯದಿಂದ[1] ಇದನ್ನು (ಮನಸ್ಸನ್ನು) ನಿಗ್ರಹಿಸಿ ಆತ್ಮನಲ್ಲಿಯೇ ವಶಪಡಿಸಿಕೊಳ್ಳಬೇಕು.

[1] ಶಬ್ದಾದಿರೂಪವಾದ ಆ ನಿಮಿತ್ತವನ್ನು ಪರೀಕ್ಷಿಸಿ ಅದು ಬರಿ ಬಯಕೆಯೆಂದು ತಿಳಿದುಕೊಂಡು ವೈರಾಗ್ಯವನ್ನು ಹೊಂದಬೇಕು.

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭ ॥**

ಪ್ರಶಾಂತ-ಮನಸಂ (ಪ್ರಶಾಂತಚಿತ್ತನಾದ) ಶಾಂತರಜಸಂ (ರಜೋಗುಣವಿಲ್ಲದವನಾದ) ಅಕಲ್ಮಷಂ (ಕಲ್ಮಷರಹಿತನಾದ) ಬ್ರಹ್ಮಭೂತಂ (ಬ್ರಹ್ಮಭೂತನಾದ) ಏನಂ ಯೋಗಿನಂ ಹಿ (ಈ ಯೋಗಿಯನ್ನು) ಉತ್ತಮಂ (ಉತ್ತಮವಾದ) ಸುಖಂ (ಸುಖವು) ಉಪೈತಿ (ಬಂದು ಸೇರುತ್ತದೆ).

೨೭. ಪ್ರಶಾಂತಚಿತ್ತನೂ, ರಜೋಗುಣವಿಲ್ಲದವನೂ, ಕಲ್ಮಷರಹಿತನೂ ಬ್ರಹ್ಮಭಾವವನ್ನು ಹೊಂದಿದವನೂ ಆದ ಈ ಯೋಗಿಯನ್ನು ಉತ್ತಮ ಸುಖವು ಬಂದು ಸೇರುತ್ತದೆ.

**ಯುಂಜನ್ನೇವ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮ ॥**

ಏವಂ (ಹೀಗೆ) ಆತ್ಮಾನಂ (ಆತ್ಮನನ್ನು) ಸದಾ (ಯಾವಾಗಲೂ) ಯುಂಜನ್ (ಯೋಗದಲ್ಲಿಟ್ಟುಕೊಂಡು) ವಿಗತ-ಕಲ್ಮಷಃ (ಕಲ್ಮಷರಹಿತನಾದ) ಯೋಗೀ (ಯೋಗಿಯು) ಸುಖೇನ (ಸುಖದಿಂದ, ಆಯಾಸವಿಲ್ಲದೆ) ಬ್ರಹ್ಮ-ಸಂಸ್ಪರ್ಶಂ (ಬ್ರಹ್ಮಸಂಸ್ಪರ್ಶವೆಂಬ) ಅತ್ಯಂತಂ (ಉತ್ಕೃಷ್ಟವಾದ) ಸುಖಂ (ಸುಖವನ್ನು) ಅಶ್ನುತೇ (ಹೊಂದುತ್ತಾನೆ).

**೨೮.** ಹೀಗೆ ಆತ್ಮನನ್ನು ಯಾವಾಗಲೂ ಯೋಗದಲ್ಲಿಟ್ಟುಕೊಂಡು ಕಲ್ಮಷರಹಿತನಾದ ಯೋಗಿಯು ಆಯಾಸವಿಲ್ಲದೆ ಬ್ರಹ್ಮಸಂಸ್ಪರ್ಶವೆಂಬ[1] ಉತ್ಕೃಷ್ಟವಾದ ಸುಖವನ್ನು ಹೊಂದುತ್ತಾನೆ.

[1] ಪರಬ್ರಹ್ಮದ ಸ್ಪರ್ಶವು ಅಥವಾ ಸಂಬಂಧವು ಯಾವುದಕ್ಕೆ ಇರುವುದೋ ಅದು ಬ್ರಹ್ಮಸಂಸ್ಪರ್ಶವು.

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**

ಸರ್ವತ್ರ (ಎಲ್ಲೆಲ್ಲಿಯೂ) ಸಮದರ್ಶಿನಃ (ಸಮದರ್ಶಿಯಾದ) ಯೋಗ-ಯುಕ್ತಾತ್ಮಾ (ಯೋಗಯುಕ್ತಾತ್ಮನು) ಆತ್ಮಾನಂ (ಆತ್ಮನನ್ನು) ಸರ್ವಭೂತಸ್ಥಂ (ಸರ್ವಭೂತಗಳಲ್ಲಿರುವವನನ್ನಾಗಿಯೂ) ಸರ್ವಭೂತಾನಿ ಚ (ಮತ್ತು ಸರ್ವಭೂತ ಗಳನ್ನು) ಆತ್ಮನಿ (ಆತ್ಮನಲ್ಲಿ) ಈಕ್ಷತೇ (ನೋಡುತ್ತಾನೆ).

**೨೯.** ಎಲ್ಲೆಲ್ಲಿಯೂ ಸಮದರ್ಶಿಯಾಗಿರುವ ಯೋಗಯುಕ್ತಾತ್ಮನು[1] ಆತ್ಮನನ್ನು ಸರ್ವಭೂತಗಳಲ್ಲಿಯೂ, ಸರ್ವಭೂತಗಳನ್ನು ಆತ್ಮನಲ್ಲಿಯೂ ಕಾಣುತ್ತಾನೆ.

[1] ಅಂತಃಕರಣವನ್ನು ಸಮಾಧಾನದಲ್ಲಿಟ್ಟುಕೊಂಡಿರುವವನು.

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦ ॥**

ಯಃ (ಯಾವನು) ಸರ್ವತ್ರ (ಎಲ್ಲೆಲ್ಲಿಯೂ) ಮಾಂ (ನನ್ನನ್ನು) ಪಶ್ಯತಿ (ನೋಡುವನೋ) ಸರ್ವಂ ಚ (ಮತ್ತು ಎಲ್ಲವನ್ನೂ) ಮಯಿ (ನನ್ನಲ್ಲಿ) ಪಶ್ಯತಿ (ನೋಡುವನೋ) ತಸ್ಯ (ಅವನಿಗೆ) ಅಹಂ (ನಾನು) ನ ಪ್ರಣಶ್ಯಾಮಿ (ಕಾಣದೆ ಹೋಗುವುದಿಲ್ಲ) ಸ ಚ (ಮತ್ತು ಅವನು) ಮೇ (ನನಗೆ) ನ ಪ್ರಣಶ್ಯತಿ (ಕಾಣದೆ ಹೋಗುವುದಿಲ್ಲ).

**೩೦.** ಯಾವನು ನನ್ನನ್ನು ಎಲ್ಲೆಲ್ಲಿಯೂ[1] ನೋಡುವನೋ ಮತ್ತು ಎಲ್ಲವನ್ನೂ[2] ನನ್ನಲ್ಲಿಯೇ ನೋಡುವನೋ ಅವನಿಗೆ ನಾನು ಕಾಣದೆ ಹೋಗುವುದಿಲ್ಲ ಮತ್ತು ಅವನು ನನಗೆ ಕಾಣದೆ ಹೋಗುವುದಿಲ್ಲ.

[1] ಎಲ್ಲಾ ಪ್ರಾಣಿಗಳಲ್ಲಿಯೂ.
[2] ಬ್ರಹ್ಮನೇ ಮೊದಲಾದ ಪ್ರಾಣಿಗಳ ಸಮೂಹವನ್ನು.

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ ೩೧ ॥**

ಯಃ (ಯಾವನು) ಸರ್ವಭೂತಸ್ಥಿತಂ (ಸರ್ವಪ್ರಾಣಿಗಳಲ್ಲಿ ಇರುವ) ಮಾಂ (ನನ್ನನ್ನು) ಏಕತ್ವಂ ಆಸ್ಥಿತಃ (ಏಕತ್ವವನ್ನು ಹೊಂದಿದವನಾಗಿ) ಭಜತಿ (ಭಜಿಸುವನೋ) ಸಃ ಯೋಗೀ (ಆ ಯೋಗಿಯು) ಸರ್ವಥಾ ವರ್ತಮಾನಃ ಅಪಿ (ಹೇಗೆ ಇದ್ದರೂ) ಮಯಿ (ನನ್ನಲ್ಲಿ) ವರ್ತತೇ (ಇರುವನು).

**೩೧.** ಏಕತ್ವದಲ್ಲಿ ನೆಲಸಿರುವ ಯಾವನು ಸರ್ವಪ್ರಾಣಿಗಳಲ್ಲಿಯೂ ಇರುವ ನನ್ನನ್ನು ಭಜಿಸುವನೋ, ಆ ಯೋಗಿಯು ಹೇಗೆ ಇದ್ದರೂ ನನ್ನಲ್ಲಿಯೇ ಇರುವನು.

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥ ೩೨ ॥**

ಅರ್ಜುನ (ಎಲೈ ಅರ್ಜುನನೆ) ಯಃ (ಯಾವನು) ಸರ್ವತ್ರ (ಎಲ್ಲಾ ಪ್ರಾಣಿಗಳಲ್ಲಿಯೂ) ಆತ್ಮೌಪಮ್ಯೇನ (ಆತ್ಮಸಾದೃಶ್ಯದಿಂದ, ತನ್ನಂತೆಯೇ) ಯದಿ ವಾ ಸುಖಂ (ಸುಖವನ್ನಾಗಲಿ) ವಾ ದುಃಖಂ (ದುಃಖವನ್ನಾಗಲಿ) ಸಮಂ (ಸಮವಾಗಿ) ಪಶ್ಯತಿ (ನೋಡುವನೋ) ಸಃ ಯೋಗೀ (ಆ ಯೋಗಿಯು) ಪರಮಃ (ಶ್ರೇಷ್ಠನು) [ಎಂದು] ಮತಃ (ಅಭಿಪ್ರಾಯವು).

**೩೨.** ಎಲೈ ಅರ್ಜುನ, ಯಾವನು ಎಲ್ಲಾ ಪ್ರಾಣಿಗಳಲ್ಲಿಯೂ ಸುಖವನ್ನಾಗಲಿ ದುಃಖವನ್ನಾಗಲಿ ತನ್ನಂತೆಯೇ ಸಮವಾಗಿ[1] ನೋಡುವನೋ ಆ ಯೋಗಿಯು ಶ್ರೇಷ್ಠನೆಂದು ನನ್ನ ಅಭಿಪ್ರಾಯ.

[1] ನನಗೆ ಸುಖವು ಹೇಗೆ ಇಷ್ಟವಾಗಿರುವುದೋ ಹಾಗೆಯೇ ಎಲ್ಲಾ ಪ್ರಾಣಿಗಳಿಗೂ ಸುಖವು ಅನುಕೂಲವಾಗಿರುವುದು. ನನಗೆ ದುಃಖವು ಹೇಗೆ ಪ್ರತಿಕೂಲವೂ ಅನಿಷ್ಟವೂ ಆಗಿರುವುದೋ ಹಾಗೆಯೇ ಸರ್ವಪ್ರಾಣಿಗಳಿಗೂ ದುಃಖವು ಅನಿಷ್ಟವೂ ಪ್ರತಿಕೂಲವೂ ಆಗಿರುತ್ತದೆ.

ಅರ್ಜುನ ಉವಾಚ

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥ ೩೩ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ಮಧುಸೂದನ (ಎಲೈ ಮಧುಸೂದನನೆ) ತ್ವಯಾ (ನಿನ್ನಿಂದ) ಸಾಮ್ಯೇನ (ಸಮತ್ವಭಾವದ ಮೂಲಕ) ಯಃ (ಯಾವ) ಅಯಂ (ಈ) ಯೋಗಃ (ಯೋಗವು) ಪ್ರೋಕ್ತಃ (ಹೇಳಲ್ಪಟ್ಟಿತೋ) ಚಂಚಲತ್ವಾತ್ (ಮನಸ್ಸು ಚಂಚಲವಾದುದರಿಂದ) ಏತಸ್ಯ (ಇದರ) ಸ್ಥಿರಾಂ (ಸ್ಥಿರವಾದ) ಸ್ಥಿತಿಂ (ಸ್ಥಿತಿಯನ್ನು) ಅಹಂ (ನಾನು) ನ ಪಶ್ಯಾಮಿ (ನೋಡುತ್ತಿಲ್ಲ).

ಅರ್ಜುನನು ಹೇಳಿದನು

೩೩. ಎಲೈ ಮಧುಸೂಧನ, ಸಾಮ್ಯದಿಂದ ನೀನು ಯಾವ ಈ ಯೋಗವನ್ನು ಹೇಳಿದೆಯೋ, ಮನಸ್ಸು ಚಂಚಲವಾದುದರಿಂದ ಇದರ ಸ್ಥಿರವಾದ ಸ್ಥಿತಿಯನ್ನು ನಾನು ನೋಡುತ್ತಿಲ್ಲ.

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪ ॥**

ಕೃಷ್ಣ (ಎಲೈ ಕೃಷ್ಣನೆ) ಮನಃ (ಮನಸ್ಸು) ಚಂಚಲಂ ಹಿ (ಚಂಚಲವಾದದ್ದು) ಪ್ರಮಾಥಿ (ಕ್ಷೋಭೆಯನ್ನುಂಟುಮಾಡುವ ಸ್ವಭಾವವುಳ್ಳದ್ದು) ಬಲವತ್ (ಬಲವುಳ್ಳದ್ದು) ದೃಢಂ (ದೃಢವಾದದ್ದು) ತಸ್ಯ (ಅದರ) ನಿಗ್ರಹಂ (ನಿಗ್ರಹವು) ವಾಯೋಃ ಇವ (ವಾಯುವಿನಂತೆ) ಸುದುಷ್ಕರಂ (ಅತಿ ಕಷ್ಟವೆಂದು) ಅಹಂ (ನಾನು) ಮನ್ಯೇ (ತಿಳಿಯುತ್ತೇನೆ).

೩೪. ಎಲೈ ಕೃಷ್ಣ, ಮನಸ್ಸು ಚಂಚಲವಾದದ್ದು, ಕ್ಷೋಭೆಯನ್ನುಂಟುಮಾಡುವ ಸ್ವಭಾವವುಳ್ಳದ್ದು, ಬಲವುಳ್ಳದ್ದು ಮತ್ತು ದೃಢವಾದದ್ದು; ಅದರ ನಿಗ್ರಹವು ವಾಯುವಿನಂತೆ ಅತ್ಯಂತ ಕಷ್ಟವೆಂದು ನಾನು ತಿಳಿಯುತ್ತೇನೆ.

ಶ್ರೀಭಗವಾನ್ ಉವಾಚ

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಮಹಾಬಾಹೋ (ಎಲೈ ಮಹಾಬಾಹುವೆ) ಮನಃ (ಮನಸ್ಸು) ದುರ್ನಿಗ್ರಹಂ (ದುರ್ನಿಗ್ರಹವೂ) ಚಲಂ (ಚಂಚಲವೂ) [ಎಂಬುದು] ಅಸಂಶಯಂ (ನಿಸ್ಸಂಶಯವು) ತು (ಆದರೆ) ಕೌಂತೇಯ (ಎಲೈ ಅರ್ಜುನನೆ) ಅಭ್ಯಾಸೇನ (ಅಭ್ಯಾಸದಿಂದಲೂ) ವೈರಾಗ್ಯೇಣ ಚ (ಮತ್ತು ವೈರಾಗ್ಯದಿಂದಲೂ) ಗೃಹ್ಯತೇ (ನಿಗ್ರಹಿಸಲ್ಪಡುತ್ತದೆ).

ಶ್ರೀಕೃಷ್ಣನು ಹೇಳಿದನು

೩೫. ಎಲೈ ಮಹಾಬಾಹುವೆ, ಮನಸ್ಸು ದುರ್ನಿಗ್ರಹವಾದದ್ದು ಮತ್ತು ಚಂಚಲವಾದದ್ದು ಎಂಬುದು ನಿಸ್ಸಂಶಯವು; ಎಲೈ ಅರ್ಜುನ, ಅಭ್ಯಾಸದಿಂದಲೂ ಮತ್ತು ವೈರಾಗ್ಯದಿಂದಲೂ ಇದನ್ನು ನಿಗ್ರಹಿಸಬಹುದು.

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬ ॥**

ಅಸಂಯತಾತ್ಮನಾ (ಮನಸ್ಸನ್ನು ನಿಗ್ರಹಿಸದವನಿಗೆ) ಯೋಗಃ (ಯೋಗವು) ದುಷ್ಪ್ರಾಪಃ ಇತಿ (ದುಷ್ಪ್ರಾಪ್ಯವು ಎಂದು) ಮೇ (ನನ್ನ) ಮತಿಃ (ಅಭಿಪ್ರಾಯವು) ತು (ಆದರೆ) ಯತತಾ (ಯತ್ನಶೀಲನಾದ) ವಶ್ಯಾತ್ಮನಾ (ಜಿತೇಂದ್ರಿಯನಿಂದ) ಉಪಾಯತಃ (ಉಪಾಯದ ಮೂಲಕ) ಅವಾಪ್ತುಂ (ಯೋಗವನ್ನು ಹೊಂದಲು) ಶಕ್ಯಃ (ಸಾಧ್ಯವು).

೩೬. ಮನಸ್ಸನ್ನು ನಿಗ್ರಹಿಸದವನಿಗೆ ಯೋಗವು ದುಷ್ಪ್ರಾಪ್ಯವೆಂದು ನನ್ನ ಅಭಿಪ್ರಾಯವು; ಆದರೆ ಯತ್ನಶೀಲನಾದ ಜಿತೇಂದ್ರಿಯನಿಗೆ (ಮೇಲೆ ಹೇಳಿರುವ ಉಪಾಯದಿಂದ) ಇದನ್ನು ಹೊಂದಲು ಸಾಧ್ಯವು.

ಅರ್ಜುನ ಉವಾಚ

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ಕೃಷ್ಣ (ಎಲೈ ಕೃಷ್ಣನೆ) ಶ್ರದ್ಧಯಾ ಉಪೇತಃ (ಶ್ರದ್ಧೆಯಿಂದ ಕೂಡಿದವನು) ಅಯತಿಃ (ಯತ್ನಹೀನನು) ಯೋಗಾತ್ (ಯೋಗದಿಂದ) ಚಲಿತಮಾನಸಃ (ಚಲಿಸಲ್ಪಟ್ಟ ಮನಸ್ಸುಳ್ಳವನು) ಯೋಗಸಂಸಿದ್ಧಿಂ (ಯೋಗಸಿದ್ಧಿಯನ್ನು) ಅಪ್ರಾಪ್ಯ (ಪಡೆಯದೆ) ಕಾಂ (ಯಾವ) ಗತಿಂ (ಗತಿಯನ್ನು) ಗಚ್ಛತಿ (ಹೊಂದುತ್ತಾನೆ).

ಅರ್ಜುನನು ಹೇಳಿದನು

೩೭. ಎಲೈ ಕೃಷ್ಣನೆ, ಶ್ರದ್ಧಾಯುಕ್ತನಾಗಿದ್ದರೂ, ಪ್ರಯತ್ನವನ್ನು ಮಾಡದೆ ಇರುವವನೂ, ಯೋಗದಿಂದ ಚಲಿಸಲ್ಪಟ್ಟ ಮನಸ್ಸುಳ್ಳವನೂ ಆದ ಪುರುಷನು ಯೋಗಸಿದ್ಧಿಯನ್ನು ಪಡೆಯದೆ ಯಾವ ಗತಿಯನ್ನು ಹೊಂದುತ್ತಾನೆ?

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥ ೩೮ ॥**

ಮಹಾಬಾಹೋ (ಎಲೈ ಮಹಾಬಾಹುವೆ) ಬ್ರಹ್ಮಣಃ (ಬ್ರಹ್ಮಪ್ರಾಪ್ತಿಯ) ಪಥಿ (ಮಾರ್ಗದಲ್ಲಿ) ವಿಮೂಢಃ (ಮುಗ್ಧನಾದವನು) ಉಭಯ-ವಿಭ್ರಷ್ಟಃ (ಎರಡು ಮಾರ್ಗಗಳಿಂದಲೂ ಭ್ರಷ್ಟನಾದವನು) ಅಪ್ರತಿಷ್ಠಃ (ಆಶ್ರಯವಿಲ್ಲದವನು) ಛಿನ್ನಾಭ್ರಂ ಇವ (ತುಂಡಾದ ಮೇಘದಂತೆ) ಕಚ್ಚಿತ್ ನ ನಶ್ಯತಿ (ನಾಶವಾಗುವುದಿಲ್ಲವೆ).

೩೮. ಎಲೈ ಮಹಾಬಾಹುವೆ, ಬ್ರಹ್ಮಪ್ರಾಪ್ತಿಯ ಮಾರ್ಗದಲ್ಲಿ ಮುಗ್ಧನೂ, ಉಭಯಭ್ರಷ್ಟನೂ,[1] ಆಶ್ರಯವಿಲ್ಲದವನೂ (ಆದ ಪುರುಷನು) ತುಂಡಾದ ಮೇಘದಂತೆ[2] ನಾಶವಾಗುವುದಿಲ್ಲವೆ?

[1] ಕರ್ಮಮಾರ್ಗ ಯೋಗಮಾರ್ಗ—ಈ ಎರಡೂ ಮಾರ್ಗಗಳಿಂದ ಭ್ರಷ್ಟನಾದವನು.

[2] ಒಂದು ದೊಡ್ಡ ಮೇಘದಿಂದ ಅಗಲಿದ ತುಂಡು ಇನ್ನೊಂದು ದೊಡ್ಡ ಮೇಘವನ್ನು ಸೇರದೆ ಮಧ್ಯದಲ್ಲಿ ನಾಶವಾಗುವ ಹಾಗೆ.

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯ ॥**

ಕೃಷ್ಣ (ಎಲೈ ಕೃಷ್ಣನೆ) ಮೇ (ನನ್ನ) ಏತತ್ ಸಂಶಯಂ (ಈ ಸಂಶಯವನ್ನು) ಅಶೇಷತಃ (ನಿಶ್ಶೇಷವಾಗಿ) ಛೇತ್ತುಂ (ಕತ್ತರಿಸಲು, ಹೋಗಲಾಡಿಸಲು) ಅರ್ಹಸಿ (ಅರ್ಹನಾಗಿದ್ದೀಯೆ) ಹಿ (ಏಕೆಂದರೆ) ಅಸ್ಯ ಸಂಶಯಸ್ಯ (ಈ ಸಂಶಯವನ್ನು) ಛೇತ್ತಾ (ಹೋಗಲಾಡಿಸುವವನು) ತ್ವತ್ ಅನ್ಯಃ (ನಿನಗಿಂತ ಬೇರೆಯಾದವನು) ನ ಉಪಪದ್ಯತೇ (ಇರುವುದಿಲ್ಲ, ಸಂಭವಿಸುವುದಿಲ್ಲ).

೩೯. ಎಲೈ ಕೃಷ್ಣ, ಈ ನನ್ನ ಸಂಶಯವನ್ನು ನಿಶ್ಶೇಷವಾಗಿ ಹೋಗಲಾಡಿಸಲು ನೀನು ಅರ್ಹನು; ನಿನ್ನನ್ನು ಬಿಟ್ಟರೆ ಈ ಸಂಶಯವನ್ನು ಹೋಗಲಾಡಿಸುವವನು ಬೇರೆ ಯಾವನೂ ಇರುವುದಿಲ್ಲ.

ಶ್ರೀಭಗವಾನ್ ಉವಾಚ

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೪೦ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಪಾರ್ಥ (ಎಲೈ ಅರ್ಜುನನೆ) ತಸ್ಯ (ಯೋಗಭ್ರಷ್ಟನ) ವಿನಾಶಃ (ವಿನಾಶವು) ಇಹ (ಈ ಲೋಕದಲ್ಲಿ) ನ ವಿದ್ಯತೇ (ಇರುವುದಿಲ್ಲ) ಅಮುತ್ರ ಏವ (ಪರಲೋಕದಲ್ಲಿಯೂ) ನ (ಇಲ್ಲ) ತಾತ

(ವತ್ಸನೆ) ಹಿ (ಏಕೆಂದರೆ) ಕಲ್ಯಾಣಕೃತ್ ಕಶ್ಚಿತ್ (ಕಲ್ಯಾಣಕಾರ್ಯಗಳನ್ನು ಮಾಡುವ ಯಾವನೂ) ದುರ್ಗತಿಂ (ಅಧೋಗತಿಯನ್ನು) ನ ಗಚ್ಛತಿ (ಹೊಂದುವುದಿಲ್ಲ).

ಶ್ರೀಕೃಷ್ಣನು ಹೇಳಿದನು

೪೦. ಎಲೈ ಅರ್ಜುನ, ಯೋಗಭ್ರಷ್ಟನಿಗೆ ಈ ಲೋಕದಲ್ಲಿ ವಿನಾಶವಿಲ್ಲ, ಪರಲೋಕದಲ್ಲಿಯೂ ಇಲ್ಲ; ಏಕೆಂದರೆ ಕಲ್ಯಾಣಕಾರ್ಯಗಳನ್ನು ಮಾಡುವ ಯಾವನೂ ಅಧೋಗತಿಯನ್ನು ಹೊಂದುವುದಿಲ್ಲ.

**ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥೪೧॥**

ಯೋಗಭ್ರಷ್ಟಃ (ಯೋಗಭ್ರಷ್ಟನು) ಪುಣ್ಯಕೃತಾಂ (ಪುಣ್ಯಶಾಲಿಗಳ) ಲೋಕಾನ್ (ಲೋಕಗಳನ್ನು) ಪ್ರಾಪ್ಯ (ಹೊಂದಿ) ಶಾಶ್ವತೀಃ ಸಮಾಃ (ಅನೇಕ ವರ್ಷಗಳ ವರೆಗೆ) ಉಷಿತ್ವಾ (ವಾಸಮಾಡಿ) ಶುಚೀನಾಂ (ಸದಾಚಾರಶೀಲರ) ಶ್ರೀಮತಾಂ (ಶ್ರೀಮಂತರ) ಗೇಹೇ (ಮನೆಯಲ್ಲಿ) ಅಭಿಜಾಯತೇ (ಹುಟ್ಟುವನು).

೪೧. ಯೋಗಭ್ರಷ್ಟನು ಪುಣ್ಯಶಾಲಿಗಳ ಲೋಕಗಳನ್ನು ಹೊಂದಿ, ಅಲ್ಲಿ ಅನೇಕ ವರ್ಷಗಳ ವರೆಗೂ ವಾಸವಾಗಿದ್ದು, ಅನಂತರ ಸದಾಚಾರಶೀಲರೂ ಶ್ರೀಮಂತರೂ ಆಗಿರುವವರ ಮನೆಯಲ್ಲಿ ಹುಟ್ಟುವನು.

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨ ॥**

ಅಥವಾ (ಅಥವಾ) ಧೀಮತಾಂ (ಧೀಮಂತರಾದ) ಯೋಗಿನಾಂ (ಯೋಗಿಗಳ) ಕುಲೇ ಏವ (ಕುಲದಲ್ಲಿಯೇ) ಭವತಿ (ಹುಟ್ಟುತ್ತಾನೆ) ಈದೃಶಂ (ಇಂತಹ) ಯತ್ (ಯಾವ) ಜನ್ಮ (ಜನ್ಮವು) ಏತತ್ (ಇದು) ಲೋಕೇ (ಲೋಕದಲ್ಲಿ) ದುರ್ಲಭತರಂ (ದುರ್ಲಭತರವಾದದ್ದು).

೪೨. ಅಥವಾ ಧೀಮಂತರಾದ ಯೋಗಿಗಳ ಕುಲದಲ್ಲಿಯೇ ಅವನು ಹುಟ್ಟುವನು; ಇಂತಹ ಈ ಜನ್ಮವು ಲೋಕದಲ್ಲಿ ದುರ್ಲಭತರವಾದದ್ದು.

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩ ॥**

ಕುರುನಂದನ (ಎಲೈ ಕುರುನಂದನನೆ) ತತ್ರ (ಅಲ್ಲಿ) ಪೌರ್ವದೇಹಿಕಂ (ಪೂರ್ವ ಜನ್ಮಸಂಬಂಧವಾದ) ತಂ ಬುದ್ಧಿಸಂಯೋಗಂ (ಆ ಬುದ್ಧಿಸಂಯೋಗವನ್ನು) ಲಭತೇ

(ಹೊಂದುತ್ತಾನೆ) ತತಃ (ಆ ಮೇಲೆ) ಸಂಸಿದ್ಧೌ ಚ (ಸಂಸಿದ್ಧಿಗೋಸ್ಕರ) ಭೂಯಃ (ಅಧಿಕವಾಗಿ) ಯತತೇ (ಪ್ರಯತ್ನಮಾಡುತ್ತಾನೆ).

**೪೩.** ಎಲೈ ಕುರುನಂದನನೆ, ಅಲ್ಲಿ[1] ಪೂರ್ವಜನ್ಮಸಂಬಂಧವಾದ ಬುದ್ಧಿಸಂಯೋಗವನ್ನು[2] ಹೊಂದುತ್ತಾನೆ; ಆ ಮೇಲೆ ಸಂಸಿದ್ಧಿಗಾಗಿ ಅಧಿಕ ಪ್ರಯತ್ನಮಾಡುತ್ತಾನೆ.

1 ಹೊಸದಾಗಿ ಪ್ರಾಪ್ತವಾದ ಜನ್ಮದಲ್ಲಿ.

2 ಯೋಗಪರವಾದ ಬುದ್ಧಿಯ ಅಥವಾ ಜ್ಞಾನದ ಸಂಬಂಧ.

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪ ॥**

ತೇನ ಪೂರ್ವಾಭ್ಯಾಸೇನ ಏವ (ಆ ಪೂರ್ವಾಭ್ಯಾಸದಿಂದಲೇ) ಅವಶಃ ಅಪಿ (ಅಸ್ವತಂತ್ರನಾಗಿ) ಸಃ (ಅವನು) ಹ್ರಿಯತೇ (ಸೆಳೆಯಲ್ಪಡುತ್ತಾನೆ) ಯೋಗಸ್ಯ (ಯೋಗದ) ಜಿಜ್ಞಾಸುಃ ಅಪಿ (ಜಿಜ್ಞಾಸುವಾಗಿದ್ದರೂ) ಶಬ್ದಬ್ರಹ್ಮ (ಶಬ್ದಬ್ರಹ್ಮವನ್ನು) ಅತಿವರ್ತತೇ (ಮೀರುತ್ತಾನೆ).

**೪೪.** ಆ ಪೂರ್ವಾಭ್ಯಾಸದಿಂದ ಅಸ್ವತಂತ್ರನಾಗಿ ಅವನು ಸೆಳೆಯಲ್ಪಡುತ್ತಾನೆ; (ಅವನು) ಯೋಗದ ಜಿಜ್ಞಾಸುವಾಗಿದ್ದರೂ ಶಬ್ದಬ್ರಹ್ಮವನ್ನು[1] ಮೀರುತ್ತಾನೆ.

1 ವೇದೋಕ್ತವಾದ ಕರ್ಮಗಳ ಫಲವನ್ನು ತಿರಸ್ಕರಿಸುತ್ತಾನೆ (ಶ್ರೀಶಂಕರ); ಪ್ರಕೃತಿಯನ್ನು ದಾಟುತ್ತಾನೆ (ಶ್ರೀರಾಮಾನುಜ).

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ೪೫ ॥**

ತು (ಆದರೆ) ಪ್ರಯತ್ನಾತ್ (ಪ್ರಯತ್ನದಿಂದ) ಯತಮಾನಃ (ಅಭ್ಯಾಸಮಾಡುತ್ತಿರುವವನೂ) ಸಂಶುದ್ಧಕಿಲ್ಬಿಷಃ (ಕಿಲ್ಬಿಷರಹಿತನೂ) ಅನೇಕ-ಜನ್ಮ-ಸಂಸಿದ್ಧಃ (ಅನೇಕ ಜನ್ಮಗಳಿಂದ ಸಿದ್ಧಿಯನ್ನು ಹೊಂದಿದವನೂ) [ಆದ] ಯೋಗೀ (ಯೋಗಿಯು) ತತಃ (ಅನಂತರ) ಪರಾಂ ಗತಿಂ (ಪರಮಗತಿಯನ್ನು) ಯಾತಿ (ಹೊಂದುತ್ತಾನೆ).

**೪೫.** ಪ್ರಯತ್ನದಿಂದ ಅಭ್ಯಾಸಮಾಡುತ್ತಿರುವವನೂ, ಕಿಲ್ಬಿಷರಹಿತನೂ, ಅನೇಕ ಜನ್ಮಗಳಿಂದ ಸಿದ್ಧಿಯನ್ನು ಹೊಂದಿದವನೂ ಆದ ಯೋಗಿಯು ಅನಂತರ ಪರಮಗತಿಯನ್ನು ಹೊಂದುವನು.

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥ ೪೬ ॥**

ಯೋಗೀ (ಯೋಗಿಯು) ತಪಸ್ವಿಭ್ಯಃ (ತಪಸ್ವಿಗಳಿಗಿಂತಲೂ) ಅಧಿಕಃ (ಶ್ರೇಷ್ಠನು) ಜ್ಞಾನಿಭ್ಯಃ ಅಪಿ (ಜ್ಞಾನಿಗಳಿಗಿಂತಲೂ) ಅಧಿಕಃ (ಶ್ರೇಷ್ಠನು) ಯೋಗೀ (ಯೋಗಿಯು) ಕರ್ಮಿಭ್ಯಃ ಚ (ಕರ್ಮಿಗಳಿಗಿಂತಲೂ) ಅಧಿಕಃ (ಶ್ರೇಷ್ಠನು) [ಎಂದು] ಮತಃ (ಅಭಿಪ್ರಾಯವು) ತಸ್ಮಾತ್ (ಆದುದರಿಂದ) ಅರ್ಜುನ (ಎಲೈ ಅರ್ಜುನನೆ) ಯೋಗೀ ಭವ (ಯೋಗಿಯಾಗು).

**೪೬.** ತಪಸ್ವಿಗಳಿಗಿಂತಲೂ,[1] ಜ್ಞಾನಿಗಳಿಗಿಂತಲೂ,[2] ಕರ್ಮಿಗಳಿಗಿಂತಲೂ[3] ಯೋಗಿಯು ಶ್ರೇಷ್ಠನೆಂದು ನನ್ನ ಅಭಿಪ್ರಾಯವು; ಆದುದರಿಂದ ಎಲೈ ಅರ್ಜುನ, ಯೋಗಿಯಾಗು.

[1] ಕೇವಲ ಫಲಾಪೇಕ್ಷೆಯಿಂದ ತಪಸ್ಸನ್ನು ಮಾಡುವವರಿಗಿಂತಲೂ.
[2] ಶಾಸ್ತ್ರಾರ್ಥವನ್ನು ತಿಳಿದಿರುವವರಿಗಿಂತಲೂ.
[3] ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡುವವರಿಗಿಂತಲೂ.

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥ ೪೭ ॥**

ಯಃ (ಯಾವನು) ಶ್ರದ್ಧಾವಾನ್ (ಶ್ರದ್ಧಾವಂತನೋ) ಮದ್ಗತೇನ (ನನ್ನನ್ನು ಹೊಂದಿರುವ) ಅಂತರಾತ್ಮನಾ (ಮನಸ್ಸಿನಿಂದ) ಮಾಂ (ನನ್ನನ್ನು) ಭಜತೇ (ಭಜಿಸುವನೋ) ಸಃ (ಅವನು) ಸರ್ವೇಷಾಂ (ಎಲ್ಲಾ) ಯೋಗಿನಾಂ ಅಪಿ (ಯೋಗಿಗಳಲ್ಲಿಯೂ) ಯುಕ್ತತಮಃ (ಅತ್ಯಂತ ಶ್ರೇಷ್ಠನು) [ಎಂದು] ಮೇ (ನನ್ನ) ಮತಃ (ಅಭಿಪ್ರಾಯವು).

**೪೭.** ಯಾವನು ಶ್ರದ್ಧಾವಂತನೋ ಮತ್ತು ನನ್ನನ್ನು ಹೊಂದಿರುವ ಮನಸ್ಸಿನಿಂದ ನನ್ನನ್ನು ಭಜಿಸುವನೋ, ಅವನು ಎಲ್ಲಾ ಯೋಗಿಗಳಿಂತಲೂ ಶ್ರೇಷ್ಠನೆಂದು ನನ್ನ ಅಭಿಪ್ರಾಯವು.

**ಇತಿ ಧ್ಯಾನಯೋಗೋ ನಾಮ ಷಷ್ಠೋಽಧ್ಯಾಯಃ ।**

ಧ್ಯಾನಯೋಗವೆಂಬ ಆರನೆಯ ಅಧ್ಯಾಯವು ಮುಗಿಯಿತು.

# ಏಳನೆಯ ಅಧ್ಯಾಯ

## ಜ್ಞಾನವಿಜ್ಞಾನಯೋಗ

ಶ್ರೀಭಗವಾನ್ ಉವಾಚ

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು) — ಪಾರ್ಥ (ಎಲೈ ಅರ್ಜುನನೆ) ಮಯಿ (ನನ್ನಲ್ಲಿ) ಆಸಕ್ತಮನಾಃ (ಆಸಕ್ತವಾದ ಮನಸ್ಸುಳ್ಳವನಾಗಿ) ಮದಾಶ್ರಯಃ (ನನ್ನನ್ನೇ ಆಶ್ರಯಿಸಿದವನಾಗಿ) ಯೋಗಂ (ಯೋಗವನ್ನು) ಯುಂ-ಜನ್ (ಮಾಡುತ್ತಾ) ಮಾಂ (ನನ್ನನ್ನು) ಸಮಗ್ರಂ (ಪೂರ್ಣವಾಗಿ) ಅಸಂಶಯಂ (ನಿಸ್ಸಂಶಯವಾಗಿ) ಯಥಾ (ಹೇಗೆ) ಜ್ಞಾಸ್ಯಸಿ (ತಿಳಿದುಕೊಳ್ಳಬಹುದೋ) ತತ್ (ಅದನ್ನು) ಶೃಣು (ಕೇಳು).

ಶ್ರೀಕೃಷ್ಣನು ಹೇಳಿದನು

೧. ಎಲೈ ಅರ್ಜುನ, ನನ್ನಲ್ಲಿಯೇ ಆಸಕ್ತವಾದ ಮನಸ್ಸುಳ್ಳವನಾಗಿ, ನನ್ನನ್ನೇ ಆಶ್ರಯಿಸಿದವನಾಗಿ, ಯೋಗವನ್ನು ಮಾಡುತ್ತಾ, ನನ್ನನ್ನು ನಿಸ್ಸಂಶಯವಾಗಿಯೂ ಸಂಪೂರ್ಣವಾಗಿಯೂ[1] ಹೇಗೆ ತಿಳಿದುಕೊಳ್ಳಬಹುದೋ ಅದನ್ನು ಕೇಳು.

[1] ವಿಭೂತಿ, ಬಲ, ಶಕ್ತಿ, ಐಶ್ವರ್ಯ ಮುಂತಾದ ಗುಣಗಳಿಂದ ಸಂಪನ್ನನಾದ ನನ್ನನ್ನು.

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥ ೨ ॥**

ಅಹಂ (ನಾನು) ತೇ (ನಿನಗೆ) ಇದಂ (ಈ) ಸವಿಜ್ಞಾನಂ (ವಿಜ್ಞಾನದಿಂದ ಕೂಡಿದ) ಜ್ಞಾನಂ (ಜ್ಞಾನವನ್ನು) ಅಶೇಷತಃ (ನಿಶ್ಶೇಷವಾಗಿ) ವಕ್ಷ್ಯಾಮಿ (ಹೇಳುತ್ತೇನೆ) ಯತ್ ಜ್ಞಾತ್ವಾ (ಯಾವುದನ್ನು ತಿಳಿದುಕೊಂಡು) ಇಹ (ಇಲ್ಲಿ) ಭೂಯಃ (ಪುನಃ) ಅನ್ಯತ್ ಜ್ಞಾತವ್ಯಂ (ಬೇರೆ ತಿಳಿಯಬೇಕಾದದ್ದು) ನ ಅವಶಿಷ್ಯತೇ (ಉಳಿಯುವುದಿಲ್ಲ).

೨. ಯಾವುದನ್ನು ತಿಳಿದುಕೊಂಡ ಮೇಲೆ ಪುನಃ ತಿಳಿಯಬೇಕಾದದ್ದು ಇರುವುದಿಲ್ಲವೋ ಅಂತಹ ವಿಜ್ಞಾನಸಹಿತವಾದ[1] ಈ ಜ್ಞಾನವನ್ನು ನಿನಗೆ ನಾನು ನಿಶ್ಶೇಷವಾಗಿ ಹೇಳುತ್ತೇನೆ.

[1] ಸ್ವಾನುಭವದಿಂದ ಕೂಡಿದ ಜ್ಞಾನ.

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥**

ಮನುಷ್ಯಾಣಾಂ ಸಹಸ್ರೇಷು (ಸಾವಿರ ಮನುಷ್ಯರಲ್ಲಿ) ಕಶ್ಚಿತ್ (ಯಾವನೋ ಒಬ್ಬನು) ಸಿದ್ಧಯೇ (ಸಿದ್ಧಿಗಾಗಿ) ಯತತಿ (ಪ್ರಯತ್ನಿಸುತ್ತಾನೆ) ಯತತಾಂ (ಯತ್ನ ಮಾಡುವ) ಸಿದ್ಧಾನಾಂ ಅಪಿ (ಸಿದ್ಧರಲ್ಲಿಯೂ ಕೂಡ) ಕಶ್ಚಿತ್ (ಯಾವನೋ ಒಬ್ಬನು) ಮಾಂ (ನನ್ನನ್ನು) ತತ್ತ್ವತಃ (ಯಥಾರ್ಥವಾಗಿ) ವೇತ್ತಿ (ತಿಳಿಯುತ್ತಾನೆ).

೩. ಸಾವಿರ ಮನುಷ್ಯರಲ್ಲಿ ಯಾವನೋ ಒಬ್ಬನು ಸಿದ್ಧಿಗಾಗಿ ಪ್ರಯತ್ನಿಸುತ್ತಾನೆ. ಯತ್ನಮಾಡುವ ಸಿದ್ಧರಲ್ಲಿಯೂ ಕೂಡ ಯಾವನೋ ಒಬ್ಬನು ನನ್ನನ್ನು ಯಥಾರ್ಥವಾಗಿ ತಿಳಿಯುತ್ತಾನೆ.

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥**

ಭೂಮಿಃ (ಭೂಮಿ) ಆಪಃ (ನೀರು) ಅನಲಃ (ಅಗ್ನಿ) ವಾಯುಃ (ವಾಯು) ಖಂ (ಆಕಾಶ) ಮನಃ (ಮನಸ್ಸು) ಬುದ್ಧಿಃ (ಬುದ್ಧಿ) ಅಹಂಕಾರ ಏವ ಚ (ಮತ್ತು ಅಹಂಕಾರ) ಇತಿ (ಎಂದು) ಇಯಂ ಮೇ (ಈ ನನ್ನ) ಅಷ್ಟಧಾ (ಎಂಟು ವಿಧವಾಗಿ) ಭಿನ್ನಾ (ಭಿನ್ನವಾದ) ಪ್ರಕೃತಿಃ (ಪ್ರಕೃತಿ).

೪. ಭೂಮಿ,[1] ನೀರು, ಅಗ್ನಿ, ವಾಯು, ಆಕಾಶ, ಮನಸ್ಸು,[2] ಬುದ್ಧಿ[3] ಮತ್ತು ಅಹಂಕಾರ[4] ಎಂದು ಈ ನನ್ನ ಪ್ರಕೃತಿ ಎಂಟು ವಿಧವಾಗಿ ಭಿನ್ನವಾಗಿರುತ್ತದೆ.

[1] ಭೂಮಿ, ನೀರು, ಅಗ್ನಿ, ವಾಯು, ಆಕಾಶ — ಈ ಐದು ತನ್ಮಾತ್ರೆಗಳು, ಸ್ಥೂಲ ಭೂತಗಳಲ್ಲ.

[2] ಮನಸ್ಸಿಗೆ ಕಾರಣವಾದ ಅಹಂಕಾರ.

[3] ಅಹಂಕಾರಕ್ಕೆ ಕಾರಣವಾದ ಮಹತ್ತತ್ತ್ವ.

[4] ಅವಿದ್ಯಾಯುಕ್ತವಾದ ಅವ್ಯಕ್ತ ಎಂದರೆ ಜಗತ್ತಿನ ಮೂಲಕಾರಣ.

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ**
**ಧಾರ್ಯತೇ ಜಗತ್ ॥ ೫ ॥**

ಮಹಾಬಾಹೋ (ಎಲೈ ಮಹಾಬಾಹುವೆ) ಇಯಂ (ಇದು) ಅಪರಾ (ಅಪರಾ ಅಥವಾ ನಿಕೃಷ್ಟವಾದ ಪ್ರಕೃತಿ) ತು (ಆದರೆ) ಇತಃ (ಇದಕ್ಕಿಂತಲೂ) ಅನ್ಯಾಂ (ಬೇರೆಯಾದ) ಜೀವಭೂತಾಂ (ಜೀವರೂಪವಾದ) ಮೇ (ನನ್ನ) ಪರಾ (ಪರಾ ಅಥವಾ ಶ್ರೇಷ್ಠವಾದ) ಪ್ರಕೃತಿಂ (ಪ್ರಕೃತಿಯನ್ನು) ವಿದ್ಧಿ (ತಿಳಿದುಕೊ) ಯಯಾ (ಯಾವುದರಿಂದ) ಇದಂ ಜಗತ್ (ಈ ಜಗತ್ತು) ಧಾರ್ಯತೇ (ಧರಿಸಲ್ಪಟ್ಟಿರುವುದೋ).

**೫.** ಎಲೈ ಮಹಾಬಾಹು, ಇದು ಅಪರಾ (ಪ್ರಕೃತಿ); ಇದಕ್ಕಿಂತಲೂ ಭಿನ್ನವೂ ಜೀವರೂಪವೂ ಆದ ನನ್ನ ಪರಾ ಪ್ರಕೃತಿಯನ್ನು[1] ತಿಳಿದುಕೊ. ಅದರಿಂದ ಈ ಜಗತ್ತು ಧರಿಸಲ್ಪಟ್ಟಿರುವುದು.

[1] ಚಿದ್ರೂಪವಾದ ಪರಾ ಪ್ರಕೃತಿ ಜಡ ಪ್ರಕೃತಿಗಿಂತ ವಿಲಕ್ಷಣವಾದದ್ದು.

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥**

ಸರ್ವಾಣಿ ಭೂತಾನಿ (ಸಮಸ್ತ ಭೂತಗಳು) ಏತದ್ಯೋನೀನಿ (ಈ ಪ್ರಕೃತಿದ್ವಯದಿಂದ ಉತ್ಪನ್ನವಾಗಿವೆ) ಇತಿ (ಎಂದು) ಉಪಧಾರಯ (ತಿಳಿದುಕೊ) ಅಹಂ (ನಾನು) ಕೃತ್ಸ್ನಸ್ಯ (ಸಮಸ್ತ) ಜಗತಃ (ಜಗತ್ತಿನ) ಪ್ರಭವಃ (ಕಾರಣನು) ತಥಾ (ಹಾಗೆಯೇ) ಪ್ರಲಯಃ (ಪ್ರಲಯನೂ ಆಗಿರುವೆನು).

**೬.** ಸರ್ವಭೂತಗಳೂ ನನ್ನ ಎರಡು ಪ್ರಕೃತಿಗಳಿಂದ ಉಂಟಾಗಿವೆಯೆಂದು ತಿಳಿದುಕೊ. ಆದುದರಿಂದ ನಾನು ಸಮಸ್ತ ಜಗತ್ತಿನ ಸೃಷ್ಟಿಲಯಗಳಿಗೆ ಕಾರಣನಾಗಿರುವೆನು.

**ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥**

ಧನಂಜಯ (ಎಲೈ ಅರ್ಜುನನೆ) ಮತ್ತಃ (ನನಗಿಂತ) ಪರತರಂ (ಶ್ರೇಷ್ಠತರವಾದ) ಅನ್ಯತ್ ಕಿಂಚಿತ್ (ಬೇರೆ ಯಾವುದೂ) ನ ಅಸ್ತಿ (ಇರುವುದಿಲ್ಲ) ಇದಂ ಸರ್ವಂ (ಇದೆಲ್ಲವೂ) ಸೂತ್ರೇ (ದಾರದಲ್ಲಿ) ಮಣಿಗಣಾ ಇವ (ಮಣಿಗಳ ಗುಂಪಿನಂತೆ) ಮಯಿ (ನನ್ನಲ್ಲಿ) ಪ್ರೋತಂ (ಪೋಣಿಸಲ್ಪಟ್ಟಿದೆ).

೭. ಎಲೈ ಅರ್ಜುನ, ನನಗಿಂತ ಶ್ರೇಷ್ಠತರವಾದ (ವಸ್ತುವು) ಬೇರೆ ಯಾವುದೂ ಇರುವುದಿಲ್ಲ. ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟ ಹಾಗೆ ಇದೆಲ್ಲವೂ ನನ್ನಲ್ಲಿ ಪೋಣಿಸಲ್ಪಟ್ಟಿದೆ.

**ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥**

ಕೌಂತೇಯ (ಎಲೈ ಅರ್ಜುನನೆ) ಅಹಂ (ನಾನು) ಅಪ್ಸು (ನೀರುಗಳಲ್ಲಿ) ರಸಃ (ರಸವು) ಶಶಿ-ಸೂರ್ಯಯೋಃ (ಚಂದ್ರಸೂರ್ಯರಲ್ಲಿ) ಪ್ರಭಾ (ಪ್ರಭೆಯು) ಸರ್ವವೇದೇಷು (ಸರ್ವವೇದಗಳಲ್ಲಿ) ಪ್ರಣವಃ (ಓಂಕಾರವು) ಖೇ (ಆಕಾಶದಲ್ಲಿ) ಶಬ್ದಃ (ಶಬ್ದವು) ನೃಷು (ಪುರುಷರಲ್ಲಿ) ಪೌರುಷಂ (ಪೌರುಷವು) ಅಸ್ಮಿ (ಆಗಿರುವೆನು).

೮. ಎಲೈ ಅರ್ಜುನ, ನಾನು ನೀರುಗಳಲ್ಲಿ ರಸವೂ, ಚಂದ್ರಸೂರ್ಯರಲ್ಲಿ ಪ್ರಭೆಯೂ, ಸರ್ವವೇದಗಳಲ್ಲಿ ಓಂಕಾರವೂ, ಆಕಾಶದಲ್ಲಿ ಶಬ್ದವೂ, ಪುರುಷರಲ್ಲಿ ಪೌರುಷವೂ ಆಗಿದ್ದೇನೆ.

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥**

ಪೃಥಿವ್ಯಾಂ (ಪೃಥ್ವಿಯಲ್ಲಿ) ಪುಣ್ಯಃ (ಪುಣ್ಯವಾದ) ಗಂಧಃ (ಗಂಧವು) ಚ ವಿಭಾವಸೌ (ಮತ್ತು ಅಗ್ನಿಯಲ್ಲಿ) ತೇಜಃ ಅಸ್ಮಿ (ತೇಜಸ್ಸಾಗಿರುವೆನು) ಸರ್ವ-ಭೂತೇಷು (ಸರ್ವಪ್ರಾಣಿಗಳಲ್ಲಿ) ಜೀವನಂ (ಜೀವನವು) ಚ ತಪಸ್ವಿಷು (ಮತ್ತು ತಪಸ್ವಿಗಳಲ್ಲಿ) ತಪಃ (ತಪಸ್ಸು) ಅಸ್ಮಿ (ಆಗಿರುವೆನು).

೯. ನಾನು ಪೃಥ್ವಿಯಲ್ಲಿ ಪರಿಮಳವಾದ ಗಂಧವೂ, ಅಗ್ನಿಯಲ್ಲಿ ತೇಜಸ್ಸೂ, ಸರ್ವಪ್ರಾಣಿಗಳಲ್ಲಿ ಜೀವನವೂ,[1] ತಪಸ್ವಿಗಳಲ್ಲಿ ತಪಸ್ಸೂ ಆಗಿರುವೆನು.

[1] ಯಾವುದರಿಂದ ಸರ್ವಭೂತಗಳು ಬದುಕಿರುವುವೋ ಅದು ಜೀವನವು.

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮ್ ॥ ೧೦ ॥**

ಪಾರ್ಥ (ಎಲೈ ಅರ್ಜುನನೆ) ಸರ್ವಭೂತಾನಾಂ (ಸರ್ವಭೂತಗಳ) [ಉತ್ಪತ್ತಿಗೆ] ಸನಾತನಂ (ಸನಾತನವಾದ) ಬೀಜಂ (ಕಾರಣವೆಂದು) ವಿದ್ಧಿ (ತಿಳಿದುಕೊ) ಬುದ್ಧಿಮತಾಂ (ಬುದ್ಧಿವಂತರ) ಬುದ್ಧಿಃ (ಬುದ್ಧಿಯು) ತೇಜಸ್ವಿನಾಂ (ತೇಜಸ್ವಿಗಳ) ತೇಜಃ (ತೇಜಸ್ಸು) ಅಹಂ (ನಾನು) ಅಸ್ಮಿ (ಆಗಿರುವೆನು).

೧೦. ಎಲೈ ಪಾರ್ಥ, ಸರ್ವಭೂತಗಳ (ಉತ್ಪತ್ತಿಗೆ) ಸನಾತನವಾದ ಕಾರಣವು ನಾನು ಎಂದು ತಿಳಿದುಕೊ; ನಾನು ಬುದ್ಧಿವಂತರ ಬುದ್ಧಿಯೂ, ತೇಜಸ್ವಿಗಳ ತೇಜಸ್ಸೂ ಆಗಿರುವೆನು.

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥**

ಭರತರ್ಷಭ (ಎಲೈ ಭರತಶ್ರೇಷ್ಠನೆ) ಅಹಂ (ನಾನು) ಬಲವತಾಂ (ಬಲವಂತರಲ್ಲಿರುವ) ಕಾಮರಾಗ-ವಿವರ್ಜಿತಂ (ಕಾಮರಾಗರಹಿತವಾದ) ಬಲಂ (ಬಲವು) ಭೂತೇಷು (ಭೂತಗಳಲ್ಲಿರುವ) ಧರ್ಮಾವಿರುದ್ಧಃ (ಧರ್ಮಕ್ಕೆ ವಿರುದ್ಧವಲ್ಲದ) ಕಾಮಃ (ಕಾಮವು) ಅಸ್ಮಿ (ಆಗಿದ್ದೇನೆ).

೧೧. ಎಲೈ ಭರತಶ್ರೇಷ್ಠ, ಬಲವಂತರಲ್ಲಿರುವ ಕಾಮರಾಗಗಳಿಲ್ಲದ[1] ಬಲವೂ, ಭೂತಗಳಲ್ಲಿರುವ ಧರ್ಮವಿರುದ್ಧವಲ್ಲದ ಕಾಮವೂ ಆಗಿರುತ್ತೇನೆ.

[1] ದೂರದ ವಿಷಯಗಳಲ್ಲಿರುವ ತೃಷ್ಣೆಗೆ ಕಾಮವೆಂದು ಹೆಸರು; ಪ್ರಾಪ್ತವಾದ ವಿಷಯಗಳಲ್ಲಿರುವ ಮನಸ್ಸಿನ ರಂಜನೆಯು ರಾಗವು.

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥**

ಯೇ ಚ ಏವ (ಮತ್ತು ಯಾವ) ಸಾತ್ತ್ವಿಕಾಃ (ಸಾತ್ತ್ವಿಕವಾದ) ಭಾವಾಃ (ಭಾವಗಳು) ಯೇ ಚ (ಮತ್ತು ಯಾವ) ರಾಜಸಾಃ (ರಾಜಸಭಾವಗಳು) ತಾಮಸಾಃ (ತಾಮಸಭಾವಗಳು) [ಇವೆಯೋ] ತಾನ್ (ಅವೆಲ್ಲವೂ) ಮತ್ತಃ ಏವ ಇತಿ (ನನ್ನಿಂದಲೇ ಉಂಟಾಗಿವೆಯೆಂದು) ವಿದ್ಧಿ (ತಿಳಿದುಕೊ) ತು (ಆದರೆ) ಅಹಂ (ನಾನು) ನ ತೇಷು (ಅವುಗಳಲ್ಲಿ ಇಲ್ಲ) ತೇ (ಅವು) ಮಯಿ (ನನ್ನಲ್ಲಿ) [ಇವೆ.]

೧೨. ಸಾತ್ತ್ವಿಕವೂ ರಾಜಸವೂ ತಾಮಸವೂ ಆದ ಯಾವ ಯಾವ ಭಾವಗಳಿರುವುವೋ[1] ಅವು ನನ್ನಿಂದಲೇ ಉಂಟಾದವೆಂದು ತಿಳಿ. ಆದರೆ ನಾನು ಅವುಗಳಲ್ಲಿ ಇರುವುದಿಲ್ಲ[2], ಅವು ನನ್ನಲ್ಲಿರುವುವು[3].

[1] ವಸ್ತುಗಳು ಅಥವಾ ಪದಾರ್ಥಗಳು.

[2] ನಾನು ಅವುಗಳ ಅಧೀನನಾಗಿರುವುದಿಲ್ಲ.

[3] ಅವು ನನ್ನ ಅಧೀನವಾಗಿರುತ್ತವೆ.

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥ ೧೩ ॥**

ಏಭಿಃ (ಈ) ತ್ರಿಭಿಃ (ಮೂರು) ಗುಣಮಯೈಃ (ಗುಣಮಯವಾದ) ಭಾವೈಃ (ಭಾವಗಳಿಂದ) ಮೋಹಿತಂ (ಮೋಹಿತವಾದ) ಇದಂ (ಈ) ಸರ್ವಂ ಜಗತ್ (ಸಮಸ್ತ ಜಗತ್ತು) ಏಭ್ಯಃ (ಇವುಗಳಿಗಿಂತ) ಪರಂ (ವಿಲಕ್ಷಣನೂ) ಅವ್ಯಯಂ (ಅವ್ಯಯನೂ) [ಆದ] ಮಾಂ (ನನ್ನನ್ನು) ನ ಅಭಿಜಾನಾತಿ (ತಿಳಿದುಕೊಳ್ಳದೆ ಇರುವುದು).

೧೩. ಗುಣಮಯವಾದ[1] ಈ ಮೂರು ಭಾವಗಳಿಂದ ಮೋಹಿತವಾದ ಈ ಸಮಸ್ತ ಜಗತ್ತು, ಇವುಗಳಿಗಿಂತ ವಿಲಕ್ಷಣನೂ ಅವ್ಯಯನೂ ಆದ ನನ್ನನ್ನು ತಿಳಿದುಕೊಳ್ಳದೆ ಇರುವುದು.

[1] ಗುಣಗಳ ಕಾರ್ಯವಾಗಿರುವ ರಾಗದ್ವೇಷಮೋಹಗಳು.

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ೧೪ ॥**

ಹಿ (ಏಕೆಂದರೆ) ಏಷಾ (ಈ) ಗುಣಮಯೀ (ತ್ರಿಗುಣಮಯವಾದ) ಮಮ (ನನ್ನ) ದೈವೀ ಮಾಯಾ (ದೈವೀ ಮಾಯೆಯು) ದುರತ್ಯಯಾ (ದಾಟಲು ಅಶಕ್ಯವು) ಯೇ (ಯಾರು) ಮಾಂ ಏವ (ನನ್ನನ್ನೇ) ಪ್ರಪದ್ಯಂತೇ (ಆಶ್ರಯಿಸುತ್ತಾರೆಯೋ) ತೇ (ಅವರು) ಏತಾಂ (ಈ) ಮಾಯಾಂ (ಮಾಯೆಯನ್ನು) ತರಂತಿ (ದಾಟುತ್ತಾರೆ).

೧೪. ಈ ತ್ರಿಗುಣಮಯವಾದ ನನ್ನ ದೈವೀ ಮಾಯೆಯನ್ನು ದಾಟಲು ಅಶಕ್ಯವು. ಆದರೆ ನನ್ನನ್ನೇ ಯಾರು ಆಶ್ರಯಿಸುತ್ತಾರೋ ಅವರು ಈ ಮಾಯೆಯನ್ನು ದಾಟುತ್ತಾರೆ.

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥**

ದುಷ್ಕೃತಿನಃ (ದುಷ್ಕೃತಿಗಳೂ) ಮೂಢಾಃ (ಮೂಢರೂ) ಮಾಯಯಾ (ಮಾಯೆಯಿಂದ) ಅಪಹೃತ-ಜ್ಞಾನಾಃ (ಅಪಹರಿಸಲ್ಪಟ್ಟ ಜ್ಞಾನವುಳ್ಳವರೂ) ಆಸುರಂ ಭಾವಂ (ಆಸುರಭಾವವನ್ನು) ಆಶ್ರಿತಾಃ (ಆಶ್ರಯಿಸಿದವರೂ) [ಆದ] ನರಾಧಮಾಃ (ನರಾಧಮರು) ಮಾಂ (ನನ್ನನ್ನು) ನ ಪ್ರಪದ್ಯಂತೇ (ಹೊಂದುವುದಿಲ್ಲ).

೧೫. ದುಷ್ಕೃತಿಗಳೂ ಮೂಢರೂ ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರೂ ಆಸುರಭಾವವನ್ನು ಆಶ್ರಯಿಸಿದವರೂ ಆದ ನರಾಧಮರು ನನ್ನನ್ನು ಹೊಂದುವುದಿಲ್ಲ.

[ಶ್ರೀರಾಮಾನುಜಾಚಾರ್ಯರ ಭಾಷ್ಯದ ಪ್ರಕಾರವಾಗಿ ದುಷ್ಕೃತಿಗಳಲ್ಲಿ ನಾಲ್ಕು ವಿಧ— ಇವರು (1) ಮೂಢರು, (2) ನರಾಧಮರು, (3) ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು, (4) ಆಸುರಭಾವವನ್ನು ಆಶ್ರಯಿಸಿದವರು. ಈ ದುಷ್ಕೃತಿಗಳಲ್ಲಿ ಮೊದಲು ಹೇಳಲ್ಪಟ್ಟವರಿಗಿಂತ ಅನಂತರ ಹೇಳಲ್ಪಟ್ಟವರು ಹೆಚ್ಚು ಪಾಪಿಷ್ಠರು.]

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥**

ಭರತರ್ಷಭ (ಎಲೈ ಭರತಶ್ರೇಷ್ಠನೆ) ಅರ್ಜುನ (ಎಲೈ ಅರ್ಜುನನೆ) ಆರ್ತಃ (ಆರ್ತನು) ಜಿಜ್ಞಾಸುಃ (ಜಿಜ್ಞಾಸು) ಅರ್ಥಾರ್ಥೀ (ಅರ್ಥಾರ್ಥಿ) ಜ್ಞಾನೀ ಚ (ಜ್ಞಾನಿ) [ಎಂಬ] ಚತುರ್ವಿಧಾಃ (ನಾಲ್ಕು ಬಗೆಯಾದ) ಸುಕೃತಿನಃ (ಸುಕೃತಿಗಳಾದ) ಜನಾಃ (ಜನರು) ಮಾಂ (ನನ್ನನ್ನು) ಭಜಂತೇ (ಭಜಿಸುತ್ತಾರೆ).

೧೬. ಎಲೈ ಭರತಶ್ರೇಷ್ಠನಾದ ಅರ್ಜುನ, ಆರ್ತ,[1] ಜಿಜ್ಞಾಸು,[2] ಅರ್ಥಾರ್ಥಿ,[3] ಜ್ಞಾನಿ[4] ಎಂಬ ನಾಲ್ಕು ಬಗೆಯ ಸುಕೃತಿಗಳಾದ ಜನರು ನನ್ನನ್ನು ಭಜಿಸುತ್ತಾರೆ.

1 ಸಂಕಟಕ್ಕೆ ಸಿಕ್ಕಿ ದೀನನಾದವನು.
2 ಭಗವತ್ತತ್ತ್ವವನ್ನು ತಿಳಿದುಕೊಳ್ಳಲು ಇಚ್ಛಿಸುತ್ತಿರುವವನು.
3 ಧನವನ್ನು ಬಯಸುವವನು
4 ವಿಷ್ಣುತತ್ತ್ವವನ್ನು ಬಲ್ಲವನು.

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ ೧೭ ॥**

ತೇಷಾಂ (ಅವರಲ್ಲಿ) ನಿತ್ಯಯುಕ್ತಃ (ನಿತ್ಯಯುಕ್ತನಾದ) ಏಕಭಕ್ತಿಃ (ಏಕಭಕ್ತಿಯುಳ್ಳವನಾದ) ಜ್ಞಾನೀ (ಜ್ಞಾನಿಯು) ವಿಶಿಷ್ಯತೇ (ಶ್ರೇಷ್ಠನು) ಹಿ (ಏಕೆಂದರೆ) ಅಹಂ (ನಾನು) ಜ್ಞಾನಿನಃ (ಜ್ಞಾನಿಗೆ) ಅತ್ಯರ್ಥಂ (ಅತ್ಯಂತ) ಪ್ರಿಯಃ (ಪ್ರಿಯನು) ಸ ಚ (ಮತ್ತು ಅವನು) ಮಮ (ನನಗೆ) ಪ್ರಿಯಃ (ಪ್ರಿಯನು).

೧೭. ಅವರಲ್ಲಿ ನಿತ್ಯಯುಕ್ತನೂ[1] ಏಕಭಕ್ತಿಯುಳ್ಳವನೂ[2] ಆದ ಜ್ಞಾನಿಯು ಶ್ರೇಷ್ಠನು; ನಾನು ಜ್ಞಾನಿಗೆ ಅತ್ಯಂತ ಪ್ರಿಯನು ಮತ್ತು ಅವನು ನನಗೆ ಪ್ರಿಯನಾಗಿರುವನು.

1 ಯಾವಾಗಲೂ ಭಗವಂತನಲ್ಲಿಯೇ ನಿಷ್ಠೆಯುಳ್ಳವನು.
2 ಭಗವಂತನಲ್ಲಿಯೇ ಭಕ್ತಿಯುಳ್ಳವನು.

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥ ೧೮ ॥**

ಏತೇ ಸರ್ವೇ ಏವ (ಇವರೆಲ್ಲರೂ) ಉದಾರಾಃ (ಉದಾರಿಗಳು) ತು (ಆದರೆ) ಜ್ಞಾನೀ (ಜ್ಞಾನಿಯು) ಆತ್ಮಾ ಏವ (ನನ್ನ ಆತ್ಮನೇ ಎಂದು) ಮೇ (ನನ್ನ) ಮತಂ (ಮತವು) ಹಿ (ಏಕೆಂದರೆ) ಸ ಯುಕ್ತಾತ್ಮಾ (ಆ ಯುಕ್ತಾತ್ಮನು) ಅನುತ್ತಮಾಂ ಗತಿಂ (ಅತ್ಯುತ್ತಮಗತಿ-ಸ್ವರೂಪನಾದ) ಮಾಂ ಏವ (ನನ್ನನ್ನೇ) ಆಸ್ಥಿತಃ (ಆಶ್ರಯಿಸಿರುತ್ತಾನೆ).

೧೮. ಇವರೆಲ್ಲರೂ ಉದಾರಿಗಳೇ ಸರಿ; ಆದರೆ ಜ್ಞಾನಿಯು ನನ್ನ ಆತ್ಮನೇ ಎಂದು ನನ್ನ ಮತವು; ಏಕೆಂದರೆ ಆ ಯುಕ್ತಾತ್ಮನು ನಾನೇ ಅತ್ಯುತ್ತಮಗತಿಯೆಂದು ನನ್ನನ್ನೇ ಆಶ್ರಯಿಸಿರುತ್ತಾನೆ.

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**

ಬಹೂನಾಂ ಜನ್ಮನಾಂ (ಬಹುಜನ್ಮಗಳ) ಅಂತೇ (ಕೊನೆಯಲ್ಲಿ) ಜ್ಞಾನವಾನ್ (ಜ್ಞಾನವಂತನಾಗಿ) ವಾಸುದೇವಃ (ವಾಸುದೇವನೇ) ಸರ್ವಂ (ಸರ್ವವು) ಇತಿ (ಎಂದು) ಮಾಂ (ನನ್ನನ್ನು) ಪ್ರಪದ್ಯತೇ (ಹೊಂದುತ್ತಾನೆ) ಸಃ ಮಹಾತ್ಮಾ (ಅಂತಹ ಮಹಾತ್ಮನು) ಸುದುರ್ಲಭಃ (ಅತ್ಯಂತ ದುರ್ಲಭನು).

೧೯. ಬಹುಜನ್ಮಗಳ ಕೊನೆಯಲ್ಲಿ ಜ್ಞಾನವಂತನಾಗಿ 'ವಾಸುದೇವನೇ ಸರ್ವವು' ಎಂದು ನನ್ನನ್ನು ಹೊಂದುತ್ತಾನೆ. ಅಂತಹ ಮಹಾತ್ಮನು ಅತ್ಯಂತ ದುರ್ಲಭನು.

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥**

ತೈಃ ತೈಃ (ಆಯಾಯ) ಕಾಮೈಃ (ಕಾಮಗಳಿಂದ) ಹೃತ-ಜ್ಞಾನಾಃ (ಅಪಹರಿಸಲ್ಪಟ್ಟ ಜ್ಞಾನವುಳ್ಳವರು) ತಂ ತಂ (ಆಯಾಯ) ನಿಯಮಂ (ನಿಯಮವನ್ನು) ಆಸ್ಥಾಯ (ಅನುಸರಿಸಿ) ಸ್ವಯಾ (ತಮ್ಮ) ಪ್ರಕೃತ್ಯಾ (ಪ್ರಕೃತಿಯಿಂದ) ನಿಯತಾಃ (ನಿಯಂತ್ರಿತರಾಗಿ) ಅನ್ಯದೇವತಾಃ (ಅನ್ಯದೇವತೆಗಳನ್ನು) ಪ್ರಪದ್ಯಂತೇ (ಶರಣು ಹೊಂದುತ್ತಾರೆ).

೨೦. ಆಯಾಯ ಕಾಮಗಳಿಂದ[1] ಅಪಹರಿಸಲ್ಪಟ್ಟ ಜ್ಞಾನವುಳ್ಳವರು[2] ಆಯಾಯ ನಿಯಮವನ್ನು[3] ಅನುಸರಿಸಿ ತಮ್ಮ ಸಂಸ್ಕಾರದಿಂದ ನಿಯಂತ್ರಿತರಾಗಿ ಬೇರೆ ದೇವತೆಗಳನ್ನು ಶರಣುಹೊಂದುತ್ತಾರೆ.

1 ಪುತ್ರ-ಪಶು-ಸ್ವರ್ಗಾದಿ ವಿಷಯಗಳಿಂದ.
2 ವಿವೇಕರೂಪವಾದ ಜ್ಞಾನವನ್ನು ಕಳೆದುಕೊಂಡು.
3 ಜಪ ಉಪವಾಸ ಮುಂತಾದುವುಗಳನ್ನು.

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥ ೨೧ ॥**

ಯಃ ಯಃ (ಯಾವಯಾವ) ಭಕ್ತಃ (ಭಕ್ತನು) ಯಾಂ ಯಾಂ (ಯಾವ ಯಾವ) ತನುಂ (ಶರೀರವನ್ನು) ಶ್ರದ್ಧಯಾ (ಶ್ರದ್ಧೆಯಿಂದ) ಅರ್ಚಿತುಂ (ಪೂಜಿಸಲು) ಇಚ್ಛತಿ (ಇಚ್ಛಿಸುವನೋ) ತಸ್ಯ ತಸ್ಯ (ಅವನವನಿಗೆ) ತಾಂ ಏವ (ಅದೇ) ಅಚಲಾಂ (ಅಚಲವಾದ) ಶ್ರದ್ಧಾಂ (ಶ್ರದ್ಧೆಯನ್ನು) ಅಹಂ (ನಾನು) ವಿದಧಾಮಿ (ಕೊಡುವೆನು).

೨೧. ಯಾವಯಾವ ಭಕ್ತನು ಯಾವಯಾವ ದೇವತಾಮೂರ್ತಿಯನ್ನು ಶ್ರದ್ಧೆಯಿಂದ ಪೂಜಿಸಲು ಇಚ್ಛಿಸುವನೋ, ಅವನವನಿಗೆ ಅದೇ[1] ಅಚಲವಾದ ಶ್ರದ್ಧೆಯನ್ನು ನಾನು ಕೊಡುವೆನು.

1 ಆಯಾಯ ದೇವತಾವಿಷಯವಾದ.

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ ಮಯೈವ**
**ವಿಹಿತಾನ್ ಹಿ ತಾನ್ ॥ ೨೨ ॥**

ಸಃ (ಅವನು) ತಯಾ ಶ್ರದ್ಧಯಾ (ಆ ಶ್ರದ್ಧೆಯಿಂದ) ಯುಕ್ತಃ (ಕೂಡಿದವನಾಗಿ) ತಸ್ಯ (ಅದರ, ಆ ದೇವತೆಯ) ಆರಾಧನಂ (ಆರಾಧನವನ್ನು) ಈಹತೇ (ಮಾಡುತ್ತಾನೆ) ಚ ತತಃ (ಮತ್ತು ಅದರಿಂದ) ಮಯಾ ಏವ (ನನ್ನಿಂದಲೇ) ವಿಹಿತಾನ್ (ವಿಹಿತವಾದ) ತಾನ್ ಕಾಮಾನ್ (ಆ ಕಾಮಗಳನ್ನು) ಲಭತೇ (ಪಡೆಯುತ್ತಾನೆ.)

೨೨. ಆ ಭಕ್ತನು ಶ್ರದ್ಧೆಯಿಂದ ಕೂಡಿದವನಾಗಿ ಆ ದೇವತೆಯ ಆರಾಧನವನ್ನು ಮಾಡುತ್ತಾನೆ ಮತ್ತು ಅದರಿಂದ ನನ್ನಿಂದಲೇ ವಿಹಿತವಾದ ಆ ಕಾಮಗಳನ್ನು ಪಡೆಯುತ್ತಾನೆ.

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ ದೇವಯಜೋ ಯಾಂತಿ**
**ಮದ್ಭಕ್ತಾ ಯಾಂತಿ ಮಾಮಪಿ ॥ ೨೩ ॥**

ತು (ಆದರೆ) ಅಲ್ಪಮೇಧಸಾಂ (ಅಲ್ಪಬುದ್ಧಿಯುಳ್ಳ) ತೇಷಾಂ (ಅವರಿಗೆ) ತತ್ ಫಲಂ (ಆ ಫಲವು) ಅಂತವತ್ ಭವತಿ (ಅಂತವುಳ್ಳದ್ದಾಗಿರುವುದು) ದೇವ-ಯಜಃ (ದೇವತೆಗಳನ್ನು ಆರಾಧಿಸುವವರು) ದೇವಾನ್ (ದೇವತೆಗಳನ್ನು) ಯಾಂತಿ (ಹೊಂದುವರು) ಮದ್ಭಕ್ತಾಃ (ನನ್ನ ಭಕ್ತರು) ಮಾಂ ಅಪಿ (ನನ್ನನ್ನೇ) ಯಾಂತಿ (ಹೊಂದುವರು).

೨೩. ಆದರೆ ಅಲ್ಪಬುದ್ಧಿಯುಳ್ಳ ಅವರಿಗೆ ಆ ಫಲವು ಅಂತವುಳ್ಳದ್ದಾಗಿರುವುದು. ದೇವತೆಗಳನ್ನು ಆರಾಧಿಸುವವರು ದೇವತೆಗಳನ್ನು ಹೊಂದುತ್ತಾರೆ; ನನ್ನ ಭಕ್ತರು ನನ್ನನ್ನೇ ಹೊಂದುತ್ತಾರೆ.

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥ ೨೪ ॥**

ಮಮ (ನನ್ನ) ಅವ್ಯಯಂ (ಅವ್ಯಯವಾದ) ಅನುತ್ತಮಂ (ನಿರತಿಶಯವಾದ) ಪರಂ ಭಾವಂ (ಪರಭಾವವನ್ನು) ಅಜಾನಂತಃ (ತಿಳಿಯದಿರುವ) ಅಬುದ್ಧಯಃ (ಅವಿವೇಕಿಗಳು) ಮಾಂ (ನನ್ನನ್ನು) ಅವ್ಯಕ್ತಂ (ಅವ್ಯಕ್ತನಾದವನು) ವ್ಯಕ್ತಿಂ ಆಪನ್ನಂ (ವ್ಯಕ್ತಗೊಂಡವನೆಂದು) ಮನ್ಯಂತೇ (ತಿಳಿಯುತ್ತಾರೆ).

೨೪. ಅವ್ಯಯವೂ ನಿರತಿಶಯವೂ ಆದ ನನ್ನ ಪರಭಾವವನ್ನು ಅರಿಯದ ಅವಿವೇಕಿಗಳು (ಮೊದಲು) ಅವ್ಯಕ್ತನಾಗಿದ್ದು (ಆ ಮೇಲೆ) ವ್ಯಕ್ತಗೊಂಡವನೆಂದು ನನ್ನನ್ನು ಎಣಿಸುತ್ತಾರೆ.

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ**
**ಮಾಮಜಮವ್ಯಯಮ್ ॥ ೨೫ ॥**

ಯೋಗಮಾಯಾಸಮಾವೃತಃ (ಯೋಗಮಾಯೆಯಿಂದ ಆವೃತನಾದ) ಅಹಂ (ನಾನು) ಸರ್ವಸ್ಯ (ಎಲ್ಲರಿಗೂ) ನ ಪ್ರಕಾಶಃ (ಪ್ರತ್ಯಕ್ಷನಲ್ಲ) ಅಯಂ (ಈ) ಮೂಢಃ (ಮೂಢವಾದ) ಲೋಕಃ (ಜನವು) ಅಜಂ (ಅಜನಾದ) ಅವ್ಯಯಂ (ಅವ್ಯಯನಾದ) ಮಾಂ (ನನ್ನನ್ನು) ನ ಅಭಿಜಾನಾತಿ (ಅರಿಯುವುದಿಲ್ಲ).

೨೫. ಯೋಗಮಾಯೆಯಿಂದ ಆವೃತನಾದ ನಾನು ಎಲ್ಲರಿಗೂ ಪ್ರತ್ಯಕ್ಷನಲ್ಲ. (ಆದುದರಿಂದ) ಈ ಮೂಢಜನರು ಅಜನೂ ಅವ್ಯಯನೂ ಆದ ನನ್ನನ್ನು ಅರಿಯರು.

[ಎಲ್ಲರೂ ನನ್ನನ್ನು ಆಶ್ರಯಿಸಲೆಂದು ಮನುಷ್ಯರೂಪವನ್ನು ಹೊಂದಿದ್ದರೂ, ಮೂಢರಾದ ಈ ಲೋಕದ ಜನರು ನನ್ನನ್ನು ಅರಿಯರು.]

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥**

ಅರ್ಜುನ (ಎಲೈ ಅರ್ಜುನನೆ) ಸಮತೀತಾನಿ (ಕಳೆದುಹೋದ) ಚ ವರ್ತಮಾನಾನಿ (ಮತ್ತು ಈಗ ಇರುವ) ಭವಿಷ್ಯಾಣಿ ಚ (ಮತ್ತು ಮುಂದೆ ಹುಟ್ಟುವ) ಭೂತಾನಿ (ಪ್ರಾಣಿಗಳನ್ನು) ಅಹಂ (ನಾನು) ವೇದ (ಬಲ್ಲೆನು) ತು (ಆದರೆ) ಮಾಂ (ನನ್ನನ್ನು) ಕಶ್ಚನ (ಯಾವನೊಬ್ಬನೂ) ನ ವೇದ (ಅರಿಯನು).

೨೬. ಎಲೈ ಅರ್ಜುನ, ಕಳೆದುಹೋದ, ಈಗ ಇರುವ ಮತ್ತು ಮುಂದೆ ಹುಟ್ಟುವ ಪ್ರಾಣಿಗಳನ್ನು ನಾನು ಬಲ್ಲೆನು; ಆದರೆ ನನ್ನನ್ನು ಯಾವನೊಬ್ಬನೂ ಅರಿಯನು.

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥**

ಭಾರತ (ಎಲೈ ಅರ್ಜುನನೆ) ಪರಂತಪ (ಪರಂತಪನೆ) ಇಚ್ಛಾ-ದ್ವೇಷ-ಸಮುತ್ಥೇನ (ಇಚ್ಛಾದ್ವೇಷಗಳಿಂದ ಹುಟ್ಟಿದ) ದ್ವಂದ್ವಮೋಹೇನ (ದ್ವಂದ್ವಗಳ ಮೋಹದಿಂದ) ಸರ್ವಭೂತಾನಿ (ಸರ್ವಪ್ರಾಣಿಗಳು) ಸರ್ಗೇ (ಹುಟ್ಟುವ ಕಾಲದಲ್ಲೇ) ಸಂಮೋಹಂ (ಭ್ರಾಂತಿಯನ್ನು) ಯಾಂತಿ (ಹೊಂದುತ್ತವೆ).

೨೭. ಎಲೈ ಅರ್ಜುನ, ಪರಂತಪ, ಇಚ್ಛಾದ್ವೇಷಗಳಿಂದ ಹುಟ್ಟಿದ ದ್ವಂದ್ವಗಳ[1] ಮೋಹದಿಂದ ಸರ್ವಪ್ರಾಣಿಗಳು ಹುಟ್ಟುವ ಕಾಲದಲ್ಲೇ ಭ್ರಾಂತಿಯನ್ನು ಹೊಂದುತ್ತವೆ.

1 ಶೀತೋಷ್ಣ ಸುಖದುಃಖಗಳು.

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥ ೨೮ ॥**

ತು (ಆದರೆ) ಯೇಷಾಂ (ಯಾವ) ಪುಣ್ಯಕರ್ಮಣಾಂ (ಪುಣ್ಯಕರ್ಮರಾದ) ಜನಾನಾಂ (ಜನರ) ಪಾಪಂ (ಪಾಪವು) ಅಂತಗತಂ (ಕ್ಷೀಣವಾಗಿರುವುದೋ) ತೇ (ಅವರು) ದ್ವಂದ್ವ-ಮೋಹ-ನಿರ್ಮುಕ್ತಾಃ (ದ್ವಂದ್ವಗಳ ಮೋಹದಿಂದ ಬಿಡುಗಡೆಯನ್ನು ಹೊಂದಿ) ದೃಢವ್ರತಾಃ (ದೃಢವ್ರತರಾಗಿ) ಮಾಂ (ನನ್ನನ್ನು) ಭಜಂತೇ (ಭಜಿಸುತ್ತಾರೆ).

**೨೮.** ಆದರೆ ಪುಣ್ಯಕರ್ಮಗಳನ್ನು ಮಾಡುವ ಯಾವ ಜನರ ಪಾಪವು ಕ್ಷೀಣವಾಗಿರುವುದೋ, ಅವರು ಸುಖದುಃಖಾದಿ ದ್ವಂದ್ವಗಳ ಮೋಹದಿಂದ ಬಿಡುಗಡೆಯನ್ನು ಹೊಂದಿ ದೃಢವ್ರತರಾಗಿ ನನ್ನನ್ನು ಭಜಿಸುತ್ತಾರೆ.

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥ ೨೯ ॥**

ಜರಾಮರಣಮೋಕ್ಷಾಯ (ಮುಪ್ಪುಸಾವುಗಳಿಂದ ಬಿಡುಗಡೆಯನ್ನು ಹೊಂದುವುದಕ್ಕಾಗಿ) ಮಾಂ (ನನ್ನನ್ನು) ಆಶ್ರಿತ್ಯ (ಆಶ್ರಯಿಸಿ) ಯೇ (ಯಾರು) ಯತಂತಿ (ಪ್ರಯತ್ನಿಸುತ್ತಾರೋ) ತೇ (ಅವರು) ತತ್ (ಆ) ಬ್ರಹ್ಮ (ಬ್ರಹ್ಮವನ್ನು) ಕೃತ್ಸ್ನಂ (ಸಂಪೂರ್ಣವಾದ) ಅಧ್ಯಾತ್ಮಂ (ಅಧ್ಯಾತ್ಮವನ್ನು) ಅಖಿಲಂ ಚ (ಮತ್ತು ಎಲ್ಲಾ) ಕರ್ಮ (ಕರ್ಮವನ್ನು) ವಿದುಃ (ತಿಳಿಯುತ್ತಾರೆ).

**೨೯.** ಮುಪ್ಪುಸಾವುಗಳಿಂದ ಬಿಡುಗಡೆಯನ್ನು ಹೊಂದುವುದಕ್ಕಾಗಿ ಯಾರು ನನ್ನನ್ನು ಆಶ್ರಯಿಸಿ ಪ್ರಯತ್ನಿಸುತ್ತಾರೋ, ಅವರು ಆ ಬ್ರಹ್ಮವನ್ನೂ ಸಂಪೂರ್ಣವಾದ ಅಧ್ಯಾತ್ಮವನ್ನೂ[1] ಮತ್ತು ಎಲ್ಲಾ ಕರ್ಮವನ್ನೂ ತಿಳಿಯುತ್ತಾರೆ.

[1] ಪ್ರತ್ಯಗಾತ್ಮವಿಷಯವಾದ ವಸ್ತು.

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥**

ಯೇ ಚ (ಮತ್ತು ಯಾರು) ಮಾಂ (ನನ್ನನ್ನು) ಸಾಧಿಭೂತಾಧಿದೈವಂ (ಅಧಿಭೂತ ಮತ್ತು ಅಧಿದೈವಗಳ ಸಹಿತ) ಸಾಧಿಯಜ್ಞಂ ಚ (ಮತ್ತು ಅಧಿಯಜ್ಞದ ಸಹಿತ) ವಿದುಃ (ತಿಳಿಯುತ್ತಾರೆಯೋ) ತೇ ಯುಕ್ತಚೇತಸಃ (ಅಂತಹ ಸಮಾಹಿತ ಚಿತ್ತರು) ಅಂತಕಾಲೇ ಅಪಿ (ಮರಣಕಾಲದಲ್ಲಿಯೂ) ಮಾಂ (ನನ್ನನ್ನು) ವಿದುಃ (ತಿಳಿಯುವರು).

**೩೦.** ಅಧಿಭೂತ, ಅಧಿದೈವ ಮತ್ತು ಅಧಿಯಜ್ಞ[1]—ಇವುಗಳಿಂದ ಕೂಡಿರುವ ನನ್ನನ್ನು ಯಾರು ತಿಳಿಯುತ್ತಾರೆಯೋ ಅಂತಹ ಸಮಾಹಿತ ಚಿತ್ತರು ಮರಣಕಾಲದಲ್ಲಿಯೂ ನನ್ನನ್ನು ತಿಳಿಯುವರು.

[1] ಈ ಮೂರು ತತ್ತ್ವಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಇತಿ ಜ್ಞಾನವಿಜ್ಞಾನಯೋಗೋ ನಾಮ ಸಪ್ತಮೋಽಧ್ಯಾಯಃ ।**

ಜ್ಞಾನವಿಜ್ಞಾನಯೋಗವೆಂಬ ಏಳನೆಯ ಅಧ್ಯಾಯವು ಮುಗಿಯಿತು.

# ಎಂಟನೆಯ ಅಧ್ಯಾಯ

## ಅಕ್ಷರಬ್ರಹ್ಮಯೋಗ

ಅರ್ಜುನ ಉವಾಚ

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)—ಪುರುಷೋತ್ತಮ (ಎಲೈ ಪುರುಷೋತ್ತಮನೆ) ತತ್ ಬ್ರಹ್ಮ (ಆ ಬ್ರಹ್ಮ) ಕಿಂ (ಯಾವುದು) ಅಧ್ಯಾತ್ಮಂ (ಅಧ್ಯಾತ್ಮವು) ಕಿಂ (ಯಾವುದು) ಕರ್ಮ ಕಿಂ (ಕರ್ಮವು ಯಾವುದು) ಚ ಅಧಿಭೂತಂ (ಅಧಿಭೂತ ಎಂದು) ಕಿಂ ಪ್ರೋಕ್ತಂ (ಯಾವುದು ಹೇಳಲ್ಪಟ್ಟಿತು) ಅಧಿದೈವಂ (ಅಧಿದೈವ ಎಂದು) ಕಿಂ ಉಚ್ಯತೇ (ಯಾವುದು ಹೇಳಲ್ಪಟ್ಟಿದೆ).

ಅರ್ಜುನನು ಹೇಳಿದನು

೧. ಎಲೈ ಪುರುಷೋತ್ತಮ, ಆ ಬ್ರಹ್ಮ ಯಾವುದು? ಅಧ್ಯಾತ್ಮವು ಯಾವುದು? ಕರ್ಮವು ಯಾವುದು? ಅಧಿಭೂತವೆಂದು ಯಾವುದು ಹೇಳಲ್ಪಟ್ಟಿತು? ಅಧಿದೈವವೆಂದು ಯಾವುದು ಹೇಳಲ್ಪಟ್ಟಿದೆ?

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

ಮಧುಸೂದನ (ಎಲೈ ಮಧುಸೂದನನೆ) ಅತ್ರ (ಇಲ್ಲಿ) ಅಸ್ಮಿನ್ ದೇಹೇ (ಈ ದೇಹದಲ್ಲಿ) ಕಃ (ಯಾವನು) ಕಥಂ (ಹೇಗೆ) ಅಧಿಯಜ್ಞಃ (ಅಧಿಯಜ್ಞನು) ಚ ಪ್ರಯಾಣಕಾಲೇ (ಮತ್ತು ಮರಣಕಾಲದಲ್ಲಿ) ನಿಯತಾತ್ಮಭಿಃ (ಯೋಗಿಗಳಿಂದ) ಕಥಂ (ಹೇಗೆ) ಜ್ಞೇಯಃ ಅಸಿ (ತಿಳಿಯಲ್ಪಡುವೆ).

೨. ಈ ದೇಹದಲ್ಲಿ ಅಧಿಯಜ್ಞನು ಯಾವನು? ಅವನು ಹೇಗೆ ಅಧಿಯಜ್ಞನು? ಮರಣಕಾಲದಲ್ಲಿ ಯೋಗಿಗಳು ನಿನ್ನನ್ನು ಹೇಗೆ ಅರಿತುಕೊಳ್ಳುತ್ತಾರೆ?

ಶ್ರೀಭಗವಾನ್ ಉವಾಚ

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಪರಮಂ (ಪರಮವಾದ) ಅಕ್ಷರಂ (ಅಕ್ಷರವು) ಬ್ರಹ್ಮ (ಬ್ರಹ್ಮವು) ಸ್ವಭಾವಃ (ಸ್ವಭಾವವು) ಅಧ್ಯಾತ್ಮಂ ಉಚ್ಯತೇ (ಅಧ್ಯಾತ್ಮವೆನಿಸುವುದು) ಭೂತಭಾವೋದ್ಭವಕರಃ (ಪ್ರಾಣಿಗಳ ಉತ್ಪತ್ತಿಸ್ಥಿತಿಗಳಿಗೆ ಕಾರಣವಾದ) ವಿಸರ್ಗಃ (ವಿಸರ್ಜನವು) ಕರ್ಮಸಂಜ್ಞಿತಃ (ಕರ್ಮವೆಂಬ ಹೆಸರುಳ್ಳದ್ದು).

ಶ್ರೀಕೃಷ್ಣನು ಹೇಳಿದನು

೩. ಪರಮವಾದ ಅಕ್ಷರವೇ ಬ್ರಹ್ಮ; ಸ್ವಭಾವವು[1] ಅಧ್ಯಾತ್ಮವೆನಿಸುವುದು;[2] ಪ್ರಾಣಿಗಳ ಉತ್ಪತ್ತಿಸ್ಥಿತಿಗಳಿಗೆ ಕಾರಣವಾದ ವಿಸರ್ಜನವು[3] ಕರ್ಮವೆಂಬ ಹೆಸರುಳ್ಳದ್ದು.

1 ಪರಬ್ರಹ್ಮವು ಪ್ರತಿದೇಹದಲ್ಲಿ ಜೀವರೂಪದಿಂದ ಪ್ರವೇಶವಾಗಿರುವುದೇ ಸ್ವಭಾವವು.
2 ಆ ಬ್ರಹ್ಮವೇ ಶರೀರದಲ್ಲಿ ಭೋಕ್ತೃವಾಗಿರುವುದು ಅಧ್ಯಾತ್ಮ.
3 ಚರು, ಪುರೋಡಾಶ ಮುಂತಾದ ದ್ರವ್ಯಗಳನ್ನು ಹೋಮದಲ್ಲಿ ದೇವತೆಗಳಿಗಾಗಿ ಹಾಕುವುದು.

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥**

ದೇಹಭೃತಾಂ ವರ (ದೇಹಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನೆ) ಕ್ಷರಃ (ನಶ್ವರವಾದ) ಭಾವಃ (ವಸ್ತು) ಅಧಿಭೂತಂ (ಅಧಿಭೂತವು) ಪುರುಷಃ ಚ (ಪುರುಷನು) ಅಧಿದೈವತಂ (ಅಧಿದೈವತವು) ಅತ್ರ ದೇಹೇ (ಈ ದೇಹದಲ್ಲಿ) ಅಹಂ ಏವ (ನಾನೇ) ಅಧಿಯಜ್ಞಃ (ಅಧಿಯಜ್ಞನು).

೪. ದೇಹಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನ, ನಶ್ವರವಾದ ವಸ್ತುಗಳೇ ಅಧಿಭೂತವು. ಪುರುಷನು[1] ಅಧಿದೈವತವು. ಈ ದೇಹದಲ್ಲಿ ನಾನೇ ಅಧಿಯಜ್ಞನು.[2]

1 ಆದಿತ್ಯನಲ್ಲಿ ಅಂತರ್ಗತನೂ, ಸರ್ವಪ್ರಾಣಿಗಳ ಕರಣಗಳಿಗೂ ಅನುಗ್ರಾಹಕನೂ ಆಗಿರುವ ಹಿರಣ್ಯಗರ್ಭನು (ಶ್ರೀಶಂಕರ).
2 ಸರ್ವಯಜ್ಞಾಭಿಮಾನಿಯಾದ ವಿಷ್ಣು.

**ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥**

ಚ (ಮತ್ತು) ಯಃ (ಯಾವನು) ಅಂತಕಾಲೇ (ಮರಣಕಾಲದಲ್ಲಿ) ಮಾಂ ಏವ (ನನ್ನನ್ನೇ) ಸ್ಮರನ್ (ಸ್ಮರಣೆಮಾಡುತ್ತಾ) ಕಲೇವರಂ (ದೇಹವನ್ನು) ತ್ಯಕ್ತ್ವಾ

(ಬಿಟ್ಟು) ಪ್ರಯಾತಿ (ಹೊರಡುತ್ತಾನೆಯೋ) ಸಃ (ಅವನು) ಮದ್ಭಾವಂ (ನನ್ನ ಭಾವವನ್ನು) ಯಾತಿ (ಹೊಂದುವನು) ಅತ್ರ (ಇದರಲ್ಲಿ) ಸಂಶಯಃ (ಸಂಶಯವು) ನ ಅಸ್ತಿ (ಇಲ್ಲ).

**೫.** ಮತ್ತು ಮರಣಕಾಲದಲ್ಲಿ ನನ್ನನ್ನೇ ಸ್ಮರಣೆಮಾಡುತ್ತಾ ದೇಹವನ್ನು ಬಿಟ್ಟು ಯಾವನು ಹೊರಡುತ್ತಾನೆಯೋ, ಅವನು ನನ್ನ ಭಾವವನ್ನು[1] ಹೊಂದುವನು. ಇದರಲ್ಲಿ ಸಂಶಯವಿಲ್ಲ.

[1] ವೈಷ್ಣವತತ್ತ್ವವನ್ನು (ಶ್ರೀಶಂಕರ).

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬ ॥**

ಕೌಂತೇಯ (ಎಲೈ ಅರ್ಜುನನೆ) ಅಂತೇ (ಮರಣಕಾಲದಲ್ಲಿ) ಯಂ ಯಂ (ಯಾವಯಾವ) ಭಾವಂ ವಾ ಅಪಿ (ಭಾವವನ್ನಾದರೂ) ಸ್ಮರನ್ (ಸ್ಮರಿಸುತ್ತಾ) ಕಲೇವರಂ (ದೇಹವನ್ನು) ತ್ಯಜತಿ (ಬಿಡುವನೋ) ಸದಾ (ಯಾವಾಗಲೂ) ತದ್ಭಾವ-ಭಾವಿತಃ (ಆ ಭಾವವನ್ನೇ ಭಾವಿಸುತ್ತಿರುವವನು) ತಂ ತಂ ಏವ (ಅದನ್ನೇ) ಏತಿ (ಹೊಂದುವನು).

**೬.** ಎಲೈ ಅರ್ಜುನ, (ಸಾಧಕನು) ಮರಣಕಾಲದಲ್ಲಿ ಯಾವಯಾವ ಭಾವವನ್ನಾದರೂ[1] ಸ್ಮರಿಸುತ್ತಾ ದೇಹವನ್ನು ಬಿಡುವನೋ, ಯಾವಾಗಲೂ ಆ ಭಾವವನ್ನೇ ಭಾವಿಸುತ್ತಿರುವ ಅವನು ಅದನ್ನೇ ಹೊಂದುವನು.

[1] ದೇವತೆಯನ್ನು (ಶ್ರೀಶಂಕರ).

**ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿಃ ಮಾಮೇವೈಷ್ಯಸ್ಯಸಂಶಯಃ ॥ ೭ ॥**

ತಸ್ಮಾತ್ (ಆದುದರಿಂದ) ಸರ್ವೇಷು (ಎಲ್ಲಾ) ಕಾಲೇಷು (ಕಾಲಗಳಲ್ಲಿ) ಮಾಂ (ನನ್ನನ್ನು) ಅನುಸ್ಮರ (ಸ್ಮರಿಸು) ಯುಧ್ಯ ಚ (ಮತ್ತು ಯುದ್ಧಮಾಡು) ಮಯಿ (ನನ್ನಲ್ಲಿ) ಅರ್ಪಿತಮನೋಬುದ್ಧಿಃ (ಅರ್ಪಿಸಲ್ಪಟ್ಟ ಮನಸ್ಸುಬುದ್ಧಿಗಳುಳ್ಳವನಾಗಿ) ಮಾಂ ಏವ (ನನ್ನನ್ನೇ) ಏಷ್ಯಸಿ (ಹೊಂದುವೆ) ಅಸಂಶಯಃ (ಸಂಶಯವಿಲ್ಲ).

**೭.** ಆದುದರಿಂದ ಎಲ್ಲಾ ಕಾಲದಲ್ಲಿಯೂ ನನ್ನನ್ನೇ ಸ್ಮರಿಸುತ್ತಿರು ಮತ್ತು ಯುದ್ಧಮಾಡು. ನನಗೆ ಮನಸ್ಸುಬುದ್ಧಿಗಳನ್ನು ಸಮರ್ಪಿಸಿ, ನನ್ನನ್ನೇ ಹೊಂದುವೆ. (ಇದರಲ್ಲಿ) ಸಂಶಯವಿಲ್ಲ.

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮ ॥**

ಪಾರ್ಥ (ಎಲೈ ಅರ್ಜುನನೆ) ಅಭ್ಯಾಸ-ಯೋಗ-ಯುಕ್ತೇನ (ಅಭ್ಯಾಸಯೋಗದಿಂದ ಕೂಡಿದ) ನ ಅನ್ಯಗಾಮಿನಾ (ಬೇರೆ ಯಾವ ಕಡೆಯೂ ಹೋಗದ) ಚೇತಸಾ (ಚಿತ್ತದಿಂದ) ಅನುಚಿಂತಯನ್ (ಧ್ಯಾನಿಸುತ್ತಾ) ಪರಮಂ (ಪರಮನಾದ) ದಿವ್ಯಂ (ದಿವ್ಯನಾದ) ಪುರುಷಂ (ಪುರುಷನನ್ನು) ಯಾತಿ (ಹೊಂದುವನು).

೮. ಎಲೈ ಅರ್ಜುನ, ಅಭ್ಯಾಸಯೋಗದಿಂದ ಕೂಡಿದ ಮತ್ತು ಬೇರೆ ಯಾವ ಕಡೆಯೂ ಹೋಗದ ಚಿತ್ತದಿಂದ ಧ್ಯಾನಿಸುತ್ತಾ (ಸಾಧಕನು) ದಿವ್ಯನಾದ ಪರಮಪುರುಷನನ್ನು ಹೊಂದುವನು.

**ಕವಿಂ ಪುರಾಣಮನುಶಾಸಿತಾರ-**
**ಮಣೋರಣೀಯಾಂಸಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರಮಚಿಂತ್ಯರೂಪ-**
**ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥**
**ಪ್ರಯಾಣಕಾಲೇ ಮನಸಾಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥ ೧೦ ॥**

ಯಃ (ಯಾವನು) ಪ್ರಯಾಣಕಾಲೇ (ಮರಣಕಾಲದಲ್ಲಿ) ಭಕ್ತ್ಯಾ ಯುಕ್ತಃ (ಭಕ್ತಿಯಿಂದ ಕೂಡಿದವನಾಗಿ) ಅಚಲೇನ (ಅಚಲವಾದ) ಮನಸಾ (ಮನಸ್ಸಿನಿಂದ) ಯೋಗಬಲೇನ (ಯೋಗಬಲದಿಂದ) ಭ್ರುವೋಃ ಮಧ್ಯೇ ಚ ಏವ (ಭ್ರೂಮಧ್ಯದಲ್ಲಿ) ಪ್ರಾಣಂ (ಪ್ರಾಣವನ್ನು) ಸಮ್ಯಕ್ (ಚೆನ್ನಾಗಿ) ಆವೇಶ್ಯ (ನಿಲ್ಲಿಸಿ) ಕವಿಂ (ಸರ್ವಜ್ಞನೂ) ಪುರಾಣಂ (ಪುರಾತನನೂ) ಅನುಶಾಸಿತಾರಂ (ನಿಯಾಮಕನೂ) ಅಣೋಃ (ಅಣುವಿಗಿಂತ) ಅಣೀಯಾಂಸಂ (ಸೂಕ್ಷ್ಮನಾಗಿರುವವನೂ) ಸರ್ವಸ್ಯ ಧಾತಾರಂ (ಎಲ್ಲಕ್ಕೂ ಧಾತೃವೂ) ಅಚಿಂತ್ಯರೂಪಂ (ಅಚಿಂತ್ಯವಾದ ರೂಪವುಳ್ಳವನೂ) ಆದಿತ್ಯವರ್ಣಂ (ಆದಿತ್ಯವರ್ಣನೂ) ತಮಸಃ ಪರಸ್ತಾತ್ (ತಮಸ್ಸಿನ ಆಚೆ ಇರುವವನೂ) [ಆದ ಪುರುಷನನ್ನು] ಅನುಸ್ಮರೇತ್ (ಸ್ಮರಿಸುವನೋ) ಸಃ (ಅವನು) ತಂ (ಆ) ಪರಂ (ಪರಮನಾದ) ದಿವ್ಯಂ (ದಿವ್ಯನಾದ) ಪುರುಷಂ (ಪುರುಷನನ್ನು) ಉಪೈತಿ (ಹೊಂದುವನು).

**೯–೧೦.** ಮರಣಕಾಲದಲ್ಲಿ ಭಕ್ತಿಯಿಂದ ಕೂಡಿದವನಾಗಿ, ಅಚಲವಾದ ಮನಸ್ಸಿನಿಂದಲೂ, ಯೋಗಬಲದಿಂದಲೂ ಭ್ರೂಮಧ್ಯದಲ್ಲಿ (ತನ್ನ)

ಪ್ರಾಣವನ್ನು ಚೆನ್ನಾಗಿ ನಿಲ್ಲಿಸಿ, ಸರ್ವಜ್ಞನೂ ಪುರಾತನನೂ (ವಿಶ್ವದ) ನಿಯಾಮಕನೂ ಅಣುವಿಗಿಂತ ಸೂಕ್ಷ್ಮನಾಗಿರುವವನೂ ಎಲ್ಲಕ್ಕೂ ಧಾತೃವೂ[1] ಅಚಿಂತ್ಯವಾದ ರೂಪವುಳ್ಳವನೂ[2] ಆದಿತ್ಯವರ್ಣನೂ[3] ತಮಸ್ಸಿನ ಆಚೆ ಇರುವವನೂ[4] (ಆದ ಪುರುಷನನ್ನು) ಯಾವನು ಸ್ಮರಿಸುವನೋ ಅವನು ಆ ದಿವ್ಯನಾದ ಪರಮಪುರುಷನನ್ನು ಹೊಂದುವನು.

[1] ಎಲ್ಲಾ ಪ್ರಾಣಿಗಳಿಗೂ ಕರ್ಮಫಲಗಳನ್ನು ಕೊಡುವವನು (ಶ್ರೀಶಂಕರ). ಎಲ್ಲವನ್ನೂ ಸೃಷ್ಟಿಸುವವನು (ಶ್ರೀರಾಮಾನುಜ).
[2] ಇತರ ವಸ್ತುಗಳಿಂದ ವಿಲಕ್ಷಣವಾದ ಸ್ವರೂಪವುಳ್ಳವನು.
[3] ನಿತ್ಯಚೈತನ್ಯಪ್ರಕಾಶವೆಂಬ ವರ್ಣವುಳ್ಳವನು (ಶ್ರೀಶಂಕರ).
[4] ಅಜ್ಞಾನವೆಂಬ ಮೋಹಾಂಧಕಾರಕ್ಕಿಂತ ಆಚೆ ಇರುವವನು (ಶ್ರೀಶಂಕರ).

**ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥**

ವೇದವಿದಃ (ವೇದವನ್ನು ಬಲ್ಲವರು) ಯತ್ (ಯಾವುದನ್ನು) ಅಕ್ಷರಂ (ಅಕ್ಷರವೆಂದು) ವದಂತಿ (ಹೇಳುತ್ತಾರೆಯೋ) ವೀತರಾಗಾಃ (ವೈರಾಗ್ಯಶೀಲರಾದ) ಯತಯಃ (ಯತಿಗಳು) ಯತ್ (ಯಾವುದನ್ನು) ವಿಶಂತಿ (ಪ್ರವೇಶಿಸುವರೋ) ಯತ್ (ಯಾವುದನ್ನು) ಇಚ್ಛಂತಃ (ಇಚ್ಛಿಸುತ್ತಾ) ಬ್ರಹ್ಮಚರ್ಯಂ (ಬ್ರಹ್ಮಚರ್ಯವನ್ನು) ಚರಂತಿ (ಆಚರಿಸುತ್ತಾರೆಯೋ) ತತ್ (ಆ) ಪದಂ (ಪದವನ್ನು) ತೇ (ನಿನಗೆ) ಸಂಗ್ರಹೇಣ (ಸಂಗ್ರಹವಾಗಿ) ಪ್ರವಕ್ಷ್ಯೇ (ಹೇಳುತ್ತೇನೆ).

೧೧. ವೇದವನ್ನು ಬಲ್ಲವರು ಯಾವುದನ್ನು ಅಕ್ಷರವೆಂದು ಹೇಳುತ್ತಾರೆಯೋ, ವೈರಾಗ್ಯಶೀಲರಾದ ಯತಿಗಳು ಯಾವುದನ್ನು ಪ್ರವೇಶಿಸುತ್ತಾರೆಯೋ, ಯಾವುದನ್ನು ಇಚ್ಛಿಸುತ್ತಾ ಬ್ರಹ್ಮಚರ್ಯವನ್ನು ಆಚರಿಸುತ್ತಾರೆಯೋ, ಆ (ಅಕ್ಷರವೆಂಬ) ಪದವನ್ನು ನಿನಗೆ ಸಂಗ್ರಹವಾಗಿ ಹೇಳುತ್ತೇನೆ.

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಂ ಆಸ್ಥಿತೋ**
**ಯೋಗಧಾರಣಮ್ ॥ ೧೨ ॥**

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಮ್ ॥ ೧೩ ॥**

ಸರ್ವದ್ವಾರಾಣಿ (ಸರ್ವೇಂದ್ರಿಯಗಳನ್ನು) ಸಂಯಮ್ಯ (ಸಂಯಮಿಸಿ) ಮನಃ (ಮನಸ್ಸನ್ನು) ಹೃದಿ (ಹೃದಯದಲ್ಲಿ) ನಿರುಧ್ಯ ಚ (ನಿರೋಧಿಸಿ) ಆತ್ಮನಃ (ತನ್ನ) ಪ್ರಾಣಂ (ಪ್ರಾಣವನ್ನು) ಮೂರ್ಧ್ನಿ (ಶಿರಸ್ಸಿನಲ್ಲಿ) ಆಧಾಯ (ನಿಲ್ಲಿಸಿ) ಯೋಗಧಾರಣಂ ಆಸ್ಥಿತಃ (ಯೋಗಧಾರಣೆಯಲ್ಲಿ ಸ್ಥಿತನಾಗಿ) ಓಂ ಇತಿ (ಓಂ ಎಂಬ) ಏಕಾಕ್ಷರಂ (ಏಕಾಕ್ಷರವಾದ) ಬ್ರಹ್ಮ (ಬ್ರಹ್ಮವನ್ನು) ವ್ಯಾಹರನ್ (ಉಚ್ಚರಿಸುತ್ತಾ) ಮಾಂ (ನನ್ನನ್ನು) ಅನುಸ್ಮರನ್ (ಸ್ಮರಿಸುತ್ತಾ) ದೇಹಂ (ದೇಹವನ್ನು) ತ್ಯಜನ್ (ಬಿಟ್ಟು) ಯಃ (ಯಾವನು) ಪ್ರಯಾತಿ (ಹೋಗುತ್ತಾನೆಯೋ) ಸಃ (ಅವನು) ಪರಮಾಂ ಗತಿಂ (ಪರಮಗತಿಯನ್ನು) ಯಾತಿ (ಹೊಂದುತ್ತಾನೆ).

**೧೨-೧೩.** ಸರ್ವೇಂದ್ರಿಯಗಳನ್ನು ಸಂಯಮಿಸಿ, ಮನಸ್ಸನ್ನು ಹೃದಯದಲ್ಲಿ ನಿರೋಧಿಸಿ, ತನ್ನ ಪ್ರಾಣವಾಯುವನ್ನು ಶಿರಸ್ಸಿನಲ್ಲಿ ನಿಲ್ಲಿಸಿ, ಯೋಗಧಾರಣೆಯಲ್ಲಿ ಸ್ಥಿತನಾಗಿ, 'ಓಂ' ಎಂಬ ಏಕಾಕ್ಷರವಾದ ಬ್ರಹ್ಮವನ್ನು[1] ಉಚ್ಚರಿಸುತ್ತಾ, ನನ್ನನ್ನು[2] ಸ್ಮರಿಸುತ್ತಾ, ಯಾವನು ದೇಹವನ್ನು ಬಿಟ್ಟು ಹೋಗುತ್ತಾನೆಯೋ ಅವನು ಪರಮಗತಿಯನ್ನು ಹೊಂದುತ್ತಾನೆ.

[1] ಬ್ರಹ್ಮವಾಚಕವಾದ ಓಂಕಾರವನ್ನು.
[2] ಓಂಕಾರದ ಅರ್ಥವಾಗಿರುವ ಈಶ್ವರನನ್ನು.

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥**

ಪಾರ್ಥ (ಎಲೈ ಅರ್ಜುನನೆ) ಯಃ ಅನನ್ಯಚೇತಾಃ (ಅನನ್ಯಚಿತ್ತನಾದ ಯಾವನು) ಮಾಂ (ನನ್ನನ್ನು) ನಿತ್ಯಶಃ (ಯಾವಜ್ಜೀವವೂ) ಸತತಂ (ನಿರಂತರವಾಗಿ) ಸ್ಮರತಿ (ಸ್ಮರಿಸುವನೋ) ಅಹಂ (ನಾನು) ತಸ್ಯ (ಆ) ನಿತ್ಯಯುಕ್ತಸ್ಯ (ನಿತ್ಯಯುಕ್ತನಾದ) ಯೋಗಿನಃ (ಯೋಗಿಗೆ) ಸುಲಭಃ (ಸುಲಭನು).

**೧೪.** ಎಲೈ ಅರ್ಜುನ, ಅನನ್ಯಚಿತ್ತನಾದ[1] ಯಾವನು ಯಾವಜ್ಜೀವವೂ ನಿರಂತರವಾಗಿ ನನ್ನನ್ನು ಸ್ಮರಿಸುವನೋ, ಆ ನಿತ್ಯಯುಕ್ತನಾದ ಯೋಗಿಗೆ ನಾನು ಸುಲಭನು.

[1] ಮತ್ತೊಂದರ ವಿಷಯದಲ್ಲಿ ಮನಸ್ಸಿಲ್ಲದವನು.

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥**

ಪರಮಾಂ (ಪರಮವಾದ) ಸಂಸಿದ್ಧಿಂ (ಸಿದ್ಧಿಯನ್ನು) ಗತಾಃ (ಹೊಂದಿರುವ) ಮಹಾತ್ಮಾನಃ (ಮಹಾತ್ಮರು) ಮಾಂ (ನನ್ನನ್ನು) ಉಪೇತ್ಯ (ಸೇರಿ) ದುಃಖಾಲಯಂ (ದುಃಖಕ್ಕೆ ಆಸ್ಪದವಾದ) ಅಶಾಶ್ವತಂ (ಶಾಶ್ವತವಲ್ಲದ) ಪುನರ್ಜನ್ಮ (ಪುನರ್ಜನ್ಮವನ್ನು) ನ ಆಪ್ನುವಂತಿ (ಹೊಂದುವುದಿಲ್ಲ).

**೧೫.** ಪರಮಸಿದ್ಧಿಯನ್ನು ಹೊಂದಿರುವ ಮಹಾತ್ಮರು, ನನ್ನನ್ನು ಸೇರಿ, ದುಃಖಾಲಯವೂ ಅಶಾಶ್ವತವೂ ಆದ ಪುನರ್ಜನ್ಮವನ್ನು ಪಡೆಯುವುದಿಲ್ಲ.

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥**

ಅರ್ಜುನ (ಎಲೈ ಅರ್ಜುನನೆ) ಆಬ್ರಹ್ಮಭುವನಾತ್ (ಬ್ರಹ್ಮಲೋಕದ ವರೆಗಿನ) ಲೋಕಾಃ (ಲೋಕಗಳು) ಪುನರಾವರ್ತಿನಃ (ಪುನಃ ಬರತಕ್ಕವುಗಳು) ತು (ಆದರೆ) ಕೌಂತೇಯ (ಎಲೈ ಕೌಂತೇಯನೆ) ಮಾಂ (ನನ್ನನ್ನು) ಉಪೇತ್ಯ (ಹೊಂದಿ) ಪುನರ್ಜನ್ಮ (ಪುನರ್ಜನ್ಮವು) ನ ವಿದ್ಯತೇ (ಇರುವುದಿಲ್ಲ).

**೧೬.** ಎಲೈ ಅರ್ಜುನ, ಬ್ರಹ್ಮಲೋಕದ ವರೆಗಿನ (ಎಲ್ಲಾ) ಲೋಕಗಳು ಪುನಃ ಬರತಕ್ಕವುಗಳು[1]. ಆದರೆ, ಎಲೈ ಕೌಂತೇಯ, ನನ್ನನ್ನು ಹೊಂದಿದರೆ ಪುನರ್ಜನ್ಮವಿಲ್ಲ.

1 ವಿನಾಶಸ್ವಭಾವವುಳ್ಳವುಗಳು.

**ಸಹಸ್ರಯುಗಪರ್ಯಂತಂ ಅಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥ ೧೭ ॥**

ಸಹಸ್ರಯುಗಪರ್ಯಂತಂ (ಸಹಸ್ರಯುಗಗಳ ವರೆಗೆ ಇರುವ) ಬ್ರಹ್ಮಣಃ (ಬ್ರಹ್ಮನ) ಯತ್ (ಯಾವ) ಅಹಃ (ಹಗಲನ್ನೂ) ಯುಗಸಹಸ್ರಾಂತಾಂ (ಸಾವಿರ ಯುಗಗಳ ವರೆಗೆ ಇರುವ) ರಾತ್ರಿಂ (ರಾತ್ರಿಯನ್ನೂ) [ಯೇ (ಯಾರು)] ವಿದುಃ (ತಿಳಿದಿರುವರೋ) ತೇ ಜನಾಃ (ಆ ಜನರು) ಅಹೋರಾತ್ರವಿದಃ (ಅಹೋರಾತ್ರಿಗಳನ್ನು ಬಲ್ಲವರು).

**೧೭.** ಸಾವಿರ ಯುಗಗಳ ವರೆಗೆ ಇರುವ ಬ್ರಹ್ಮನ ಹಗಲನ್ನೂ (ಮತ್ತು) ಸಾವಿರ ಯುಗಗಳ ವರೆಗೆ ಇರುವ (ಬ್ರಹ್ಮನ) ರಾತ್ರಿಯನ್ನೂ ಯಾರು ತಿಳಿದಿರುವರೋ ಅವರು ಅಹೋರಾತ್ರಿಗಳನ್ನು ಬಲ್ಲವರು.

[ಈ ಲೋಕಗಳು ಕಾಲಪರಿಚ್ಛಿನ್ನವಾದುದರಿಂದ ವಿನಾಶಸ್ವಭಾವವುಳ್ಳವುಗಳು ಎಂದರ್ಥ.]

**ಅವ್ಯಕ್ತಾದ್ ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

ಅಹರಾಗಮೇ (ಹಗಲು ಬಂದಾಗ) ಅವ್ಯಕ್ತಾತ್ (ಅವ್ಯಕ್ತದಿಂದ) ಸರ್ವಾಃ (ಎಲ್ಲಾ) ವ್ಯಕ್ತಯಃ (ಚರಾಚರ ವಸ್ತುಗಳು) ಪ್ರಭವಂತಿ (ಉಂಟಾಗುತ್ತವೆ) ರಾತ್ರ್ಯಾಗಮೇ (ರಾತ್ರಿಯು ಬಂದಾಗ), ತತ್ರ ಅವ್ಯಕ್ತಸಂಜ್ಞಕೇ ಏವ (ಅವ್ಯಕ್ತವೆಂಬ ಹೆಸರುಳ್ಳ ಅದರಲ್ಲಿಯೇ) ಪ್ರಲೀಯಂತೇ (ಲಯವನ್ನು ಹೊಂದುತ್ತವೆ.)

**೧೮.** ಬ್ರಹ್ಮನ ಹಗಲು ಬಂದಾಗ ಅವ್ಯಕ್ತದಿಂದ ಎಲ್ಲಾ ಚರಾಚರ ವಸ್ತುಗಳು ಹುಟ್ಟುತ್ತವೆ. ಬ್ರಹ್ಮನ ರಾತ್ರಿಯು ಬಂದಾಗ ಅವ್ಯಕ್ತವೆಂಬ ಹೆಸರುಳ್ಳ ಅದರಲ್ಲಿಯೇ ಲಯವನ್ನು ಹೊಂದುತ್ತವೆ.

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

ಪಾರ್ಥ (ಎಲೈ ಅರ್ಜುನನೆ) ಸಃ ಏವ ಅಯಂ ಭೂತಗ್ರಾಮಃ (ಅಂತಹ ಈ ಭೂತಸಮುದಾಯವು) ಭೂತ್ವಾ ಭೂತ್ವಾ (ಹುಟ್ಟಿ ಹುಟ್ಟಿ) ರಾತ್ರ್ಯಾಗಮೇ (ರಾತ್ರಿ ಬಂದಾಗ) ಪ್ರಲೀಯತೇ (ಲಯವಾಗುತ್ತದೆ) ಅಹರಾಗಮೇ (ಹಗಲಾದಾಗ) ಅವಶಃ (ಸ್ವಾತಂತ್ರ್ಯವಿಲ್ಲದೆ) ಪ್ರಭವತಿ (ಹುಟ್ಟುತ್ತದೆ).

**೧೯.** ಎಲೈ ಅರ್ಜುನ, ಅಂತಹ ಈ ಭೂತಸಮುದಾಯವೇ (ಹಗಲಿನಲ್ಲಿ) ಹುಟ್ಟಿ ಹುಟ್ಟಿ, ರಾತ್ರಿ ಬಂದಾಗ ಲಯವಾಗುತ್ತದೆ (ಮತ್ತು ಪುನಃ) ಹಗಲಾದಾಗ ಸ್ವಾತಂತ್ರ್ಯವಿಲ್ಲದೆ ಹುಟ್ಟುತ್ತದೆ.

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

ತು (ಆದರೆ) ತಸ್ಮಾತ್ (ಆ) ಅವ್ಯಕ್ತಾತ್ (ಅವ್ಯಕ್ತಕ್ಕಿಂತಲೂ) ಪರಃ (ವ್ಯತಿರಿಕ್ತವಾದ) ಅನ್ಯಃ (ವಿಲಕ್ಷಣವಾದ) ಸನಾತನಃ (ಸನಾತನವಾದ) ಅವ್ಯಕ್ತಃ (ಅವ್ಯಕ್ತವಾದ) ಯಃ (ಯಾವ) ಭಾವಃ (ಭಾವವುಂಟೋ) ಸಃ (ಅದು) ಸರ್ವೇಷು ಭೂತೇಷು (ಎಲ್ಲಾ ಭೂತಗಳೂ) ನಶ್ಯತ್ಸು (ನಾಶವಾದರೂ) ನ ವಿನಶ್ಯತಿ (ನಾಶವಾಗುವುದಿಲ್ಲ).

**೨೦.** ಆದರೆ ಆ ಅವ್ಯಕ್ತಕ್ಕಿಂತಲೂ[1] ವ್ಯತಿರಿಕ್ತವೂ ವಿಲಕ್ಷಣವೂ ಸನಾತನವೂ ಅವ್ಯಕ್ತವೂ[2] ಆದ ಯಾವ ಭಾವವುಂಟೋ[3] ಅದು ಸರ್ವ ಪ್ರಾಣಿಗಳೂ ನಾಶವಾದರೂ ನಾಶವಾಗುವುದಿಲ್ಲ.

1 ಹಿಂದೆ ಹೇಳಿದ ಭೂತಸಮುದಾಯಕ್ಕೆ ಕಾರಣವಾದ ಅವಿದ್ಯಾಲಕ್ಷಣವುಳ್ಳ ಅವ್ಯಕ್ತಕ್ಕಿಂತ.

2 ಇಂದ್ರಿಯಗಳಿಗೆ ಗೋಚರವಲ್ಲದ.

3 ಅಕ್ಷರವೆಂಬ ಪರಬ್ರಹ್ಮ.

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥**

[ಯಃ (ಯಾವುದು)] ಅವ್ಯಕ್ತಃ (ಅವ್ಯಕ್ತವೂ) ಅಕ್ಷರಃ (ಅಕ್ಷರವೂ) ಇತಿ ಉಕ್ತಃ (ಎಂದು ಹೇಳಲ್ಪಟ್ಟಿದೆಯೋ) ತಂ (ಅದನ್ನು) ಪರಮಾಂ (ಪರಮವಾದ) ಗತಿಂ (ಗತಿಯೆಂದು) ಆಹುಃ (ಹೇಳುತ್ತಾರೆ) ಯತ್ (ಯಾವುದನ್ನು) ಪ್ರಾಪ್ಯ (ಹೊಂದಿ) ನ ನಿವರ್ತಂತೇ (ಹಿಂತಿರುಗುವುದಿಲ್ಲವೋ) ತತ್ (ಅದು) ಮಮ (ನನ್ನ) ಪರಮಂ (ಶ್ರೇಷ್ಠವಾದ) ಧಾಮ (ಸ್ಥಾನ).

೨೧. (ಯಾವುದು) ಅವ್ಯಕ್ತವೂ ಅಕ್ಷರವೂ ಎಂದು ಹೇಳಲ್ಪಟ್ಟಿದೆಯೋ ಅದೇ ಪರಮಗತಿಯೆಂದು ಹೇಳುತ್ತಾರೆ. ಯಾವುದನ್ನು ಹೊಂದಿ (ಸಂಸಾರಕ್ಕೆ) ಹಿಂತಿರುಗುವುದಿಲ್ಲವೋ ಅದೇ ನನ್ನ ಶ್ರೇಷ್ಠವಾದ ಸ್ಥಾನ.[1]

1 ವಿಷ್ಣುವಿನ ಪರಮಪದ (ಶ್ರೀಶಂಕರ).

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥ ೨೨ ॥**

ಪಾರ್ಥ (ಎಲೈ ಅರ್ಜುನನೆ) ಭೂತಾನಿ (ಪ್ರಾಣಿಗಳು) ಯಸ್ಯ (ಯಾವನ) ಅಂತಃಸ್ಥಾನಿ (ಒಳಗೆ ಇರುವುವೋ) ಯೇನ (ಯಾವನಿಂದ) ಇದಂ ಸರ್ವಂ (ಇವೆಲ್ಲವೂ) ತತಂ (ವ್ಯಾಪ್ತವಾಗಿದೆಯೋ) ಸಃ ಪರಃ ಪುರುಷಃ ತು (ಆ ಪರಪುರುಷನು) ಅನನ್ಯಯಾ (ಅನನ್ಯವಾದ) ಭಕ್ತ್ಯಾ (ಭಕ್ತಿಯಿಂದ) ಲಭ್ಯಃ (ಲಭ್ಯನು).

೨೨. ಎಲೈ ಅರ್ಜುನ, ಪ್ರಾಣಿಗಳು ಯಾವನ ಒಳಗೆ ಇರುವುವೋ, ಯಾವನಿಂದ ಇವೆಲ್ಲಾ ವ್ಯಾಪ್ತವಾಗಿದೆಯೋ, ಆ ಪರಮಪುರುಷನು ಅನನ್ಯವಾದ ಭಕ್ತಿಯಿಂದ ಲಭ್ಯನು.

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥**

ಭರತರ್ಷಭ (ಎಲೈ ಅರ್ಜುನನೆ) ಯತ್ರ ಕಾಲೇ (ಯಾವ ಕಾಲದಲ್ಲಿ) ಪ್ರಯಾತಾಃ ತು (ಪ್ರಯಾಣಮಾಡುವ) ಯೋಗಿನಃ (ಯೋಗಿಗಳು) ಅನಾವೃತ್ತಿಂ

(ಹಿಂತಿರುಗದಿರುವಿಕೆಯನ್ನು) ಆವೃತ್ತಿಂ ಚ (ಹಿಂತಿರುಗುವಿಕೆಯನ್ನು) ಯಾಂತಿ ಏವ (ಹೊಂದುವರೋ) ತಂ (ಆ) ಕಾಲಂ (ಕಾಲವನ್ನು) ವಕ್ಷ್ಯಾಮಿ (ಹೇಳುತ್ತೇನೆ).

**೨೩.** ಎಲೈ ಅರ್ಜುನ, ಯಾವ ಕಾಲದಲ್ಲಿ ಪ್ರಯಾಣಮಾಡುವ ಯೋಗಿಗಳು ಮೋಕ್ಷವನ್ನೂ ಸಂಸಾರವನ್ನೂ ಹೊಂದುವರೋ ಆ ಕಾಲವನ್ನು ಹೇಳುತ್ತೇನೆ.

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥**

ಅಗ್ನಿಃ (ಅಗ್ನಿ) ಜ್ಯೋತಿಃ (ಜ್ಯೋತಿ) ಅಹಃ (ಹಗಲು) ಷಣ್ಮಾಸಾಃ ಉತ್ತರಾಯಣಂ (ಆರು ಮಾಸಗಳುಳ್ಳ ಉತ್ತರಾಯಣ) ತತ್ರ (ಈ ಮಾರ್ಗದಲ್ಲಿ) ಪ್ರಯಾತಾಃ (ಪ್ರಯಾಣ ಮಾಡಿದ) ಬ್ರಹ್ಮವಿದಃ (ಬ್ರಹ್ಮಜ್ಞಾನಿಗಳಾದ) ಜನಾಃ (ಜನರು) ಬ್ರಹ್ಮ (ಬ್ರಹ್ಮವನ್ನು) ಗಚ್ಛಂತಿ (ಸೇರುತ್ತಾರೆ).

**೨೪.** ಅಗ್ನಿ,[1] ಜ್ಯೋತಿ,[2] ಹಗಲು,[3] ಶುಕ್ಲಪಕ್ಷ,[4] ಉತ್ತರಾಯಣದ ಆರು ಮಾಸಗಳು[5] — ಈ ಮಾರ್ಗದಲ್ಲಿ ಪ್ರಯಾಣಮಾಡಿದ ಬ್ರಹ್ಮಜ್ಞಾನಿಗಳಾದ ಜನರು ಬ್ರಹ್ಮವನ್ನು ಸೇರುತ್ತಾರೆ.

1-2 ಕಾಲಾಭಿಮಾನಿಗಳಾದ ದೇವತೆಗಳು
3 ಹಗಲಿಗೆ ಅಭಿಮಾನಿಯಾದ ದೇವತೆ.
4 ಶುಕ್ಲಪಕ್ಷದ ದೇವತೆ.
5 ಉತ್ತರಾಯಣದ ಅಭಿಮಾನಿ ದೇವತೆ.

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿಃ ಯೋಗೀ ಪ್ರಾಪ್ಯ ನಿವರ್ತತೇ ॥ ೨೫ ॥**

ಧೂಮಃ (ಧೂಮ) ರಾತ್ರಿಃ (ರಾತ್ರಿ) ತಥಾ (ಹಾಗೆಯೇ) ಕೃಷ್ಣಃ (ಕೃಷ್ಣಪಕ್ಷ) ತತ್ರ (ಈ ಮಾರ್ಗದಲ್ಲಿ) [ಪ್ರಯಾತಾಃ (ಪ್ರಯಾಣಮಾಡಿದ)] ಯೋಗೀ (ಯೋಗಿಯು) ಚಾಂದ್ರಮಸಂ (ಚಂದ್ರನ) ಜ್ಯೋತಿಃ (ಜ್ಯೋತಿಯನ್ನು) ಪ್ರಾಪ್ಯ (ಸೇರಿ) ನಿವರ್ತತೇ (ಹಿಂತಿರುಗುವನು).

**೨೫.** ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನದ ಆರು ಮಾಸಗಳು — ಈ ಮಾರ್ಗದಲ್ಲಿ (ಪ್ರಯಾಣಮಾಡಿದ) ಯೋಗಿಯು ಚಂದ್ರನ ಜ್ಯೋತಿಯನ್ನು ಸೇರಿ (ಈ ಲೋಕಕ್ಕೆ ಪುನಃ) ಹಿಂತಿರುಗುತ್ತಾನೆ.

[ಈ ಶ್ಲೋಕದಲ್ಲಿಯೂ ಕೂಡ ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನದ ಆರು ಮಾಸಗಳು ಎಂದರೆ ಆಯಾ ಅಭಿಮಾನಿ ದೇವತೆಗಳು.]

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಂ ಅನ್ಯಯಾವರ್ತತೇ ಪುನಃ ॥ ೨೬ ॥**

ತು ಜಗತಃ (ಜಗತ್ತಿನ) ಶುಕ್ಲಕೃಷ್ಣೇ (ಶುಕ್ಲಕೃಷ್ಣಗಳೆಂಬ) ಏತೇ (ಈ) ಗತೀ (ಗತಿಗಳು) ಶಾಶ್ವತೇ (ಶಾಶ್ವತಗಳೆಂದು) ಮತೇ (ಮತವು, ಹೇಳಲ್ಪಟ್ಟಿದೆ) ಏಕಯಾ (ಒಂದರಿಂದ) ಅನಾವೃತ್ತಿಂ (ಅನಾವೃತ್ತಿಯನ್ನು) ಯಾತಿ (ಹೊಂದುವನು) ಅನ್ಯಯಾ (ಇನ್ನೊಂದರಿಂದ) ಪುನಃ (ಪುನಃ) ಆವರ್ತತೇ (ಹಿಂತಿರುಗುವನು).

**೨೬.** ಜಗತ್ತಿನಲ್ಲಿ ಶುಕ್ಲಕೃಷ್ಣಪಕ್ಷಗಳೆಂಬ ಈ ಎರಡು ಗತಿಗಳು ಶಾಶ್ವತವಾದುವುಗಳೆಂದು ಹೇಳಲ್ಪಟ್ಟಿದೆ. (ಈ ಎರಡರಲ್ಲಿ) ಒಂದರಿಂದ ಅನಾವೃತ್ತಿಯನ್ನು ಹೊಂದುವನು. ಇನ್ನೊಂದರಿಂದ (ಸಂಸಾರಕ್ಕೆ) ಪುನಃ ಹಿಂತಿರುಗುವನು.

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ ಸರ್ವೇಷು ಕಾಲೇಷು ಯೋಗಯುಕ್ತೋ**
**ಭವಾರ್ಜುನ ॥ ೨೭ ॥**

ಪಾರ್ಥ (ಎಲೈ ಅರ್ಜುನನೆ) ಏತೇ (ಈ) ಸೃತೀ (ಮಾರ್ಗಗಳನ್ನು) ಜಾನನ್ (ತಿಳಿದುಕೊಂಡು) ಕಶ್ಚನ ಯೋಗೀ (ಯಾವ ಯೋಗಿಯೂ) ನ ಮುಹ್ಯತಿ (ಮರುಳಾಗುವುದಿಲ್ಲ) ತಸ್ಮಾತ್ (ಆದುದರಿಂದ) ಅರ್ಜುನ (ಎಲೈ ಅರ್ಜುನನೆ) ಸರ್ವೇಷು (ಎಲ್ಲಾ) ಕಾಲೇಷು (ಕಾಲಗಳಲ್ಲಿಯೂ) ಯೋಗಯುಕ್ತಃ ಭವ (ಯೋಗಯುಕ್ತನಾಗಿರು).

**೨೭.** ಎಲೈ ಪಾರ್ಥ, ಈ ಎರಡು ಮಾರ್ಗಗಳನ್ನು ತಿಳಿದುಕೊಂಡು ಯಾವ ಯೋಗಿಯೂ ಮರುಳಾಗುವುದಿಲ್ಲ. ಆದುದರಿಂದ, ಎಲೈ ಅರ್ಜುನ, ಎಲ್ಲಾ ಕಾಲಗಳಲ್ಲಿಯೂ ಯೋಗಯುಕ್ತನಾಗಿರು.

**ವೇದೇಷು ಯಜ್ಞೇಷು ತಪಃಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ॥**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥ ೨೮ ॥**

ಯೋಗೀ (ಯೋಗಿಯು) ಇದಂ ವಿದಿತ್ವಾ (ಇದನ್ನು ತಿಳಿದು) ವೇದೇಷು (ವೇದಗಳಲ್ಲಿಯೂ) ಯಜ್ಞೇಷು (ಯಜ್ಞಗಳಲ್ಲಿಯೂ) ತಪಃಸು (ತಪಸ್ಸುಗಳಲ್ಲಿಯೂ)

ದಾನೇಷು ಚ ಏವ (ದಾನಗಳಲ್ಲಿಯೂ) ಯತ್ (ಯಾವ) ಪುಣ್ಯಫಲಂ (ಪುಣ್ಯಫಲವು) ಪ್ರದಿಷ್ಟಂ (ಹೇಳಲ್ಪಟ್ಟದೆಯೋ) ತತ್ಸರ್ವಂ (ಅದೆಲ್ಲವನ್ನೂ) ಅತ್ಯೇತಿ (ಅತಿಕ್ರಮಿಸುತ್ತಾನೆ) ಚ (ಮತ್ತು) ಆದ್ಯಂ (ಆದ್ಯವಾದ) ಪರಂ ಸ್ಥಾನಂ (ಪರಸ್ಥಾನವನ್ನು) ಉಪೈತಿ (ಹೊಂದುತ್ತಾನೆ).

೨೮. ಇದನ್ನು[1] ತಿಳಿದ ಯೋಗಿಯು ವೇದಗಳಲ್ಲಿಯೂ ಯಜ್ಞಗಳಲ್ಲಿಯೂ, ತಪಸ್ಸುಗಳಲ್ಲಿಯೂ, ದಾನಗಳಲ್ಲಿಯೂ ಯಾವ ಪುಣ್ಯಫಲವು (ಆಗುವುದೆಂದು ಶಾಸ್ತ್ರದಲ್ಲಿ) ಹೇಳಿದೆಯೋ, ಅದೆಲ್ಲವನ್ನೂ ಅತಿಕ್ರಮಿಸುತ್ತಾನೆ ಮತ್ತು ಆದ್ಯವಾದ ಪರಮಸ್ಥಾನವನ್ನು ಸೇರುತ್ತಾನೆ.

[1] (ಈ ಅಧ್ಯಾಯದ ಪ್ರಾರಂಭದಲ್ಲಿ) ಏಳು ಪ್ರಶ್ನೆಗಳಿಗೆ ಉತ್ತರವಾಗಿ ಹೇಳಿರುವ ವಿಷಯವನ್ನು (ಶ್ರೀಶಂಕರ). ಏಳನೆಯ ಮತ್ತು ಎಂಟನೆಯ ಅಧ್ಯಾಯಗಳಲ್ಲಿ ಹೇಳಲ್ಪಟ್ಟ ಭಗವಂತನ ಮಾಹಾತ್ಮ್ಯೆಯನ್ನು (ಶ್ರೀರಾಮಾನುಜ).

ಇತಿ ಅಕ್ಷರಬ್ರಹ್ಮಯೋಗೋ ನಾಮಾಷ್ಟಮೋಽಧ್ಯಾಯಃ ।

ಅಕ್ಷರಬ್ರಹ್ಮಯೋಗವೆಂಬ ಎಂಟನೆಯ ಅಧ್ಯಾಯವು ಮುಗಿಯಿತು.

# ಒಂಭತ್ತನೆಯ ಅಧ್ಯಾಯ

## ರಾಜವಿದ್ಯಾ-ರಾಜಗುಹ್ಯಯೋಗ

ಶ್ರೀಭಗವಾನ್ ಉವಾಚ

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ**
**ಮೋಕ್ಷ್ಯಸೇಽಶುಭಾತ್ ॥ ೧ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಇದಂ (ಈ) ಗುಹ್ಯತಮಂ (ಗುಹ್ಯತಮವಾದ) ವಿಜ್ಞಾನಸಹಿತಂ (ವಿಜ್ಞಾನದಿಂದ ಕೂಡಿದ) ಜ್ಞಾನಂ (ಜ್ಞಾನವನ್ನು) ಅನಸೂಯವೇ ತೇ (ಅಸೂಯಾರಹಿತನಾದ ನಿನಗೆ) ಪ್ರವಕ್ಷ್ಯಾಮಿ (ಹೇಳುವೆನು) ಯತ್ (ಯಾವುದನ್ನು) ಜ್ಞಾತ್ವಾ (ತಿಳಿದುಕೊಂಡು) ಅಶುಭಾತ್ (ಸಂಸಾರದಿಂದ) ಮೋಕ್ಷ್ಯಸೇ (ಮುಕ್ತನಾಗುವೆ).

ಶ್ರೀಕೃಷ್ಣನು ಹೇಳಿದನು

೧. ಯಾವುದನ್ನು ತಿಳಿದುಕೊಂಡು ಸಂಸಾರದಿಂದ ಮುಕ್ತನಾಗುವೆಯೋ (ಅಂತಹ) ಈ ಗುಹ್ಯತಮವಾದ ವಿಜ್ಞಾನದಿಂದ ಕೂಡಿದ[1] ಜ್ಞಾನವನ್ನು ಅಸೂಯಾರಹಿತನಾದ ನಿನಗೆ ಹೇಳುವೆನು.

1 ಅನುಭವಯುಕ್ತವಾದ.

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥**

ಇದಂ (ಇದು) ರಾಜವಿದ್ಯಾ (ರಾಜವಿದ್ಯೆ) ರಾಜಗುಹ್ಯಂ (ರಾಜಗುಹ್ಯ) ಉತ್ತಮಂ (ಉತ್ತಮವಾದ) ಪವಿತ್ರಂ (ಪವಿತ್ರ) ಪ್ರತ್ಯಕ್ಷಾವಗಮಂ (ಪ್ರತ್ಯಕ್ಷವಾಗಿ ತಿಳಿಯಬರತಕ್ಕದ್ದು) ಧರ್ಮ್ಯಂ (ಧರ್ಮದಿಂದ ಕೂಡಿದ್ದು) ಕರ್ತುಂ (ಅನುಷ್ಠಿಸಲು) ಸುಸುಖಂ (ಸುಲಭವಾದದ್ದು) ಅವ್ಯಯಂ (ಅವ್ಯಯವಾದದ್ದು).

೨. ಇದು ರಾಜವಿದ್ಯೆ,[1] ರಾಜಗುಹ್ಯ,[2] ಉತ್ತಮವಾದ ಪವಿತ್ರ,[3] ಪ್ರತ್ಯಕ್ಷವಾಗಿ ತಿಳಿಯಬರತಕ್ಕದ್ದು,[4] ಧರ್ಮದಿಂದ ಕೂಡಿದ್ದು, ಅನುಷ್ಠಿಸುವುದಕ್ಕೆ ಸುಲಭವಾದದ್ದು ಮತ್ತು ಅವ್ಯಯವಾದದ್ದು.[5]

1 ವಿದ್ಯೆಗಳಿಗೆಲ್ಲಾ ರಾಜ.

2 ರಹಸ್ಯಗಳಿಗೆಲ್ಲಾ ರಾಜ.

3 ಸಾವಿರಾರು ಜನ್ಮಗಳಲ್ಲಿ ಸಂಚಿತವಾದ ಧರ್ಮಾಧರ್ಮವೆಂಬ ಕರ್ಮವನ್ನು ಒಂದೇ ಕ್ಷಣದಲ್ಲಿ ನಾಶಮಾಡತಕ್ಕದ್ದು.

4 ಸುಖದುಃಖಗಳಂತೆ ನಮಗೆ ಸಾಕ್ಷಾತ್ತಾಗಿ ತಿಳಿಯಬರುವಂತಹದ್ದು.

5 ಕರ್ಮಫಲದ ಹಾಗೆ ವ್ಯಯವಿಲ್ಲದ್ದು.

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩ ॥**

ಪರಂತಪ (ಎಲೈ ಪರಂತಪನೆ) ಅಸ್ಯ (ಈ) ಧರ್ಮಸ್ಯ (ಧರ್ಮದಲ್ಲಿ) ಅಶ್ರದ್ದಧಾನಾಃ (ಶ್ರದ್ಧೆಯಿಲ್ಲದಿರುವ) ಪುರುಷಾಃ (ಮನುಷ್ಯರು) ಮಾಂ (ನನ್ನನ್ನು) ಅಪ್ರಾಪ್ಯ (ಹೊಂದದೆ) ಮೃತ್ಯು-ಸಂಸಾರ-ವರ್ತ್ಮನಿ (ಮೃತ್ಯುಸಂಸಾರದ ಮಾರ್ಗಕ್ಕೆ) ನಿವರ್ತಂತೇ (ಹಿಂತಿರುಗುತ್ತಾರೆ).

**೩.** ಎಲೈ ಪರಂತಪ, ಈ ಧರ್ಮದಲ್ಲಿ ಶ್ರದ್ಧೆಯಿಲ್ಲದಿರುವ ಮನುಷ್ಯರು ನನ್ನನ್ನು ಹೊಂದದೆ ಮೃತ್ಯುಸಂಸಾರದ[1] ಮಾರ್ಗಕ್ಕೆ[2] ಹಿಂತಿರುಗುತ್ತಾರೆ.

1 ಮೃತ್ಯುವಿನಿಂದ ಕೂಡಿದ ಸಂಸಾರ ಮೃತ್ಯುಸಂಸಾರ.

2 ನರಕ, ತಿರ್ಯಗ್ಜನ್ಮ ಮುಂತಾದುವುಗಳನ್ನು ಪಡೆಯುವ ಮಾರ್ಗ.

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥**

ಅವ್ಯಕ್ತಮೂರ್ತಿನಾ (ಅವ್ಯಕ್ತಮೂರ್ತಿಯಾದ) ಮಯಾ (ನನ್ನಿಂದ) ಇದಂ (ಈ) ಸರ್ವಂ ಜಗತ್ (ಜಗತ್ತೆಲ್ಲಾ) ತತಂ (ವ್ಯಾಪಿಸಲ್ಪಟ್ಟಿದೆ) ಸರ್ವಭೂತಾನಿ (ಎಲ್ಲಾ ಪ್ರಾಣಿಗಳು) ಮತ್ಸ್ಥಾನಿ (ನನ್ನಲ್ಲಿ ಇರುವುವು) ಅಹಂ ಚ (ನಾನು) ತೇಷು (ಅವುಗಳಲ್ಲಿ) ನ ಅವಸ್ಥಿತಃ (ಇರುವುದಿಲ್ಲ).

**೪.** ಅವ್ಯಕ್ತಮೂರ್ತಿಯಾದ[1] ನನ್ನಿಂದ ಈ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟಿದೆ. ಎಲ್ಲಾ ಪ್ರಾಣಿಗಳೂ ನನ್ನಲ್ಲಿರುವುವು,[2] ನಾನು ಅವುಗಳಲ್ಲಿ ಇಲ್ಲ.[3]

1 ಇಂದ್ರಿಯಗಳಿಗೆ ಗೋಚರವಾಗದ ಸ್ವಭಾವವುಳ್ಳವನು.

2 ಆತ್ಮನಿಲ್ಲದಿದ್ದರೆ ಯಾವ ಭೂತವೂ ವ್ಯವಹಾರಕ್ಕೆ ಯೋಗ್ಯವಾಗುವುದಿಲ್ಲ. ಆದುದರಿಂದ ಅವು ಪರಮಾತ್ಮನಲ್ಲಿ ಇವೆ ಎಂದರೆ ಇವನಿಂದ ಆತ್ಮವಂತಗಳಾಗಿವೆ.

3 ಪರಮಾತ್ಮನು ಪ್ರಾಣಿಗಳಿಗೆಲ್ಲಾ ಆತ್ಮನಾಗಿದ್ದರೂ ಮೂರ್ತವಸ್ತುವಿನಂತೆ ಸೇರಿಕೊಂಡಿರುವುದಿಲ್ಲ.

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

ಚ ಭೂತಾನಿ (ಮತ್ತು ಪ್ರಾಣಿಗಳು) ನ ಮತ್ಸ್ಥಾನಿ (ನನ್ನಲ್ಲಿರುವುದಿಲ್ಲ) ಮೇ (ನನ್ನ) ಐಶ್ವರಂ ಯೋಗಂ (ಐಶ್ವರಯೋಗವನ್ನು) ಪಶ್ಯ (ನೋಡು) ಭೂತ-ಭೃತ್ ಚ (ಭೂತಗಳನ್ನು ಧರಿಸಿದ್ದರೂ) ನ ಭೂತಸ್ಥಃ (ಭೂತಗಳಲ್ಲಿಲ್ಲ) ಮಮ (ನನ್ನ) ಆತ್ಮಾ (ಆತ್ಮವು) ಭೂತಭಾವನಃ (ಭೂತಭಾವನವಾಗಿದೆ).

**೫.** ಮತ್ತು ಪ್ರಾಣಿಗಳು ನನ್ನಲ್ಲಿರುವುದಿಲ್ಲ. ನನ್ನ ಈಶ್ವರಸಂಬಂಧವಾದ ಯೋಗವನ್ನು ನೋಡು. (ನಾನು) ಭೂತಗಳನ್ನು ಧರಿಸಿದ್ದರೂ ಭೂತಗಳಲ್ಲಿಲ್ಲ.[1] ನನ್ನ ಆತ್ಮವು ಭೂತಭಾವನವಾಗಿದೆ.[2]

[1] ಅಸಂಗನಾದರೂ ಭೂತಗಳನ್ನು ಧರಿಸಿರುತ್ತಾನೆ (ಶ್ರೀಶಂಕರ). ಸಕಲ ಭೂತಗಳಿಗೆ ಇವನು ಭರ್ತೃವಾಗಿದ್ದರೂ ಅವುಗಳಿಂದ ಇವನಿಗೆ ಯಾವ ಉಪಕಾರವೂ ಇಲ್ಲವು (ಶ್ರೀರಾಮಾನುಜ).

[2] ಭೂತಗಳನ್ನು ಉಂಟುಮಾಡುತ್ತದೆ ಅಥವಾ ವರ್ಧಿಸುತ್ತದೆ (ಶ್ರೀಶಂಕರ). ತನ್ನ ಮನೋರೂಪವಾದ ಸಂಕಲ್ಪಮಾತ್ರದಿಂದಲೇ ಭೂತಗಳ ಅಸ್ತಿತ್ವಕ್ಕೆ ಆಧಾರಕ್ಕೆ ಮತ್ತು ನಿಯಮಕ್ಕೆ ಕಾರಣವಾಗಿರುವವನು (ಶ್ರೀರಾಮಾನುಜ).

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

ಯಥಾ (ಹೇಗೆ) ಸರ್ವತ್ರಗಃ (ಎಲ್ಲೆಲ್ಲೂ ಸಂಚರಿಸುವ) ಮಹಾನ್ ವಾಯುಃ (ಮಹಾವಾಯುವು) ನಿತ್ಯಂ (ಯಾವಾಗಲೂ) ಆಕಾಶಸ್ಥಿತಃ (ಆಕಾಶದಲ್ಲಿ ಸ್ಥಿತವಾಗಿರುವುದೋ) ತಥಾ (ಹಾಗೆಯೇ) ಸರ್ವಾಣಿ (ಸಮಸ್ತ) ಭೂತಾನಿ (ಪ್ರಾಣಿಗಳು) ಮತ್ಸ್ಥಾನಿ (ನನ್ನಲ್ಲಿ ಇರುವುವು) ಇತಿ (ಎಂದು) ಉಪಧಾರಯ (ತಿಳಿದುಕೊ).

**೬.** ಹೇಗೆ ಎಲ್ಲೆಲ್ಲೂ ಸಂಚರಿಸುವ ಮಹಾವಾಯುವು ಯಾವಾಗಲೂ ಆಕಾಶದಲ್ಲಿ ಸ್ಥಿತವಾಗಿರುವುದೋ ಹಾಗೆಯೇ ಸಮಸ್ತ ಪ್ರಾಣಿಗಳೂ ನನ್ನಲ್ಲಿ ಇರುವುವು ಎಂದು ತಿಳಿದುಕೊ.

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**

ಕೌಂತೇಯ (ಎಲೈ ಅರ್ಜುನನೆ) ಸರ್ವಭೂತಾನಿ (ಎಲ್ಲಾ ಪ್ರಾಣಿಗಳು) ಕಲ್ಪಕ್ಷಯೇ (ಪ್ರಳಯಕಾಲದಲ್ಲಿ) ಮಾಮಿಕಾಂ (ನನ್ನ) ಪ್ರಕೃತಿಂ (ಪ್ರಕೃತಿಯನ್ನು)

ಯಾಂತಿ (ಸೇರುತ್ತವೆ) ಪುನಃ (ಪುನಃ) ಕಲ್ಪಾದೌ (ಸೃಷ್ಟಿಕಾಲದಲ್ಲಿ) ತಾನಿ (ಅವುಗಳನ್ನು) ಅಹಂ (ನಾನು) ವಿಸೃಜಾಮಿ (ಸೃಷ್ಟಿಸುವೆನು).

೭. ಎಲೈ ಅರ್ಜುನ, ಎಲ್ಲಾ ಪ್ರಾಣಿಗಳೂ ಪ್ರಳಯಕಾಲದಲ್ಲಿ ನನ್ನ ಪ್ರಕೃತಿಯನ್ನು[1] ಸೇರುತ್ತವೆ; ಪುನಃ ಸೃಷ್ಟಿಯ ಕಾಲದಲ್ಲಿ ಅವುಗಳನ್ನು ನಾನು ಸೃಷ್ಟಿಸುವೆನು.

[1] ತ್ರಿಗುಣಾತ್ಮಿಕವಾದ ಅಪರಾ ಪ್ರಕೃತಿ (ಶ್ರೀಶಂಕರ). ತಮಃಶಬ್ದದಿಂದ ಹೇಳಲ್ಪಡುವ ನಾಮರೂಪವಿಭಾಗಗಳಿಗೆ ಅನರ್ಹವಾದ ಅವಸ್ಥೆ (ಶ್ರೀರಾಮಾನುಜ).

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥**

ಸ್ವಾಂ (ನನ್ನ) ಪ್ರಕೃತಿಂ (ಪ್ರಕೃತಿಯನ್ನು) ಅವಷ್ಟಭ್ಯ (ಅಧಿಷ್ಠಾನವಾಗಿ ಮಾಡಿಕೊಂಡು) ಪ್ರಕೃತೇಃ ವಶಾತ್ (ಪ್ರಕೃತಿಯ ವಶದಿಂದ) ಅವಶಂ (ಅಸ್ವತಂತ್ರವಾಗಿರುವ) ಇದಂ (ಈ) ಕೃತ್ಸ್ನಂ (ಸಮಸ್ತ) ಭೂತಗ್ರಾಮಂ (ಪ್ರಾಣಿವರ್ಗವನ್ನು) ಪುನಃ ಪುನಃ (ಪುನಃ ಪುನಃ) ವಿಸೃಜಾಮಿ (ಸೃಷ್ಟಿಸುತ್ತಿರುವೆನು).

೮. ನನ್ನ ಪ್ರಕೃತಿಯನ್ನು ಅಧಿಷ್ಠಾನವಾಗಿ ಮಾಡಿಕೊಂಡು, ಪ್ರಕೃತಿಯ[1] ವಶದಿಂದ ಅಸ್ವತಂತ್ರವಾದ ಈ ಪ್ರಾಣಿವರ್ಗವನ್ನೆಲ್ಲಾ ಪುನಃ ಪುನಃ ಸೃಷ್ಟಿಸುತ್ತಿರುವೆನು.

[1] ಪ್ರಾಚೀನಕರ್ಮದ ಮೂಲಕ ಉಂಟಾಗುವ ಸ್ವಭಾವದಿಂದ.

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಂ ಅಸಕ್ತಂ ತೇಷು ಕರ್ಮಸು ॥ ೯ ॥**

ಧನಂಜಯ (ಎಲೈ ಅರ್ಜುನನೆ) ತೇಷು ಕರ್ಮಸು (ಆ ಕರ್ಮಗಳಲ್ಲಿ) ಅಸಕ್ತಂ (ಅಸಕ್ತನಾದ) ಉದಾಸೀನವತ್ ಚ ಆಸೀನಂ (ಉದಾಸೀನನಂತೆ ಇರುವ) ಮಾಂ (ನನ್ನನ್ನು) ತಾನಿ (ಆ) ಕರ್ಮಾಣಿ (ಕರ್ಮಗಳು) ನ ನಿಬಧ್ನಂತಿ (ಬಂಧಿಸುಸುವುದಿಲ್ಲ).

೯. ಎಲೈ ಅರ್ಜುನ, ಆ ಕರ್ಮಗಳಲ್ಲಿ ಅಸಕ್ತನಾದ ಮತ್ತು ಉದಾಸೀನನಂತೆ ಇರುವ ನನ್ನನ್ನು ಆ ಕರ್ಮಗಳು ಬಂಧಿಸುವುದಿಲ್ಲ.

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦ ॥**

ಕೌಂತೇಯ (ಕುಂತೀಪುತ್ರನಾದ ಅರ್ಜುನನೆ) ಮಯಾ ಅಧ್ಯಕ್ಷೇಣ (ಅಧ್ಯಕ್ಷನಾದ ನನ್ನಿಂದ) ಪ್ರಕೃತಿಃ (ಪ್ರಕೃತಿಯು) ಸಚರಾಚರಂ (ಚರಾಚರಾತ್ಮಕವಾದ ಜಗತ್ತನ್ನು) ಸೂಯತೇ (ಉತ್ಪತ್ತಿಮಾಡುತ್ತದೆ) ಅನೇನ ಹೇತುನಾ (ಈ ಕಾರಣದಿಂದ) ಜಗತ್ (ಜಗತ್ತು) ವಿಪರಿವರ್ತತೇ (ಸುತ್ತುತ್ತಿರುತ್ತದೆ).

೧೦. ಎಲೈ ಅರ್ಜುನ, ಅಧ್ಯಕ್ಷನಾದ ನನ್ನಿಂದ ಪ್ರಕೃತಿಯು[1] ಚರಾಚರಾತ್ಮಕವಾದ ಜಗತ್ತನ್ನು ಉತ್ಪತ್ತಿಮಾಡುತ್ತದೆ. ಈ ಕಾರಣದಿಂದ[2] ಜಗತ್ತು ಸುತ್ತುತ್ತಿರುತ್ತದೆ.

[1] ತ್ರಿಗುಣಾತ್ಮಿಕವಾದ ಮಾಯೆ.
[2] ಈಶ್ವರನು ಅಧ್ಯಕ್ಷನಾಗಿರುವನೆಂಬ ಕಾರಣದಿಂದ.

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧ ॥**

ಮಮ (ನನ್ನ) ಭೂತಮಹೇಶ್ವರಂ (ಭೂತಮಹೇಶ್ವರವಾದ) ಪರಂ ಭಾವಂ (ಪರಭಾವವನ್ನು) ಅಜಾನಂತಃ (ತಿಳಿಯದಿರುವ) ಮೂಢಾಃ (ಮೂಢರು) ಮಾನುಷೀಂ ತನುಂ (ಮನುಷ್ಯದೇಹವನ್ನು) ಆಶ್ರಿತಂ (ಆಶ್ರಯಿಸಿರುವ) ಮಾಂ (ನನ್ನನ್ನು) ಅವಜಾನಂತಿ (ತಿರಸ್ಕರಿಸುತ್ತಾರೆ).

೧೧. ಸರ್ವಭೂತಗಳಿಗೂ ಮಹೇಶ್ವರವಾದ ನನ್ನ ಪರಭಾವವನ್ನು ಅರಿಯದ ಮೂಢರು ಮನುಷ್ಯದೇಹವನ್ನು ಆಶ್ರಯಿಸಿರುವ ನನ್ನನ್ನು ತಿರಸ್ಕರಿಸುತ್ತಾರೆ.

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥**

ಮೋಘಾಶಾಃ (ವ್ಯರ್ಥವಾದ ಆಶೆಯುಳ್ಳ) ಮೋಘಕರ್ಮಾಣಃ (ನಿಷ್ಫಲವಾದ ಕರ್ಮವುಳ್ಳ) ಮೋಘಜ್ಞಾನಾಃ (ನಿರರ್ಥಕವಾದ ಜ್ಞಾನವುಳ್ಳ) ವಿಚೇತಸಃ (ಅವಿವೇಕಿಗಳು) ಮೋಹಿನೀಂ (ಮೋಹಕಾರಿಯಾದ) ರಾಕ್ಷಸೀಂ (ರಾಕ್ಷಸರ) ಆಸುರೀಂ ಚ (ಅಸುರರ) ಪ್ರಕೃತಿಂ (ಸ್ವಭಾವವನ್ನು) ಶ್ರಿತಾಃ ಏವ (ಆಶ್ರಯಿಸುತ್ತಾರೆ).

೧೨. ವ್ಯರ್ಥವಾದ ಆಶೆಯುಳ್ಳ ನಿಷ್ಫಲವಾದ ಕರ್ಮವುಳ್ಳ ನಿರರ್ಥಕವಾದ ಜ್ಞಾನವುಳ್ಳ ಅವಿವೇಕಿಗಳು ಮೋಹಕಾರಿಯಾದ[1] ರಾಕ್ಷಸೀ[2] ಸ್ವಭಾವವನ್ನೂ ಆಸುರೀ[3] ಸ್ವಭಾವವನ್ನೂ ಆಶ್ರಯಿಸುತ್ತಾರೆ.

[ಈಶ್ವರನನ್ನು ತಿರಸ್ಕರಿಸಿ ಯಾವ ಕರ್ಮವನ್ನು ಮಾಡಿದರೂ, ಯಾವ ಸಂಕಲ್ಪ ವನ್ನು ಮಾಡಿದರೂ, ಯಾವ ಜ್ಞಾನವನ್ನು ಹೊಂದಿದರೂ—ಎಲ್ಲವೂ ವ್ಯರ್ಥ.]

[1] ದೇಹವೇ ಆತ್ಮವೆಂದು ಭ್ರಮೆಹೊಂದುವ ಸ್ವಭಾವ.

[2] ತಾಮಸೀ.

[3] ರಾಜಸೀ.

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೩ ॥**

ಪಾರ್ಥ (ಎಲೈ ಅರ್ಜುನನೆ) ತು (ಆದರೆ) ದೈವೀಂ ಪ್ರಕೃತಿಂ (ದೈವೀ ಸ್ವಭಾವ ವನ್ನು) ಆಶ್ರಿತಾಃ (ಆಶ್ರಯಿಸಿದ) ಮಹಾತ್ಮಾನಃ (ಮಹಾತ್ಮರು) ಭೂತಾದಿಂ (ಭೂತ ಗಳ ಕಾರಣನಾದ) ಅವ್ಯಯಂ (ಅವ್ಯಯನಾದ) ಮಾಂ (ನನ್ನನ್ನು) ಜ್ಞಾತ್ವಾ (ತಿಳಿದು) ಅನನ್ಯಮನಸಃ (ಅನನ್ಯಮನಸ್ಕರಾಗಿ) ಭಜಂತಿ (ಭಜಿಸುತ್ತಾರೆ).

೧೩. ಎಲೈ ಅರ್ಜುನ, ದೈವೀ[1] ಸ್ವಭಾವವನ್ನು ಆಶ್ರಯಿಸಿದ ಮಹಾತ್ಮರು ಸರ್ವಭೂತಗಳಿಗೆ ಕಾರಣನೂ ಅವ್ಯಯನೂ ಆದ ನನ್ನನ್ನು ತಿಳಿದು ಅನನ್ಯಮನಸ್ಕರಾಗಿ ಭಜಿಸುತ್ತಾರೆ.

[1] ಶಮ, ದಮ, ದಯೆ, ಶ್ರದ್ಧೆ ಮುಂತಾದ ಲಕ್ಷಣಗಳಿಂದ ಕೂಡಿದ ದೇವತೆಗಳ ಸ್ವಭಾವ.

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥**

ಸತತಂ (ಯಾವಾಗಲೂ) ಮಾಂ (ನನ್ನನ್ನು) ಕೀರ್ತಯಂತಃ (ಕೀರ್ತಿಸು ತ್ತಿರುವವರು) ಯತಂತಃ ಚ (ಪ್ರಯತ್ನಿಸುತ್ತಿರುವವರು) ಭಕ್ತ್ಯಾ ನಮಸ್ಯಂತಃ ಚ (ಭಕ್ತಿಯಿಂದ ನಮಸ್ಕರಿಸುವವರು) ದೃಢವ್ರತಾಃ (ದೃಢವ್ರತರಾದವರು) ನಿತ್ಯಯುಕ್ತಾಃ (ನಿತ್ಯಯುಕ್ತರಾದವರು) ಮಾಂ (ನನ್ನನ್ನು) ಉಪಾಸತೇ (ಉಪಾಸನೆಮಾಡುತ್ತಾರೆ).

೧೪. ಯಾವಾಗಲೂ ನನ್ನನ್ನು ಕೀರ್ತಿಸುತ್ತಿರುವ, ಪ್ರಯತ್ನಿಸುತ್ತಿ ರುವ[1] ಭಕ್ತಿಯಿಂದ ನಮಸ್ಕರಿಸುತ್ತಿರುವ ದೃಢವ್ರತರೂ ನಿತ್ಯಯುಕ್ತರೂ ಆದ (ಮಹಾತ್ಮರು) ನನ್ನನ್ನು ಉಪಾಸನೆಮಾಡುತ್ತಾರೆ.

[1] ಇಂದ್ರಿಯಗಳನ್ನು ನಿಗ್ರಹಿಸಿ ಶಮ ದಮ ದಯೆ ಅಹಿಂಸೆ ಮೊದಲಾದ ಧರ್ಮ ಗಳಿಂದ ಪ್ರಯತ್ನಿಸುತ್ತಿರುವ.

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫ ॥**

ಅನ್ಯೇ ಅಪಿ ಚ (ಮತ್ತೆ ಕೆಲವರು) ಜ್ಞಾನಯಜ್ಞೇನ (ಜ್ಞಾನಯಜ್ಞದಿಂದ) ಯಜಂತಃ (ಪೂಜಿಸುತ್ತಾ) ಮಾಂ (ನನ್ನನ್ನು) ಉಪಾಸತೇ (ಉಪಾಸನೆಮಾಡುತ್ತಾರೆ) ಏಕತ್ವೇನ (ಏಕತ್ವದಿಂದಲೂ) ಪೃಥಕ್ತ್ವೇನ (ಪೃಥಕ್ತ್ವದಿಂದಲೂ) ವಿಶ್ವತೋಮುಖಂ (ವಿಶ್ವರೂಪನೆಂದು) ಬಹುಧಾ (ಬಹುಪ್ರಕಾರವಾಗಿಯೂ) ಉಪಾಸತೇ (ಉಪಾಸನೆಮಾಡುತ್ತಾರೆ).

೧೫. ಮತ್ತೆ ಕೆಲವರು ಜ್ಞಾನಯಜ್ಞದಿಂದ[1] ನನ್ನನ್ನು ಪೂಜಿಸುತ್ತಾ ಉಪಾಸನೆಮಾಡುತ್ತಾರೆ: (ಹೇಗೆಂದರೆ, ಕೆಲವರು) ಏಕತ್ವದಿಂದಲೂ[2] ಕೆಲವರು ಪೃಥಕ್ತ್ವದಿಂದಲೂ[3] ಮತ್ತೆ ಕೆಲವರು ವಿಶ್ವರೂಪನೆಂದು ಬಹುಪ್ರಕಾರವಾಗಿಯೂ[4] ಉಪಾಸನೆಮಾಡುತ್ತಾರೆ.

[ಶ್ರೀರಾಮಾನುಜಾಚಾರ್ಯರ ಭಾಷ್ಯದ ಪ್ರಕಾರ ಈ ಶ್ಲೋಕದ ಉತ್ತರಾರ್ಧದ ಅರ್ಥವು ಹೀಗಿರುತ್ತದೆ—'ಬಹುಪ್ರಕಾರವಾಗಿ ಬೇರೆಬೇರೆಯಾಗಿ ತೋರುವ ವಿಶ್ವರೂಪನಾದ ನನ್ನನ್ನು ಏಕತ್ವದಿಂದ ಉಪಾಸನೆಮಾಡುತ್ತಾರೆ'.]

1 ಜ್ಞಾನವೇ ಭಗವಂತನ ವಿಷಯವಾದ ಯಜ್ಞ (ಶ್ರೀಶಂಕರ).
2 'ಪರಬ್ರಹ್ಮವು ಒಂದೇ' ಎಂಬ ಪರಮಾರ್ಥದರ್ಶನದಿಂದ (ಶ್ರೀಶಂಕರ).
3 ಆದಿತ್ಯಚಂದ್ರಾದಿ ಭೇದದಿಂದ ಭಗವಂತನಾದ ವಿಷ್ಣುವೇ ಇರುವನು (ಶ್ರೀಶಂಕರ).
4 ಬಹುಪ್ರಕಾರವಾಗಿರುವ ಭಗವಂತನೇ ವಿಶ್ವರೂಪದಿಂದ ಇದ್ದಾನೆ (ಶ್ರೀಶಂಕರ).

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಂ ಅಹಮಗ್ನಿರಹಂ ಹುತಮ್ ॥ ೧೬ ॥**

ಅಹಂ (ನಾನು) ಕ್ರತುಃ (ಕ್ರತು) ಅಹಂ (ನಾನು) ಯಜ್ಞಃ (ಯಜ್ಞ) ಅಹಂ (ನಾನು) ಸ್ವಧಾ (ಸ್ವಧಾ) ಅಹಂ (ನಾನು) ಔಷಧಂ (ಔಷಧವು) ಅಹಂ (ನಾನು) ಮಂತ್ರಃ (ಮಂತ್ರ) ಅಹಂ (ನಾನು) ಆಜ್ಯಂ ಏವ (ಆಜ್ಯ) ಅಹಂ (ನಾನು) ಅಗ್ನಿಃ (ಅಗ್ನಿ) ಅಹಂ (ನಾನು) ಹುತಂ (ಹುತ).

೧೬. ಕ್ರತು,[1] ಯಜ್ಞ,[2] ಸ್ವಧಾ,[3] ಔಷಧ,[4] ಮಂತ್ರ, ಆಜ್ಯ,[5] ಅಗ್ನಿ,[6] ಹುತ[7]—ಇವೆಲ್ಲವೂ ನಾನೇ ಆಗಿರುವೆನು.

1 ಅಗ್ನಿಷ್ಟೋಮಾದಿ ಶ್ರೌತಕರ್ಮಗಳು.
2 ಸ್ಮಾರ್ತಕರ್ಮಗಳು.
3 ಪಿತೃಗಳಿಗೆ ಅರ್ಪಿಸುವ ಹವಿಸ್ಸು.
4 ಭತ್ತ, ಯವೆ ಮುಂತಾದ ಆಹಾರ.
5 ತುಪ್ಪವೇ ಮೊದಲಾದ ಹವಿಸ್ಸು.
6 ಹವಿಸ್ಸನ್ನು ಹೋಮಮಾಡುವ ಅಗ್ನಿ.
7 ಹೋಮಕರ್ಮ.

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರಃ ಋಕ್ಸಾಮ ಯಜುರೇವ ಚ ॥ ೧೭ ॥**

ಅಹಂ ಏವ (ನಾನೇ) ಅಸ್ಯ (ಈ) ಜಗತಃ (ಜಗತ್ತಿನ) ಪಿತಾ (ತಂದೆ) ಮಾತಾ (ತಾಯಿ) ಧಾತಾ (ಧಾತೃ) ಪಿತಾಮಹಃ (ಪಿತಾಮಹ) ವೇದ್ಯಂ (ತಿಳಿಯಬೇಕಾದ ವಸ್ತು) ಪವಿತ್ರಂ (ಪವಿತ್ರ) ಓಂಕಾರಃ (ಓಂಕಾರ) ಋಕ್ (ಋಗ್ವೇದ) ಸಾಮ (ಸಾಮವೇದ) ಯಜುಃ ಚ (ಮತ್ತು ಯಜುರ್ವೇದ).

**೧೭.** ನಾನು ಈ ಜಗತ್ತಿಗೆ ತಂದೆ, ತಾಯಿ, ಧಾತೃ,[1] ಪಿತಾಮಹ, ತಿಳಿಯಲು ಯೋಗ್ಯವಾದ ವಸ್ತು, ಪವಿತ್ರ, ಓಂಕಾರ, ಋಕ್, ಸಾಮ ಮತ್ತು ಯಜುಸ್ಸು.

[1] ಪ್ರಾಣಿಗಳಿಗೆ ಕರ್ಮಫಲವನ್ನು ಕೊಡುವವನು.

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ ೧೮ ॥**

[ಅಹಂ (ನಾನು)] ಗತಿಃ (ಗತಿ) ಭರ್ತಾ (ಭರ್ತೃ) ಪ್ರಭುಃ (ಪ್ರಭು) ಸಾಕ್ಷೀ (ಸಾಕ್ಷಿ) ನಿವಾಸಃ (ನಿವಾಸ) ಶರಣಂ (ಶರಣು) ಸುಹೃತ್ (ಸುಹೃತ್) ಪ್ರಭವಃ (ಪ್ರಭವ) ಪ್ರಲಯಃ (ಪ್ರಳಯ) ಸ್ಥಾನಂ (ಸ್ಥಾನ) ನಿಧಾನಂ (ನಿಧಾನ) ಅವ್ಯಯಂ (ಅವ್ಯಯವಾದ) ಬೀಜಂ (ಬೀಜವು).

**೧೮.** ಗತಿ,[1] ಭರ್ತೃ,[2] ಪ್ರಭು,[3] ಸಾಕ್ಷಿ,[4] ನಿವಾಸ,[5] ಶರಣು,[6] ಸುಹೃತ್,[7] ಪ್ರಭವ,[8] ಪ್ರಳಯ,[9] ಸ್ಥಾನ, ನಿಧಾನ,[10] ಅವ್ಯಯವಾದ ಬೀಜ[11]—(ಇವೆಲ್ಲವೂ ನಾನೇ ಆಗಿರುವೆನು.)

[1] ಕರ್ಮಫಲ (ಶ್ರೀಶಂಕರ). ಪ್ರಾಪ್ಯಸ್ಥಾನ (ಶ್ರೀರಾಮಾನುಜ).
[2] ಪೋಷಕ.
[3] ಸ್ವಾಮಿ ಅಥವಾ ಶಾಸನಕರ್ತೃ.
[4] ಸರ್ವಪ್ರಾಣಿಗಳ ಸಾಕ್ಷಿ.
[5] ವಾಸಸ್ಥಾನ.
[6] ರಕ್ಷಕ.
[7] ಹಿತೈಷಿ.
[8] ಉತ್ಪತ್ತಿಸ್ಥಾನ.
[9] ಪ್ರಳಯಸ್ಥಾನ.
[10] ಕಾಲಾಂತರದಲ್ಲಿ ಪ್ರಾಣಿಗಳು ಉಪಭೋಗಿಸಲು ಬರುವ ಕರ್ಮಫಲ (ಶ್ರೀಶಂಕರ). ಉತ್ಪತ್ತಿಉಪಸಂಹಾರಗಳಿಗೆ ಕಾರಣ (ಶ್ರೀರಾಮಾನುಜ).
[11] ಜಗತ್ತಿನ ಅಕ್ಷಯಬೀಜ.

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥**

ಅರ್ಜುನ (ಎಲೈ ಅರ್ಜುನನೆ) ಅಹಂ (ನಾನು) ತಪಾಮಿ (ತಪಿಸುತ್ತೇನೆ) ಅಹಂ (ನಾನು) ವರ್ಷಂ (ಮಳೆಯನ್ನು) ನಿಗೃಹ್ಣಾಮಿ (ಸೆಳೆಯುತ್ತೇನೆ) ಉತ್ಸೃಜಾಮಿ ಚ (ಮತ್ತು ಸುರಿಸುತ್ತೇನೆ) [ಅಹಂ (ನಾನು)] ಅಮೃತಂ ಚ ಏವ (ಅಮೃತವು) ಮೃತ್ಯುಃ ಚ (ಮೃತ್ಯುವು) ಅಹಂ (ನಾನು) ಸತ್ (ಸತ್ತು) ಅಸತ್ ಚ (ಮತ್ತು ಅಸತ್ತು).

**೧೯.** ನಾನು (ಸೂರ್ಯರೂಪದಿಂದ) ತಪಿಸುತ್ತೇನೆ. ನಾನು ಮಳೆಯನ್ನು ಸೆಳೆದುಕೊಳ್ಳುತ್ತೇನೆ ಮತ್ತು ಬಿಡುತ್ತೇನೆ. ನಾನೇ ಅಮೃತ ಮತ್ತು ಮೃತ್ಯು, ಸತ್ತು[1] ಮತ್ತು ಅಸತ್ತು[2].

[1-2] ಯಾವುದರ ಸಂಬಂಧದಿಂದ ಯಾವುದು ಇದೆಯೋ ಅದು 'ಸತ್' ಅದಕ್ಕೆ ವಿರುದ್ಧವಾದುದು 'ಅಸತ್'... ಭಗವಂತನು ಅತ್ಯಂತ 'ಅಸತ್' ಅಲ್ಲ (ಶ್ರೀಶಂಕರ). ವರ್ತಮಾನಕಾಲದಲ್ಲಿ ಇರುವುದು 'ಸತ್'. ಹಿಂದೆ ಇದ್ದು ಮುಂದೆ ಬರುವುದು 'ಅಸತ್' (ಶ್ರೀರಾಮಾನುಜ).

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮಶ್ನಂತಿ**
**ದಿವ್ಯಾನ್ ದಿವಿ ದೇವಭೋಗಾನ್ ॥ ೨೦ ॥**

ತ್ರೈವಿದ್ಯಾಃ (ಮೂರು ವೇದಗಳನ್ನು ಬಲ್ಲವರು) ಯಜ್ಞೈಃ (ಯಜ್ಞಗಳಿಂದ) ಮಾಂ (ನನ್ನನ್ನು) ಇಷ್ಟ್ವಾ (ಪೂಜಿಸಿ) ಸೋಮಪಾಃ (ಸೋಮಪಾನವನ್ನು ಮಾಡುವವರಾಗಿ) ಪೂತಪಾಪಾಃ (ಪಾಪಗಳನ್ನು ಕಳೆದುಕೊಂಡು) ಸ್ವರ್ಗತಿಂ (ಸ್ವರ್ಗಲೋಕವನ್ನು) ಪ್ರಾರ್ಥಯಂತೇ (ಪ್ರಾರ್ಥಿಸುತ್ತಾರೆ) ತೇ (ಅವರು) ಪುಣ್ಯಂ (ಪುಣ್ಯವಾದ) ಸುರೇಂದ್ರಲೋಕಂ (ಸುರೇಂದ್ರಲೋಕವನ್ನು) ಆಸಾದ್ಯ (ಹೊಂದಿ) ದಿವಿ (ಸ್ವರ್ಗದಲ್ಲಿ) ದಿವ್ಯಾನ್ (ದಿವ್ಯವಾದ) ದೇವಭೋಗಾನ್ (ದೇವಭೋಗಗಳನ್ನು) ಅಶ್ನಂತಿ (ಅನುಭವಿಸುತ್ತಾರೆ).

**೨೦.** ಮೂರು ವೇದಗಳನ್ನು ಬಲ್ಲವರು, ಯಜ್ಞಗಳಿಂದ ನನ್ನನ್ನು ಪೂಜಿಸಿ, ಸೋಮಪಾನಮಾಡುವವರಾಗಿ ಪಾಪಗಳನ್ನು ಕಳೆದುಕೊಂಡು ಸ್ವರ್ಗಲೋಕವನ್ನು ಪ್ರಾರ್ಥಿಸುತ್ತಾರೆ. ಅವರು ಪುಣ್ಯವಾದ ಸುರೇಂದ್ರ

ಲೋಕವನ್ನು ಹೊಂದಿ, ಸ್ವರ್ಗದಲ್ಲಿ ದಿವ್ಯವಾದ ದೇವಭೋಗಗಳನ್ನು ಅನುಭವಿಸುತ್ತಾರೆ.

[ಹದಿನೈದನೆಯ ಶ್ಲೋಕದಲ್ಲಿ ಹೇಳಿರುವ ಜ್ಞಾನಯಜ್ಞದಿಂದ ಪರಮಾತ್ಮನ ಉಪಾಸನೆ ಮಾಡದೆ ಅಜ್ಞರಾಗಿ, ಕಾಮಗಳನ್ನು ಬಯಸುವವರು ಸ್ವರ್ಗಲೋಕವನ್ನು ಹೊಂದುತ್ತಾರೆ.]

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥**

ತೇ (ಅವರು) ತಂ (ಆ) ವಿಶಾಲಂ (ವಿಶಾಲವಾದ) ಸ್ವರ್ಗಲೋಕಂ (ಸ್ವರ್ಗಲೋಕವನ್ನು) ಭುಕ್ತ್ವಾ (ಅನುಭವಿಸಿ) ಪುಣ್ಯೇ ಕ್ಷೀಣೇ (ಪುಣ್ಯವು ಕ್ಷೀಣವಾಗಲು) ಮರ್ತ್ಯಲೋಕಂ (ಮನುಷ್ಯಲೋಕವನ್ನು) ವಿಶಂತಿ (ಪ್ರವೇಶಿಸುತ್ತಾರೆ) ಏವಂ (ಹೀಗೆ) ತ್ರಯೀಧರ್ಮಂ (ತ್ರಯೀಧರ್ಮವನ್ನು) ಅನುಪ್ರಪನ್ನಾಃ (ಅನುಷ್ಠಿಸುವವರಾದ) ಕಾಮಕಾಮಾಃ (ಕಾಮಕಾಮರು) ಗತಾಗತಂ (ಗಮನಾಗಮನಗಳನ್ನು) ಲಭಂತೇ (ಹೊಂದುತ್ತಾರೆ).

**೨೧.** ಆ ವಿಶಾಲವಾದ ಸ್ವರ್ಗಲೋಕವನ್ನು ಅನುಭವಿಸಿ, ಪುಣ್ಯವು ಕ್ಷೀಣವಾಗಲು ಮನುಷ್ಯಲೋಕವನ್ನು ಪ್ರವೇಶಿಸುತ್ತಾರೆ. ಹೀಗೆ ತ್ರಯೀಧರ್ಮವನ್ನು[1] ಅನುಷ್ಠಾನಮಾಡುವ ಕಾಮಕಾಮಿಗಳು[2] ಗಮನಾಗಮನಗಳನ್ನು[3] ಹೊಂದುತ್ತಾರೆ.

1 ಕೇವಲ ವೈದಿಕ ಕರ್ಮವನ್ನು.
2 ಕಾಮಗಳನ್ನೇ ಬಯಸುವವರು.
3 ಮರ್ತ್ಯಲೋಕದಿಂದ ಸ್ವರ್ಗಲೋಕಕ್ಕೆ, ಸ್ವರ್ಗದಿಂದ ಮರ್ತ್ಯಲೋಕಕ್ಕೆ ಪುನಃ ಪುನಃ ಹೋಗುವುದು, ಬರುವುದು.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ**
**ವಹಾಮ್ಯಹಮ್ ॥ ೨೨ ॥**

ಅನನ್ಯಾಃ (ಅನನ್ಯರಾಗಿ) ಮಾಂ (ನನ್ನನ್ನು) ಚಿಂತಯಂತಃ (ಧ್ಯಾನಿಸುತ್ತಿರುವ) ಯೇ (ಯಾವ) ಜನಾಃ (ಜನರು) ಪರ್ಯುಪಾಸತೇ (ಉಪಾಸನೆಮಾಡುತ್ತಾರೆಯೋ)

ತೇಷಾಂ (ಅಂತಹ) ನಿತ್ಯಾಭಿಯುಕ್ತಾನಾಂ (ನಿತ್ಯಯುಕ್ತರಾದವರ) ಯೋಗಕ್ಷೇಮಂ (ಯೋಗಕ್ಷೇಮವನ್ನು) ಅಹಂ (ನಾನು) ವಹಾಮಿ (ವಹಿಸಿಕೊಳ್ಳುತ್ತೇನೆ).

೨೨. ಅನನ್ಯರಾಗಿ[1] ನನ್ನನ್ನು ಧ್ಯಾನಿಸುತ್ತಿರುವ ಯಾವ ಜನರು ಉಪಾಸನೆಮಾಡುತ್ತಾರೆಯೋ,[2] ಅಂತಹ ನಿತ್ಯಯುಕ್ತರಾದ[3] (ಭಕ್ತರ) ಯೋಗಕ್ಷೇಮವನ್ನು[4] ನಾನು ವಹಿಸಿಕೊಳ್ಳುತ್ತೇನೆ.

1 ಬೇರೆಯಾಗದೆ ಪರದೇವನಾದ ನಾರಾಯಣನನ್ನೇ ಆತ್ಮನನ್ನಾಗಿ ಮಾಡಿಕೊಂಡಿರುವರು (ಶ್ರೀಶಂಕರ). ಬೇರೆ ಯಾವ ಪ್ರಯೋಜನವೂ ಇಲ್ಲದೆ (ಶ್ರೀರಾಮಾನುಜ).

2 ಪರಿಪೂರ್ಣ ಬ್ರಹ್ಮಭಾವದಿಂದ.

3 ಪರಮಾತ್ಮನಲ್ಲಿ ಯಾವಾಗಲೂ ಸಾಯುಜ್ಯವನ್ನು ಹೊಂದಬೇಕೆಂದು ಇಚ್ಛಿಸುವವರು (ಶ್ರೀರಾಮಾನುಜ).

4 ಪ್ರಾಪ್ತವಾಗದೆ ಇದ್ದದ್ದನ್ನು ಪಡೆದುಕೊಳ್ಳುವುದು ಯೋಗ; ಅದನ್ನು ಕಾಪಾಡಿಕೊಳ್ಳುವುದು ಕ್ಷೇಮ (ಶ್ರೀಶಂಕರ). ಈಶ್ವರಪ್ರಾಪ್ತಿರೂಪವಾದದ್ದು ಯೋಗ, ಸಂಸಾರಕ್ಕೆ ಪುನಃ ಬರದಿರುವುದು ಕ್ಷೇಮ (ಶ್ರೀರಾಮಾನುಜ).

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ॥ ೨೩ ॥**

ಕೌಂತೇಯ (ಎಲೈ ಅರ್ಜುನನೆ) ಯೇ (ಯಾವ) ಅನ್ಯದೇವತಾಭಕ್ತಾಃ (ಅನ್ಯದೇವತಾಭಕ್ತರು) ಶ್ರದ್ಧಯಾನ್ವಿತಾಃ (ಶ್ರದ್ಧಾಯುಕ್ತರಾಗಿ) ಯಜಂತೇ (ಪೂಜಿಸುತ್ತಾರೆಯೋ) ತೇ ಅಪಿ (ಅವರೂ ಕೂಡ) ಮಾಂ ಏವ (ನನ್ನನ್ನೇ) ಅವಿಧಿಪೂರ್ವಕಂ (ಅವಿಧಿಪೂರ್ವಕವಾಗಿ) ಯಜಂತಿ (ಪೂಜಿಸುತ್ತಾರೆ).

೨೩. ಎಲೈ ಅರ್ಜುನ, ಯಾವ ಅನ್ಯದೇವತಾಭಕ್ತರು ಶ್ರದ್ಧಾಯುಕ್ತರಾಗಿ ಪೂಜಿಸುತ್ತಾರೆಯೋ ಅವರೂ ಕೂಡ ನನ್ನನ್ನೇ ಅವಿಧಿಪೂರ್ವಕವಾಗಿ[1] ಪೂಜಿಸುತ್ತಾರೆ.

1 ಯಾವ ದೇವತೆಯನ್ನು ಉದ್ದೇಶಿಸಿ ಪೂಜಿಸಿದರೂ ಆ ದೇವತೆಯ ಆತ್ಮನಾದ ಪರಬ್ರಹ್ಮನಿಗೆ ಆ ಪೂಜೆಯು ಸಲ್ಲುತ್ತದೆ ಎಂದು ಶಾಸ್ತ್ರದಲ್ಲಿ ವಿಧಿಸಿದೆ. ಇದನ್ನು ತಿಳಿಯದೆ ಬೇರೆ ಬೇರೆ ದೇವತೆಗಳನ್ನು ಪೃಥಗ್ಭಾವದಿಂದ ಉದ್ದೇಶಿಸಿ ಪೂಜೆಯನ್ನು ಸಲ್ಲಿಸುವುದು ಅವಿಧಿಪೂರ್ವಕವಾದ ಆರಾಧನೆ.

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪ ॥**

ಅಹಂ ಹಿ (ನಾನು) ಸರ್ವಯಜ್ಞಾನಾಂ (ಎಲ್ಲಾ ಯಜ್ಞಗಳ) ಭೋಕ್ತಾ (ಭೋಕ್ತೃ) ಪ್ರಭುಃ ಏವ ಚ (ಮತ್ತು ಪ್ರಭು) ಚ ತು (ಆದರೆ) ತೇ (ಅವರು) ತತ್ತ್ವೇನ (ಯಥಾರ್ಥವಾಗಿ) ಮಾಂ (ನನ್ನನ್ನು) ನ ಅಭಿಜಾನಂತಿ (ತಿಳಿಯರು) ಅತಃ (ಆದುದರಿಂದ) ಚ್ಯವಂತಿ (ಚ್ಯುತರಾಗುತ್ತಾರೆ).

೨೪. ಸರ್ವಯಜ್ಞಗಳ ಭೋಕ್ತೃವೂ ಮತ್ತು ಪ್ರಭುವೂ ನಾನೇ. ಆದರೆ ಅವರು ಯಥಾರ್ಥವಾಗಿ ನನ್ನನ್ನು ತಿಳಿಯರು. ಆದುದರಿಂದ (ಅವರು) ಚ್ಯುತರಾಗುತ್ತಾರೆ.[1]

[1] ಅವಿಧಿಪೂರ್ವಕವಾಗಿ ಯಾಗಮಾಡಿದುದರಿಂದ ಚ್ಯುತರಾಗುತ್ತಾರೆ (ಶ್ರೀಶಂಕರ).

**ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ**
**ಮದ್ಯಾಜಿನೋಽಪಿ ಮಾಮ್ ॥ ೨೫ ॥**

ದೇವವ್ರತಾಃ (ದೇವತೆಗಳಲ್ಲಿ ಭಕ್ತಿಯುಳ್ಳವರು) ದೇವಾನ್ (ದೇವತೆಗಳನ್ನು) ಯಾಂತಿ (ಸೇರುತ್ತಾರೆ) ಪಿತೃವ್ರತಾಃ (ಪಿತೃಭಕ್ತರು) ಪಿತೄನ್ (ಪಿತೃಗಳನ್ನು) ಯಾಂತಿ (ಸೇರುತ್ತಾರೆ) ಭೂತೇಜ್ಯಾಃ (ಭೂತಗಳನ್ನು ಪೂಜಿಸುವವರು) ಭೂತಾನಿ (ಭೂತಗಳನ್ನು) ಯಾಂತಿ (ಹೊಂದುತ್ತಾರೆ) ಮದ್ಯಾಜಿನಃ (ನನ್ನನ್ನು ಪೂಜಿಸುವವರು) ಮಾಂ ಅಪಿ (ನನ್ನನ್ನೇ) ಯಾಂತಿ (ಸೇರುತ್ತಾರೆ).

೨೫. ದೇವತೆಗಳಲ್ಲಿ ಭಕ್ತಿಯುಳ್ಳವರು ದೇವತೆಗಳನ್ನು ಸೇರುತ್ತಾರೆ. ಪಿತೃಭಕ್ತರು ಪಿತೃಗಳನ್ನು[1] ಸೇರುವರು. ಭೂತಗಳನ್ನು[2] ಪೂಜಿಸುವವರು ಭೂತಗಳನ್ನು ಸೇರುವರು. ನನ್ನನ್ನು ಪೂಜಿಸುವವರು ನನ್ನನ್ನೇ ಸೇರುತ್ತಾರೆ.

[1] ಅಗ್ನಿಶ್ವಾತ್ತರೇ ಮೊದಲಾದ ಪಿತೃಗಳನ್ನು (ಶ್ರೀಶಂಕರ).
[2] ವಿನಾಯಕ, ಮಾತೃಗಣ, ಚತುರ್ಭಗಿನಿ ಮೊದಲಾದವರನ್ನು (ಶ್ರೀಶಂಕರ)

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥ ೨೬ ॥**

ಯಃ (ಯಾವನು) ಮೇ (ನನಗೆ) ಭಕ್ತ್ಯಾ (ಭಕ್ತಿಯಿಂದ) ಪತ್ರಂ (ಎಲೆಯನ್ನು) ಪುಷ್ಪಂ (ಹೂವನ್ನು) ಫಲಂ (ಹಣ್ಣನ್ನು) ತೋಯಂ (ನೀರನ್ನು) ಪ್ರಯಚ್ಛತಿ (ಕೊಡುವನೋ) ಪ್ರಯತಾತ್ಮನಃ (ಶುದ್ಧಚಿತ್ತನ) ಭಕ್ತ್ಯಾ ಉಪಹೃತಂ (ಭಕ್ತಿಯಿಂದ ಸಮರ್ಪಿಸಿದ) ತತ್ (ಅದನ್ನು) ಅಹಂ (ನಾನು) ಅಶ್ನಾಮಿ (ಸ್ವೀಕರಿಸುತ್ತೇನೆ).

೨೬. ಯಾವನು ನನಗೆ ಎಲೆಯನ್ನಾಗಲಿ, ಹೂವನ್ನಾಗಲಿ, ಹಣ್ಣನ್ನಾಗಲಿ, ನೀರನ್ನಾಗಲಿ ಭಕ್ತಿಯಿಂದ ಕೊಡುವನೋ (ಅಂತಹ) ಶುದ್ಧಚಿತ್ತವುಳ್ಳವನು ಭಕ್ತಿಯಿಂದ ಸಮರ್ಪಿಸಿದ ಅದನ್ನು ನಾನು ಸ್ವೀಕರಿಸುತ್ತೇನೆ.

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ ೨೭ ॥**

ಕೌಂತೇಯ (ಎಲೈ ಅರ್ಜುನನೆ) ಯತ್ (ಯಾವುದನ್ನು) ಕರೋಷಿ (ಮಾಡುತ್ತೀಯೋ) ಯತ್ (ಯಾವುದನ್ನು) ಅಶ್ನಾಸಿ (ಭುಜಿಸುತ್ತೀಯೋ) ಯತ್ (ಯಾವುದನ್ನು) ಜುಹೋಷಿ (ಹೋಮಮಾಡುತ್ತೀಯೋ) ಯತ್ (ಯಾವುದನ್ನು) ದದಾಸಿ (ದಾನಮಾಡುತ್ತೀಯೋ) ಯತ್ (ಯಾವ) ತಪಸ್ಯಸಿ (ತಪಸ್ಸನ್ನು ಮಾಡುತ್ತೀಯೋ) ತತ್ (ಅದನ್ನು) ಮದರ್ಪಣಂ ಕುರುಷ್ವ (ನನಗೆ ಅರ್ಪಣವನ್ನು ಮಾಡು).

೨೭. ಎಲೈ ಅರ್ಜುನ, ಯಾವುದನ್ನು ಮಾಡುತ್ತೀಯೋ, ಯಾವುದನ್ನು ಭುಜಿಸುತ್ತೀಯೋ, ಯಾವುದನ್ನು ಹೋಮಮಾಡುತ್ತೀಯೋ, ಯಾವುದನ್ನು ದಾನಮಾಡುತ್ತೀಯೋ, ಯಾವ ತಪಸ್ಸನ್ನು ಮಾಡುತ್ತೀಯೋ, ಅವೆಲ್ಲವನ್ನೂ ನನಗೆ ಸಮರ್ಪಿಸು.

[ಸಮಸ್ತ ಲೌಕಿಕವೈದಿಕ ಕರ್ಮಗಳ ಕರ್ತೃತ್ವ, ಭೋಕ್ತೃತ್ವ, ಆರಾಧ್ಯತ್ವ—ಇವುಗಳು ಹೇಗೆ ಈಶ್ವರನಲ್ಲಿ ಸಮರ್ಪಿಸಲ್ಪಡುವುವೋ ಹಾಗೆ ಮಾಡು—ಶ್ರೀರಾಮಾನುಜ.]

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥ ೨೮ ॥**

ಏವಂ (ಹೀಗೆ) ಶುಭಾಶುಭಫಲೈಃ ಕರ್ಮಬಂಧನೈಃ (ಶುಭಾಶುಭಫಲಗಳುಳ್ಳ ಕರ್ಮಬಂಧನಗಳಿಂದ) ಮೋಕ್ಷ್ಯಸೇ (ಬಿಡುಗಡೆಯನ್ನು ಹೊಂದುವೆ) ಸಂನ್ಯಾಸ-ಯೋಗಯುಕ್ತಾತ್ಮಾ (ಸಂನ್ಯಾಸಯೋಗಗಳಿಂದ ಕೂಡಿದ ಅಂತಃಕರಣವುಳ್ಳವನಾಗಿ) ವಿಮುಕ್ತಃ (ಮುಕ್ತನಾಗಿ) ಮಾಂ (ನನ್ನನ್ನು) ಉಪೈಷ್ಯಸಿ (ಹೊಂದುವೆ).

೨೮. ಹೀಗೆ ಶುಭಾಶುಭಫಲಗಳುಳ್ಳ ಕರ್ಮಗಳ ಬಂಧನದಿಂದ ಬಿಡುಗಡೆಯನ್ನು ಹೊಂದುವೆ. ಸಂನ್ಯಾಸ[1] ಮತ್ತು ಯೋಗ[2]—ಇವುಗಳಿಂದ ಕೂಡಿದ ಅಂತಃಕರಣವುಳ್ಳವನಾಗಿ ಮುಕ್ತನಾಗಿ ನನ್ನನ್ನು ಸೇರುವೆ.

1 ಎಲ್ಲವನ್ನೂ ಸಮರ್ಪಣೆಮಾಡುವುದರಿಂದ ಸಂನ್ಯಾಸ.

2 ಕರ್ಮವಾಗುವುದರಿಂದ ಯೋಗ.

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು**
**ಚಾಪ್ಯಹಮ್ ॥ ೨೯ ॥**

ಅಹಂ (ನಾನು) ಸರ್ವಭೂತೇಷು (ಸಮಸ್ತ ಭೂತಗಳಲ್ಲಿ) ಸಮಃ (ಸಮನು) ಮೇ (ನನಗೆ) ದ್ವೇಷ್ಯಃ ನ (ಶತ್ರುವಿಲ್ಲ) ಪ್ರಿಯಃ ನ ಅಸ್ತಿ (ಪ್ರಿಯನು ಅಥವಾ ಮಿತ್ರನು ಇಲ್ಲ) ತು (ಆದರೆ) ಯೇ (ಯಾರು) ಮಾಂ (ನನ್ನನ್ನು) ಭಕ್ತ್ಯಾ (ಭಕ್ತಿಪೂರ್ವಕವಾಗಿ) ಭಜಂತಿ (ಭಜಿಸುತ್ತಾರೆಯೋ) ತೇ (ಅವರು) ಮಯಿ (ನನ್ನಲ್ಲಿ) [ಇರುವರು] ಚ (ಮತ್ತು) ಅಹಂ ಅಪಿ (ನಾನು ಕೂಡ) ತೇಷು (ಅವರಲ್ಲಿ) [ಇರುವೆನು].

**೨೯.** ನಾನು ಸಮಸ್ತಭೂತಗಳಲ್ಲಿಯೂ ಸಮನಾಗಿರುತ್ತೇನೆ.[1] ನನಗೆ ಶತ್ರುವೂ ಇಲ್ಲ, ಮಿತ್ರನೂ ಇಲ್ಲ; ಆದರೆ ಭಕ್ತಿಪೂರ್ವಕವಾಗಿ ಯಾರು ನನ್ನನ್ನು ಭಜಿಸುತ್ತಾರೆಯೋ ಅವರು ನನ್ನಲ್ಲಿ ಇರುವರು ಮತ್ತು ನಾನು ಕೂಡ ಅವರಲ್ಲಿ ಇರುವೆನು.

[1] ಭಗವಂತನು ಅಗ್ನಿಯ ಹಾಗೆ. ದೂರದಲ್ಲಿರುವವರ ಚಳಿಯನ್ನು ಅಗ್ನಿಯು ಹೇಗೆ ನಿವಾರಿಸಲಾರದೋ ಮತ್ತು ಸಮೀಪಕ್ಕೆ ಬಂದವರ ಚಳಿಯನ್ನು ಹೇಗೆ ಕಳೆಯುವುದೋ ಹಾಗೆಯೇ ಈಶ್ವರನು ಭಕ್ತನನ್ನು ಅನುಗ್ರಹಿಸುತ್ತಾನೆ, ಇತರರನ್ನು ಅನುಗ್ರಹಿಸುವುದಿಲ್ಲ (ಶ್ರೀಶಂಕರ). ಜಾತ್ಯಾಕಾರಸ್ವಭಾವಗಳಲ್ಲಿ ಎಷ್ಟು ವೈಷಮ್ಯವಿದ್ದರೂ ಭಗವಂತನನ್ನು ಆಶ್ರಯಿಸುವ ಸಂದರ್ಭದಲ್ಲಿ ಅವನಿಗೆ ಪ್ರಪನ್ನನು ನಿಕೃಷ್ಟನು ಎಂದು ದ್ವೇಷವಿಲ್ಲ; ಹಾಗೆಯೇ ಜಾತ್ಯಾದಿಗಳಲ್ಲಿ ಈತನು ಉತ್ಕೃಷ್ಟನೆಂದು ಪ್ರಿಯನಾಗುವುದಿಲ್ಲ—ಎಂದು ಶ್ರೀರಾಮಾನುಜಾಚಾರ್ಯರು ತಮ್ಮ ಭಾಷ್ಯದಲ್ಲಿ ಹೇಳಿರುತ್ತಾರೆ.

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**

ಸುದುರಾಚಾರಃ ಅಪಿ (ಅತ್ಯಂತ ದುರಾಚಾರಿಯಾಗಿದ್ದರೂ) ಅನನ್ಯಭಾಕ್ (ಅನನ್ಯಭಕ್ತಿಯುಳ್ಳವನಾಗಿ) ಮಾಂ (ನನ್ನನ್ನು) ಭಜತೇ ಚೇತ್ (ಭಜಿಸಿದರೆ) ಸಃ (ಅವನು) ಸಾಧುಃ ಏವ (ಸಾಧುವೆಂದೇ) ಮಂತವ್ಯಃ (ತಿಳಿಯತಕ್ಕದ್ದು) ಹಿ (ಏಕೆಂದರೆ) ಸಃ (ಅವನು) ಸಮ್ಯಕ್ ವ್ಯವಸಿತಃ (ನಿಶ್ಚಯಬುದ್ಧಿಯುಳ್ಳವನು).

**೩೦.** ಅತ್ಯಂತ ದುರಾಚಾರಿಯಾಗಿದ್ದರೂ ಅನನ್ಯಭಕ್ತಿಯಿಂದ ನನ್ನನ್ನು ಭಜಿಸಿದರೆ, ಅವನು ಸಾಧುವೆಂದೇ ತಿಳಿಯತಕ್ಕದ್ದು; ಏಕೆಂದರೆ ಅವನು ನಿಶ್ಚಯಬುದ್ಧಿಯುಳ್ಳವನಾಗಿರುತ್ತಾನೆ.

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥**

ಕೌಂತೇಯ (ಎಲೈ ಅರ್ಜುನನೆ) [ಸಃ (ಅವನು)] ಕ್ಷಿಪ್ರಂ (ಬೇಗನೆ) ಧರ್ಮಾತ್ಮಾ ಭವತಿ (ಧರ್ಮಾತ್ಮನಾಗುತ್ತಾನೆ) ಶಶ್ವತ್ (ಶಾಶ್ವತವಾದ) ಶಾಂತಿಂ (ಶಾಂತಿಯನ್ನು) ನಿಗಚ್ಛತಿ (ಹೊಂದುತ್ತಾನೆ) ಮೇ (ನನ್ನ) ಭಕ್ತಃ (ಭಕ್ತನು) ನ ಪ್ರಣಶ್ಯತಿ (ನಾಶವಾಗುವುದಿಲ್ಲ) [ಇತಿ (ಎಂದು)] ಪ್ರತಿಜಾನೀಹಿ (ತಿಳಿದುಕೊ).

೩೧. ಎಲೈ ಅರ್ಜುನ, ಅವನು ಬೇಗನೆ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತವಾದ ಶಾಂತಿಯನ್ನು ಹೊಂದುತ್ತಾನೆ. ನನ್ನ ಭಕ್ತನು ನಾಶವಾಗುವುದಿಲ್ಲ ಎಂದು ತಿಳಿದುಕೊ.

[ಹಿಂದೆ ದುರಾಚಾರನಾಗಿದ್ದರೂ ದೃಢನಿಶ್ಚಯದ ಸಾಮರ್ಥ್ಯದಿಂದ ಪಾಪಗಳನ್ನು ಕಳೆದುಕೊಂಡು ಧರ್ಮಾತ್ಮನಾಗುವನು.]

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯಃ ವೈಶ್ಯಾಸ್ತಥಾ ಶೂದ್ರಾಃ ತೇಽಪಿ**
**ಯಾಂತಿ ಪರಾಂ ಗತಿಮ್ ॥ ೩೨ ॥**

ಪಾರ್ಥ (ಎಲೈ ಅರ್ಜುನನೆ) ಪಾಪಯೋನಯಃ ಅಪಿ (ಪಾಪಯೋನಿಜರಾದ) ಸ್ತ್ರಿಯಃ (ಸ್ತ್ರೀಯರು) ವೈಶ್ಯಾಃ (ವೈಶ್ಯರು) ತಥಾ ಶೂದ್ರಾಃ (ಹಾಗೆಯೇ ಶೂದ್ರರು) ಯೇ ಸ್ಯುಃ (ಯಾರು ಆಗಿರುವರೋ) ತೇ ಅಪಿ (ಅವರೂ ಕೂಡ) ಪರಾಂ ಗತಿಂ (ಪರಮಗತಿಯನ್ನು) ಯಾಂತಿ (ಹೊಂದುತ್ತಾರೆ).

೩೨. ಎಲೈ ಅರ್ಜುನ, ಪಾಪಯೋನಿಜರಾದ ಸ್ತ್ರೀಯರೂ ವೈಶ್ಯರೂ ಶೂದ್ರರೂ ಕೂಡ ನನ್ನನ್ನು ಆಶ್ರಯಿಸಿ ಪರಮಗತಿಯನ್ನು ಹೊಂದುತ್ತಾರೆ.

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾಃ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ ೩೩ ॥**

ಪುಣ್ಯಾಃ (ಪುಣ್ಯಯೋನಿಜರಾದ) ಭಕ್ತಾಃ (ಭಕ್ತರಾದ) ಬ್ರಾಹ್ಮಣಾಃ (ಬ್ರಾಹ್ಮಣರೂ) ತಥಾ (ಹಾಗೆಯೇ) ರಾಜರ್ಷಯಃ (ರಾಜರ್ಷಿಗಳೂ) [ಪರಮಗತಿಯನ್ನು ಹೊಂದುವರೆಂದು] ಕಿಂ ಪುನಃ (ಹೇಳಬೇಕಾದುದು ಏನಿದೆ) ಅನಿತ್ಯಂ (ಅನಿತ್ಯವೂ) ಅಸುಖಂ (ಅಸುಖವೂ) [ಆದ] ಇಮಂ (ಈ) ಲೋಕಂ (ಲೋಕವನ್ನು) ಪ್ರಾಪ್ಯ (ಪಡೆದು) ಮಾಂ (ನನ್ನನ್ನು) ಭಜಸ್ವ (ಭಜಿಸು).

೩೩. (ಹೀಗಿರುವಾಗ) ಪುಣ್ಯಯೋನಿಜರೂ ಭಕ್ತರೂ ಆದ ಬ್ರಾಹ್ಮಣರು ಮತ್ತು ರಾಜರ್ಷಿಗಳು ಪರಮಗತಿಯನ್ನು ಹೊಂದುವರೆಂದು ಹೇಳಬೇಕಾದುದು ಏನಿದೆ? ಅನಿತ್ಯವೂ ಅಸುಖವೂ ಆದ ಈ ಲೋಕವನ್ನು[1] ಪಡೆದಿರುವ (ನೀನು) ನನ್ನನ್ನು ಭಜಿಸು.

[1] ದುರ್ಲಭವಾದ ಮನುಷ್ಯತ್ವವನ್ನು.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥**

ಮನ್ಮನಾಃ (ನನ್ನಲ್ಲಿಯೇ ಮನಸ್ಸುಳ್ಳವನಾಗಿ) ಮದ್ಭಕ್ತಃ (ನನ್ನ ಭಕ್ತನಾಗಿ) ಮದ್ಯಾಜೀ (ನನ್ನನ್ನೇ ಪೂಜಿಸುವವನಾಗಿ) ಭವ (ಇರು) ಮಾಂ (ನನ್ನನ್ನು) ನಮಸ್ಕುರು (ನಮಸ್ಕರಿಸು) ಏವಂ (ಹೀಗೆ) ಮತ್ಪರಾಯಣಃ (ನಾನೇ ಪರಮಗತಿಯುಳ್ಳವನಾಗಿ) ಮಾಂ ಏವ (ನನ್ನನ್ನೇ) ಏಷ್ಯಸಿ (ಹೊಂದುವೆ).

೩೪. ನನ್ನಲ್ಲಿಯೇ ಮನಸ್ಸುಳ್ಳವನಾಗಿರು. ನನ್ನ ಭಕ್ತನಾಗಿರು. ನನ್ನನ್ನು ಪೂಜಿಸುವವನಾಗಿರು. ನನ್ನನ್ನು ನಮಸ್ಕರಿಸು. ಹೀಗೆ ನಾನೇ ಪರಮಗತಿಯೆಂದು ತಿಳಿದುಕೊಂಡು, ನನ್ನಲ್ಲಿ ಮನಸ್ಸನ್ನು ನಿಲ್ಲಿಸಿ, ನನ್ನನ್ನೇ ಹೊಂದುವೆ.

**ಇತಿ ರಾಜವಿದ್ಯಾ-ರಾಜಗುಹ್ಯಯೋಗೋ ನಾಮ**
**ನವಮೋಽಧ್ಯಾಯಃ ।**

ರಾಜವಿದ್ಯಾ-ರಾಜಗುಹ್ಯಯೋಗವೆಂಬ ಒಂಭತ್ತನೆಯ ಅಧ್ಯಾಯವು ಮುಗಿಯಿತು.

# ಹತ್ತನೆಯ ಅಧ್ಯಾಯ

## ವಿಭೂತಿಯೋಗ

ಶ್ರೀಭಗವಾನ್ ಉವಾಚ

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥ ೧ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಮಹಾಬಾಹೋ (ಎಲೈ ಮಹಾಬಾಹುವೆ) ಪ್ರೀಯಮಾಣಾಯ (ಪ್ರೀತಿಯನ್ನು ಹೊಂದಿರುವ) ತೇ (ನಿನಗೆ) ಹಿತಕಾಮ್ಯಯಾ (ಹಿತಕಾಮನೆಯಿಂದ) ಅಹಂ (ನಾನು) ಯತ್ (ಯಾವುದನ್ನು) ವಕ್ಷ್ಯಾಮಿ (ಹೇಳುತ್ತೇನೆಯೋ) [ತತ್ (ಅಂತಹ)] ಮೇ (ನನ್ನ) ಪರಮಂ ವಚಃ (ಪರಮವಚನವನ್ನು) ಭೂಯ ಏವ (ಪುನಃ) ಶೃಣು (ಕೇಳು).

ಶ್ರೀಕೃಷ್ಣನು ಹೇಳಿದನು

೧. ಎಲೈ ಮಹಾಬಾಹು, ನೀನು ಪುನಃ ನನ್ನ ಪರಮವಚನವನ್ನು ಕೇಳು. ಇದನ್ನು ನಾನು ಪ್ರೀತಿಯನ್ನು ಹೊಂದಿರುವ ನಿನಗೆ ಹಿತಕಾಮನೆಯಿಂದ ಹೇಳುತ್ತೇನೆ.

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥ ೨ ॥**

ಸುರಗಣಾಃ (ದೇವತಾಗಣಗಳು) ಮಹರ್ಷಯಃ (ಮಹರ್ಷಿಗಳು) ಮೇ (ನನ್ನ) ಪ್ರಭವಂ (ಉತ್ಪತ್ತಿಯನ್ನು) ನ ವಿದುಃ (ಅರಿಯರು) ಹಿ (ಏಕೆಂದರೆ) ಅಹಂ (ನಾನು) ದೇವಾನಾಂ (ದೇವತೆಗಳಿಗೆ) ಮಹರ್ಷೀಣಾಂ ಚ (ಮತ್ತು ಮಹರ್ಷಿಗಳಿಗೆ) ಸರ್ವಶಃ (ಸರ್ವಪ್ರಕಾರದಿಂದಲೂ) ಆದಿಃ (ಆದಿ).

೨. ದೇವತಾಗಣಗಳಾಗಲೀ ಮಹರ್ಷಿಗಳಾಗಲೀ ನನ್ನ ಉತ್ಪತ್ತಿಯನ್ನು ಅರಿಯರು. ಏಕೆಂದರೆ ನಾನು (ಎಲ್ಲಾ) ದೇವತೆಗಳಿಗೂ ಮಹರ್ಷಿಗಳಿಗೂ ಸರ್ವಪ್ರಕಾರದಿಂದಲೂ ಆದಿಯಾಗಿರುತ್ತೇನೆ.

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩ ॥**

ಯಃ (ಯಾವನು) ಮಾಂ (ನನ್ನನ್ನು) ಅಜಂ (ಜನ್ಮರಹಿತನೆಂದೂ) ಅನಾದಿಂ ಚ (ಆದಿಯಿಲ್ಲದವನೆಂದೂ) ಲೋಕಮಹೇಶ್ವರಂ (ಎಲ್ಲಾ ಲೋಕಗಳಿಗೂ ಮಹೇಶ್ವರ

ನೆಂದೂ) ವೇತ್ತಿ (ತಿಳಿಯುತ್ತಾನೆಯೋ) ಸಃ (ಅವನು) ಮರ್ತ್ಯೇಷು (ಮನುಷ್ಯರಲ್ಲಿ) ಅಸಂಮೂಢಃ (ಮೋಹಶೂನ್ಯನಾಗಿ) ಸರ್ವಪಾಪೈಃ (ಸರ್ವಪಾಪಗಳಿಂದಲೂ) ಪ್ರಮುಚ್ಯತೇ (ಬಿಡಲ್ಪಡುತ್ತಾನೆ).

೩. ಯಾವನು ನನ್ನನ್ನು ಜನ್ಮರಹಿತನೆಂದೂ ಆದಿಯಿಲ್ಲದವನೆಂದೂ ಸರ್ವಲೋಕಮಹೇಶ್ವರನೆಂದೂ ತಿಳಿಯುತ್ತಾನೆಯೋ ಅವನು ಮನುಷ್ಯರಲ್ಲಿ ಮೋಹಶೂನ್ಯನಾಗಿ ಸರ್ವಪಾಪಗಳಿಂದಲೂ ಬಿಡಲ್ಪಡುತ್ತಾನೆ.

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ॥ ೪ ॥**
**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥**

ಬುದ್ಧಿಃ (ಬುದ್ಧಿ) ಜ್ಞಾನಂ (ಜ್ಞಾನ) ಅಸಂಮೋಹಃ (ಅಸಂಮೋಹ) ಕ್ಷಮಾ (ಕ್ಷಮೆ) ಸತ್ಯಂ (ಸತ್ಯ) ದಮಃ (ಬಾಹ್ಯೇಂದ್ರಿಯನಿಗ್ರಹ) ಶಮಃ (ಅಂತರಿಂದ್ರಿಯನಿಗ್ರಹ) ಸುಖಂ (ಸುಖ) ದುಃಖಂ (ದುಃಖ) ಭವಃ (ಉತ್ಪತ್ತಿ) ಅಭಾವಃ (ವಿನಾಶ) ಭಯಂ (ಭಯ) ಅಭಯಂ ಏವ ಚ (ಮತ್ತು ಅಭಯ) ಅಹಿಂಸಾ (ಅಹಿಂಸೆ) ಸಮತಾ (ಸಮಚಿತ್ತತೆ) ತುಷ್ಟಿಃ (ತುಷ್ಟಿ) ತಪಃ (ತಪಸ್ಸು) ದಾನಂ (ದಾನ) ಯಶಃ (ಯಶಸ್ಸು) ಅಯಶಃ (ಅಯಶಸ್ಸು) [ಏತೇ (ಈ)] ಪೃಥಗ್ವಿಧಾಃ (ನಾನಾವಿಧವಾದ) ಭಾವಾಃ (ಭಾವಗಳೆಲ್ಲವೂ) ಭೂತಾನಾಂ (ಭೂತಗಳಿಗೆ) ಮತ್ತ ಏವ (ನನ್ನಿಂದಲೇ) ಭವಂತಿ (ಉಂಟಾಗುವುವು).

**೪–೫.** ಬುದ್ಧಿ,[1] ಜ್ಞಾನ,[2] ಅಸಂಮೋಹ,[3] ಕ್ಷಮೆ,[4] ಸತ್ಯ, ಬಾಹ್ಯೇಂದ್ರಿಯನಿಗ್ರಹ, ಅಂತರಿಂದ್ರಿಯನಿಗ್ರಹ, ಸುಖ, ದುಃಖ, ಉತ್ಪತ್ತಿ, ವಿನಾಶ, ಭಯ, ಅಭಯ, ಅಹಿಂಸೆ, ಸಮಚಿತ್ತತೆ,[5] ತುಷ್ಟಿ, ತಪಸ್ಸು, ದಾನ, ಯಶಸ್ಸು,[6] ಅಯಶಸ್ಸು[7]—ಈ ನಾನಾವಿಧವಾದ ಭಾವನೆಗಳು ಪ್ರಾಣಿಗಳಿಗೆ[8] ನನ್ನಿಂದಲೇ ಉಂಟಾಗುತ್ತವೆ.

1 ಸೂಕ್ಷ್ಮವಸ್ತುಗಳನ್ನು ಅರಿತುಕೊಳ್ಳುವ ಸಾಮರ್ಥ್ಯ.
2 ಆತ್ಮನೇ ಮೊದಲಾದ ವಸ್ತುಗಳ ಅರಿವು.
3 ತಿಳಿದುಕೊಳ್ಳಬೇಕಾದ ವಿಷಯಗಳಲ್ಲಿ ವಿವೇಕಪೂರ್ವಕವಾಗಿ ಪ್ರವರ್ತಿಸುವುದು.
4 ಮನೋವಿಕಾರಕ್ಕೆ ಕಾರಣವಿದ್ದರೂ ವಿಕಾರವನ್ನು ಹೊಂದದೆ ಇರುವುದು.
5 ಪ್ರಾಣಿವರ್ಗವನ್ನೆಲ್ಲಾ ಸಮವಾಗಿ ನೋಡುವುದು.
6 ಧರ್ಮನಿಮಿತ್ತದಿಂದ ಉಂಟಾಗುವ ಕೀರ್ತಿ.
7 ಅಧರ್ಮನಿಮಿತ್ತದಿಂದ ಉಂಟಾಗುವ ಅಪಕೀರ್ತಿ.
8 ಅವರ ಕರ್ಮಾನುಗುಣವಾಗಿ.

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ
ಇಮಾಃ ಪ್ರಜಾಃ ॥ ೬ ॥**

ಲೋಕೇ (ಲೋಕದಲ್ಲಿ) ಯೇಷಾಂ (ಯಾರಿಗೆ) ಇಮಾಃ ಪ್ರಜಾಃ (ಈ ಪ್ರಜೆಗಳು) [ಹುಟ್ಟಿದರೋ, ಅಂತಹ] ಪೂರ್ವೇ (ಪೂರ್ವಕಾಲದ) ಸಪ್ತ ಮಹರ್ಷಯಃ (ಸಪ್ತಮಹರ್ಷಿಗಳು) ತಥಾ (ಮತ್ತು) ಚತ್ವಾರಃ (ನಾಲ್ವರಾದ) ಮನವಃ (ಮನುಗಳು) ಮದ್ಭಾವಾಃ (ನನ್ನ ಭಾವವುಳ್ಳವರಾಗಿ) ಮಾನಸಾಃ ಜಾತಾಃ (ನನ್ನ ಸಂಕಲ್ಪದಿಂದಲೇ ಜನಿಸಿದರು).

೬. ಪೂರ್ವಕಾಲದ ಸಪ್ತಮಹರ್ಷಿಗಳು ಮತ್ತು ನಾಲ್ಕು ಜನ ಮನುಗಳು ನನ್ನ ಭಾವವುಳ್ಳವರಾಗಿ[1] ನನ್ನ ಸಂಕಲ್ಪದಿಂದಲೇ ಜನಿಸಿದರು. ಲೋಕದಲ್ಲಿ ಈ ಪ್ರಜೆಗಳೆಲ್ಲಾ ಅವರಿಂದಲೇ ಉತ್ಪನ್ನರಾದರು.

[1] ವೈಷ್ಣವಸಾಮರ್ಥ್ಯದಿಂದ ಕೂಡಿದವರಾಗಿ (ಶ್ರೀಶಂಕರ).

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥**

ಯಃ (ಯಾವನು) ಮಮ (ನನ್ನ) ಏತಾಂ (ಈ) ವಿಭೂತಿಂ (ವಿಭೂತಿಯನ್ನೂ) ಯೋಗಂ ಚ (ಮತ್ತು ಯೋಗವನ್ನೂ) ತತ್ತ್ವತಃ (ಯಥಾರ್ಥವಾಗಿ) ವೇತ್ತಿ (ತಿಳಿದುಕೊಳ್ಳುತ್ತಾನೆಯೋ) ಸಃ (ಅವನು) ಅವಿಕಂಪೇನ (ಅಲುಗಾಡದ, ಅಚಲವಾದ) ಯೋಗೇನ (ಯೋಗದಿಂದ) ಯುಜ್ಯತೇ (ಯುಕ್ತನಾಗುತ್ತಾನೆ) ಅತ್ರ (ಈ ವಿಷಯದಲ್ಲಿ) ನ ಸಂಶಯಃ (ಸಂಶಯವಿಲ್ಲ).

೭. ಯಾವನು ಈ ನನ್ನ ವಿಭೂತಿಯನ್ನೂ[1] ಮತ್ತು ಯೋಗವನ್ನೂ[2] ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ ಅವನು ಅಚಲವಾದ[3] ಯೋಗದಿಂದ ಯುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

[1] ಹಿಂದೆ ಹೇಳಿದ ಭೃಗ್ವಾದಿಗಳ ವಿಸ್ತಾರವನ್ನು.

[2] ಯೋಗದಿಂದ ಉತ್ಪನ್ನವಾಗಿರುವ ಯೋಗೈಶ್ವರ್ಯಸಾಮರ್ಥ್ಯವಾದ ಸರ್ವಜ್ಞತ್ವವನ್ನು (ಶ್ರೀಶಂಕರ).

[3] ಸಮ್ಯಗ್‌ದರ್ಶನ-ಸ್ಥೈರ್ಯರೂಪವಾದ (ಶ್ರೀಶಂಕರ).

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥**

ಅಹಂ (ನಾನು) ಸರ್ವಸ್ಯ (ಎಲ್ಲಕ್ಕೂ) ಪ್ರಭವಃ (ಉತ್ಪತ್ತಿಸ್ಥಾನ) ಮತ್ತಃ (ನನ್ನಿಂದ) ಸರ್ವಂ (ಎಲ್ಲವೂ) ಪ್ರವರ್ತತೇ (ಪ್ರವರ್ತಿಸುತ್ತಿರುವುದು) ಇತಿ (ಹೀಗೆ) ಮತ್ವಾ (ತಿಳಿದುಕೊಂಡು) ಬುಧಾಃ (ಜ್ಞಾನಿಗಳು) ಭಾವಸಮನ್ವಿತಾಃ (ಭಾವದಿಂದ ಕೂಡಿದವರಾಗಿ) ಮಾಂ (ನನ್ನನ್ನು) ಭಜಂತೇ (ಭಜಿಸುತ್ತಾರೆ).

೮. ನಾನು ಸಮಸ್ತಜಗತ್ತಿಗೆ ಉತ್ಪತ್ತಿಸ್ಥಾನ, ನನ್ನಿಂದಲೇ ಎಲ್ಲವೂ[1] ಪ್ರವರ್ತಿಸುತ್ತಿರುವುದು—ಹೀಗೆಂದು ತಿಳಿದು ಜ್ಞಾನಿಗಳು ಭಾವದಿಂದ[2] ಕೂಡಿದವರಾಗಿ ನನ್ನನ್ನು ಭಜಿಸುತ್ತಾರೆ.

1 ಸ್ಥಿತಿ, ನಾಶ, ಕ್ರಿಯೆ, ಕರ್ಮಫಲ ಮುಂತಾದುವು (ಶ್ರೀಶಂಕರ).
2 ಪರಮಾರ್ಥ-ತತ್ತ್ವದಲ್ಲಿರುವ ಅಭಿನಿವೇಶ (ಶ್ರೀಶಂಕರ).

**ಮಚ್ಚಿತ್ತಾ ಮದ್ಗತಪ್ರಾಣಾಃ ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯ ॥**

ಮಚ್ಚಿತ್ತಾಃ (ನನ್ನಲ್ಲಿ ನೆಲೆಗೊಳಿಸಿದ ಮನಸ್ಸುಳ್ಳವರೂ) ಮದ್ಗತಪ್ರಾಣಾಃ (ನನ್ನಲ್ಲಿ ಪ್ರಾಣವುಳ್ಳವರೂ) ಮಾಂ (ನನ್ನನ್ನು) ಪರಸ್ಪರಂ (ಪರಸ್ಪರವಾಗಿ) ಬೋಧಯಂತಃ (ಬೋಧಿಸುತ್ತಾ) ನಿತ್ಯಂ (ಯಾವಾಗಲೂ) ಕಥಯಂತಃ ಚ (ಹೇಳುತ್ತಾ) ತುಷ್ಯಂತಿ ಚ (ಸಂತೋಷಪಡುತ್ತಾರೆ) ರಮಂತಿ ಚ (ಮತ್ತು ಆನಂದಿಸುತ್ತಾರೆ).

೯. ನನ್ನಲ್ಲಿಯೇ ನೆಲೆಗೊಳಿಸಿದ ಮನಸ್ಸುಳ್ಳವರೂ, ನನ್ನಲ್ಲಿಯೇ ಪ್ರಾಣವುಳ್ಳವರೂ, ನನ್ನನ್ನೇ ಪರಸ್ಪರವಾಗಿ ಬೋಧಿಸುತ್ತಾ, ಯಾವಾಗಲೂ (ನನ್ನ ಕಥೆಯನ್ನೇ) ಹೇಳುತ್ತಾ ಸಂತೋಷಪಡುತ್ತಾರೆ ಮತ್ತು ಆನಂದಿಸುತ್ತಾರೆ.[1]

1 ಹೇಳುವವರು ಅನನ್ಯಪ್ರಯೋಜನವಾದ ಭಗವಂತನ ಪ್ರವಚನದಿಂದ ಸಂತೋಷಪಡುತ್ತಾರೆ, ಕೇಳುವವರು ಅವಧಿಯಿಲ್ಲದಷ್ಟು ಅತಿಶಯಪ್ರಿಯವಾಗಿರುವ ಆ ಶ್ರವಣದಿಂದ ಆನಂದಿಸುತ್ತಾರೆ (ಶ್ರೀರಾಮಾನುಜ).

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥ ೧೦ ॥**

ಯೇನ (ಯಾವುದರಿಂದ) ಮಾಂ (ನನ್ನನ್ನು) ತೇ (ಅವರು) ಉಪಯಾಂತಿ (ಹೊಂದಬಲ್ಲರೋ) ತಂ (ಅಂತಹ) ಬುದ್ಧಿಯೋಗಂ (ಬುದ್ಧಿಯೋಗವನ್ನು) ಸತತ-ಯುಕ್ತಾನಾಂ (ನಿತ್ಯಯುಕ್ತರಾದವರಿಗೆ) ಪ್ರೀತಿಪೂರ್ವಕಂ (ಪ್ರೀತಿಪೂರ್ವಕವಾಗಿ) ಭಜತಾಂ (ಭಜಿಸುತ್ತಿರುವ) ತೇಷಾಂ (ಅವರಿಗೆ) ದದಾಮಿ (ಕೊಡುತ್ತೇನೆ).

೧೦. ನಿತ್ಯಯುಕ್ತರೂ ಪ್ರೀತಿಪೂರ್ವಕವಾಗಿ ಭಜಿಸುತ್ತಿರುವವರೂ ಆದ ಅವರಿಗೆ ಆ ಬುದ್ಧಿಯೋಗವನ್ನು[1] ಕೊಡುತ್ತೇನೆ; ಅದರಿಂದ ಅವರು ನನ್ನನ್ನು ಹೊಂದುವರು.

[1] ಬುದ್ಧಿ ಎಂದರೆ ಭಗವಂತನ ತತ್ತ್ವದ ವಿಷಯವಾದ ಸಮ್ಯಗ್ದರ್ಶನ (ಶ್ರೀಶಂಕರ). [ಶ್ರೀರಾಮಾನುಜಾಚಾರ್ಯರು, ಬುದ್ಧಿಯೋಗವನ್ನು ಪ್ರೀತಿಪೂರ್ವಕವಾಗಿ ಕೊಡುತ್ತೇನೆ ಎಂದು ಅನ್ವಯಮಾಡಿರುತ್ತಾರೆ.]

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

ತೇಷಾಂ (ಅವರಿಗೆ) ಅನುಕಂಪಾರ್ಥಂ (ಅನುಕಂಪೆಯನ್ನುತೋರಿಸಬೇಕೆಂದು) ಅಹಂ (ನಾನು) ಆತ್ಮಭಾವಸ್ಥಃ (ಅವರ ಬುದ್ಧಿಯಲ್ಲಿ ಸ್ಥಿತನಾಗಿ) ಭಾಸ್ವತಾ (ಪ್ರಕಾಶಿಸುತ್ತಿರುವ) ಜ್ಞಾನದೀಪೇನ (ಜ್ಞಾನವೆಂಬ ದೀಪದಿಂದ) ಅಜ್ಞಾನಜಂ (ಅಜ್ಞಾನದಿಂದ ಹುಟ್ಟಿರುವ) ತಮಃ (ತಮಸ್ಸನ್ನು) ನಾಶಯಾಮಿ (ನಾಶಮಾಡುತ್ತೇನೆ).

೧೧. ಅವರಿಗೆ ಅನುಕಂಪೆಯನ್ನು ತೋರಿಸಬೇಕೆಂದು ನಾನು ಅವರ ಬುದ್ಧಿಯಲ್ಲಿ ಸ್ಥಿತನಾಗಿ, ಪ್ರಕಾಶಿಸುತ್ತಿರುವ ಜ್ಞಾನದೀಪದಿಂದ ಅಜ್ಞಾನದಿಂದ ಹುಟ್ಟಿರುವ ತಮಸ್ಸನ್ನು[1] ನಾಶಮಾಡುತ್ತೇನೆ.

[1] ಅವಿವೇಕದಿಂದ ಹುಟ್ಟಿದ ಮಿಥ್ಯಾಪ್ರತ್ಯಯವೆಂಬ ಮೋಹಾಂಧಕಾರ (ಶ್ರೀಶಂಕರ).

ಅರ್ಜುನ ಉವಾಚ

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨ ॥**
**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ ೧೩ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)—ಭವಾನ್ (ನೀನು) ಪರಂ ಬ್ರಹ್ಮ (ಪರಬ್ರಹ್ಮ) ಪರಂ ಧಾಮ (ಪರಮಧಾಮ) ಪರಮಂ ಪವಿತ್ರಂ (ಪರಮಪವಿತ್ರ) ಸರ್ವೇ (ಎಲ್ಲಾ) ಋಷಯಃ (ಋಷಿಗಳು) ದೇವರ್ಷಿಃ (ದೇವರ್ಷಿಯಾದ) ನಾರದಃ (ನಾರದನು) ತಥಾ (ಹಾಗೆಯೇ) ಅಸಿತಃ ದೇವಲಃ (ಅಸಿತ ದೇವಲನು) ವ್ಯಾಸಃ (ವ್ಯಾಸನು) ತ್ವಾಂ (ನಿನ್ನನ್ನು) ಶಾಶ್ವತಂ (ಶಾಶ್ವತನಾದ) ಪುರುಷಂ (ಪುರುಷನೆಂದು) ದಿವ್ಯಂ (ದಿವ್ಯನೆಂದು) ಆದಿದೇವಂ (ಆದಿದೇವನೆಂದು)

ಅಜಂ (ಅಜನೆಂದು) ವಿಭುಂ(ವಿಭುವೆಂದು) ಆಹುಃ (ಹೇಳುತ್ತಾರೆ) ಸ್ವಯಂ ಏವ ಚ (ನೀನೂ ಕೂಡ) ಮೇ (ನನಗೆ) ಬ್ರವೀಷಿ (ಹೇಳುತ್ತಿದ್ದೀಯೆ).

### ಅರ್ಜುನನು ಹೇಳಿದನು

**೧೨-೧೩.** ನೀನು ಪರಬ್ರಹ್ಮ[1] ಪರಮಧಾಮ[2] ಮತ್ತು ಪರಮಪವಿತ್ರ. ಎಲ್ಲಾ ಋಷಿಗಳೂ ದೇವರ್ಷಿಯಾದ ನಾರದನೂ ಅಸಿತದೇವಲ ವ್ಯಾಸ ಮುಂತಾದವರೂ ನಿನ್ನನ್ನು ಶಾಶ್ವತನಾದ ಪುರುಷನೆಂದೂ ದಿವ್ಯನೆಂದೂ ಆದಿ ದೇವನೆಂದೂ ಅಜನೆಂದೂ ವಿಭುವೆಂದೂ ಹೇಳುವರು. ನೀನೂ ಕೂಡ ನನಗೆ (ಹಾಗೆಯೇ) ಹೇಳುತ್ತಿದ್ದೀಯೆ.

1 ಪರಮಾತ್ಮ.
2 ಪರಂಜ್ಯೋತಿ.

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪ ॥**

ಕೇಶವ (ಎಲೈ ಕೇಶವನೆ) ಯತ್ (ಯಾವುದನ್ನು) ಮಾಂ (ನನ್ನನ್ನು ಕುರಿತು) ವದಸಿ (ಹೇಳುತ್ತಿರುವೆಯೋ) ಏತತ್ ಸರ್ವಂ (ಇವೆಲ್ಲವನ್ನೂ) ಋತಂ (ಸತ್ಯವೆಂದು) ಮನ್ಯೇ (ಅರಿಯುತ್ತೇನೆ) ಹಿ (ಏಕೆಂದರೆ) ಭಗವನ್ (ಎಲೈ ಭಗವಂತನೆ) ತೇ (ನಿನ್ನ) ವ್ಯಕ್ತಿಂ (ವ್ಯಕ್ತಿಯನ್ನು) ದೇವಾಃ (ದೇವತೆಗಳು) ನ ವಿದುಃ (ಅರಿಯರು) ದಾನವಾಃ (ದಾನವರು) ನ (ಅರಿಯರು).

**೧೪.** ಎಲೈ ಕೇಶವ, (ನೀನು) ಯಾವುದನ್ನು ನನಗೆ ಹೇಳುತ್ತಿರುವೆಯೋ ಇವೆಲ್ಲವನ್ನೂ ಸತ್ಯವೆಂದು ತಿಳಿಯುತ್ತೇನೆ. ಎಲೈ ಭಗವಂತನೆ, ದೇವತೆಗಳೂ ದಾನವರೂ ಸಹ ನಿನ್ನ ವ್ಯಕ್ತಿಯನ್ನು[1] ಅರಿಯರು.

1 ಉತ್ಪತ್ತಿಯನ್ನು (ಶ್ರೀಶಂಕರ). (ವಿಭೂತಿಯ ಮೂಲಕ) ವ್ಯಕ್ತವಾಗುವ ಪ್ರಕಾರವನ್ನು (ಶ್ರೀರಾಮಾನುಜ).

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥**

ಪುರುಷೋತ್ತಮ (ಎಲೈ ಪುರುಷೋತ್ತಮನೆ) ಭೂತಭಾವನ (ಎಲೈ ಭೂತ ಭಾವನನೆ) ಭೂತೇಶ (ಎಲೈ ಭೂತೇಶನೆ) ದೇವದೇವ (ಎಲೈ ದೇವದೇವನೆ) ಜಗತ್ಪತೇ (ಎಲೈ ಜಗತ್ಪತಿಯೆ) ತ್ವಂ ಸ್ವಯಂ ಏವ (ನೀನು ನೀನೇ) ಆತ್ಮನಾ (ನಿನ್ನಿಂದಲೇ) ಆತ್ಮಾನಂ (ನಿನ್ನನ್ನು) ವೇತ್ಥ (ತಿಳಿದುಕೊಂಡಿದ್ದೀಯೆ).

೧೫. ಎಲೈ ಪುರುಷೋತ್ತಮ, ಎಲೈ ಭೂತಭಾವನ, ಎಲೈ ಭೂತೇಶ, ಎಲೈ ದೇವದೇವ, ಎಲೈ ಜಗತ್ಪತಿ, ನೀನು ನೀನೇ ನಿನ್ನನ್ನು[1] ನಿನ್ನಿಂದಲೇ[2] ತಿಳಿದುಕೊಂಡಿರುತ್ತೀಯೆ.

1 ತನ್ನ ಸ್ವರೂಪವನ್ನು.
2 ತನ್ನ ಜ್ಞಾನದಿಂದಲೇ.

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬ ॥**

ಯಾಭಿಃ (ಯಾವಯಾವ) ವಿಭೂತಿಭಿಃ (ವಿಭೂತಿಗಳಿಂದ) ತ್ವಂ (ನೀನು) ಇಮಾನ್ (ಈ) ಲೋಕಾನ್ (ಲೋಕಗಳನ್ನು) ವ್ಯಾಪ್ಯ (ವ್ಯಾಪಿಸಿಕೊಂಡು) ತಿಷ್ಠಸಿ (ಇರುವೆಯೋ) [ಅ] ದಿವ್ಯಾಃ (ದಿವ್ಯವಾದ) ಆತ್ಮವಿಭೂತಯಃ (ನಿನ್ನ ವಿಭೂತಿಗಳನ್ನು) ಅಶೇಷೇಣ ಹಿ (ನಿಶ್ಶೇಷವಾಗಿ) ವಕ್ತುಂ ಅರ್ಹಸಿ (ಹೇಳಲು ಸಮರ್ಥನಾಗಿದ್ದೀಯೆ).

೧೬. ಯಾವ ಯಾವ ವಿಭೂತಿಗಳಿಂದ ನೀನು ಈ ಲೋಕಗಳನ್ನು ವ್ಯಾಪಿಸಿಕೊಂಡಿರುವೆಯೋ ಆ ದಿವ್ಯವಾದ ನಿನ್ನ ವಿಭೂತಿಗಳನ್ನು ನಿಶ್ಶೇಷವಾಗಿ ಹೇಳು.

**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥ ೧೭ ॥**

ಯೋಗಿನ್ (ಎಲೈ ಯೋಗೀಶ್ವರನೆ) ಅಹಂ (ನಾನು) ತ್ವಾಂ (ನಿನ್ನನ್ನು) ಸದಾ (ಯಾವಾಗಲೂ) ಪರಿಚಿಂತಯನ್ (ಧ್ಯಾನಿಸುತ್ತಾ) ಕಥಂ ವಿದ್ಯಾಂ (ಹೇಗೆ ತಿಳಿದುಕೊಳ್ಳಲಿ) ಭಗವನ್ (ಎಲೈ ಭಗವಂತನೆ) ಕೇಷು ಕೇಷು (ಯಾವ ಯಾವ) ಭಾವೇಷು ಚ (ಭಾವಗಳಲ್ಲಿ) ಮಯಾ (ನನ್ನಿಂದ) ಚಿಂತ್ಯಃ ಅಸಿ (ಚಿಂತ್ಯನಾಗಿರುವೆ).

೧೭. ಎಲೈ ಯೋಗೀಶ್ವರನೆ, ನಿನ್ನನ್ನು ಯಾವಾಗಲೂ ಧ್ಯಾನಿಸುತ್ತಾ ನಾನು ಹೇಗೆ (ನಿನ್ನನ್ನು) ತಿಳಿದುಕೊಳ್ಳಲಿ? ಎಲೈ ಭಗವಂತನೆ, ಯಾವ ಯಾವ ಭಾವಗಳಲ್ಲಿ[1] ನಾನು ನಿನ್ನನ್ನು ಧ್ಯಾನಿಸಲಿ?

1 ವಸ್ತುಗಳಲ್ಲಿ.

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ॥ ೧೮ ॥**

ಜನಾರ್ದನ (ಎಲೈ ಜನಾರ್ದನನೆ) ಆತ್ಮನಃ (ನಿನ್ನ) ಯೋಗಂ (ಯೋಗವನ್ನು) ವಿಭೂತಿಂ ಚ (ಮತ್ತು ವಿಭೂತಿಯನ್ನು) ವಿಸ್ತರೇಣ (ವಿಸ್ತಾರವಾಗಿ) ಭೂಯಃ (ಪುನಃ) ಕಥಯ (ಹೇಳು) ಹಿ (ಏಕೆಂದರೆ) ಅಮೃತಂ (ಅಮೃತವನ್ನು) ಶೃಣ್ವತಃ (ಕೇಳುತ್ತಿರುವ) ಮೇ (ನನಗೆ) ತೃಪ್ತಿಃ (ತೃಪ್ತಿಯು) ನ ಅಸ್ತಿ (ಇಲ್ಲ).

೧೮. ಎಲೈ ಜನಾರ್ದನ, ನಿನ್ನ ಯೋಗವನ್ನೂ[1] ಮತ್ತು ವಿಭೂತಿಯನ್ನೂ[2] ವಿಸ್ತಾರವಾಗಿ ಪುನಃ ಹೇಳು. ಏಕೆಂದರೆ (ನಿನ್ನ ಉಪದೇಶವೆಂಬ) ಅಮೃತವನ್ನು ಕೇಳುತ್ತಿರುವ ನನಗೆ ತೃಪ್ತಿಯಿಲ್ಲ.

1 ಯೋಗೈಶ್ವರ್ಯವೆಂಬ ಶಕ್ತಿವಿಶೇಷ (ಶ್ರೀಶಂಕರ).
2 ಧ್ಯಾನಮಾಡತಕ್ಕ ವಸ್ತುಗಳ ವಿಸ್ತಾರ (ಶ್ರೀಶಂಕರ).

ಶ್ರೀಭಗವಾನ್ ಉವಾಚ

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಹಂತ ಕುರುಶ್ರೇಷ್ಠ (ಎಲೈ ಕುರುಶ್ರೇಷ್ಠನೆ) ದಿವ್ಯಾಃ (ದಿವ್ಯವಾದ) ಆತ್ಮವಿಭೂತಯಃ (ನನ್ನ ವಿಭೂತಿಗಳು) [ಯಾಃ (ಯಾವುವೋ) ತಾಃ (ಅವುಗಳನ್ನು)] ಪ್ರಾಧಾನ್ಯತಃ (ಪ್ರಾಧಾನ್ಯವಾಗಿ) ತೇ (ನಿನಗೆ) ಕಥಯಿಷ್ಯಾಮಿ (ಹೇಳುವೆನು) ಹಿ (ಏಕೆಂದರೆ) ಮೇ (ನನ್ನ) ವಿಸ್ತರಸ್ಯ (ವಿಭೂತಿಯ ವಿಸ್ತಾರಕ್ಕೆ) ಅಂತಃ (ಕೊನೆಯು) ನ ಅಸ್ತಿ (ಇಲ್ಲ).

ಶ್ರೀಕೃಷ್ಣನು ಹೇಳಿದನು

೧೯. ಎಲೈ ಕುರುಶ್ರೇಷ್ಠ, ನನ್ನ ದಿವ್ಯವಾದ ವಿಭೂತಿಗಳನ್ನು ನಿನಗೆ ಪ್ರಾಧಾನ್ಯವಾಗಿ ಹೇಳುವೆನು. ಏಕೆಂದರೆ ನನ್ನ ವಿಭೂತಿಯ ವಿಸ್ತಾರಕ್ಕೆ ಕೊನೆಯಿಲ್ಲ.

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥ ೨೦ ॥**

ಗುಡಾಕೇಶ (ಎಲೈ ಗುಡಾಕೇಶನೆ) ಅಹಂ (ನಾನು) ಸರ್ವಭೂತಾಶಯಸ್ಥಿತಃ (ಸಮಸ್ತಪ್ರಾಣಿಗಳ ಹೃದಯದಲ್ಲಿರುವ) ಆತ್ಮಾ (ಆತ್ಮ) ಅಹಂ ಏವ (ನಾನೇ) ಭೂತಾನಾಂ (ಪ್ರಾಣಿಗಳ) ಆದಿಃ ಚ (ಆದಿ) ಮಧ್ಯಂ ಚ (ಮಧ್ಯ) ಅಂತಃ ಚ (ಮತ್ತು ಅಂತ).

೨೦. ಎಲೈ ಗುಡಾಕೇಶನೆ,[1] ನಾನು ಸಮಸ್ತಪ್ರಾಣಿಗಳ ಹೃದಯದಲ್ಲಿರುವ ಆತ್ಮ. ನಾನೇ (ಸಮಸ್ತ) ಭೂತಗಳ ಆದಿ, ಮಧ್ಯ ಮತ್ತು ಅಂತ.[2]

1 ನಿದ್ರೆಯನ್ನು ಗೆದ್ದವನು.

2 ಸಮಸ್ತಪ್ರಾಣಿಗಳ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣನು.

**ಆದಿತ್ಯಾನಾಮಹಂ ವಿಷ್ಣುಃ ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥**

ಅಹಂ (ನಾನು) ಆದಿತ್ಯಾನಾಂ (ಆದಿತ್ಯರಲ್ಲಿ) ವಿಷ್ಣುಃ (ವಿಷ್ಣು) ಜ್ಯೋತಿಷಾಂ (ಜ್ಯೋತಿಸ್ಸುಗಳಲ್ಲಿ) ಅಂಶುಮಾನ್ (ರಶ್ಮಿಗಳುಳ್ಳ) ರವಿಃ (ಸೂರ್ಯ) ಮರುತಾಂ (ಮರುತ್ತುಗಳಲ್ಲಿ) ಮರೀಚಿಃ ಅಸ್ಮಿ (ಮರೀಚಿಯಾಗಿದ್ದೇನೆ) ಅಹಂ (ನಾನು) ನಕ್ಷತ್ರಾಣಾಂ (ನಕ್ಷತ್ರಗಳಲ್ಲಿ) ಶಶೀ (ಚಂದ್ರ).

೨೧. ನಾನು ದ್ವಾದಶ ಆದಿತ್ಯರಲ್ಲಿ ವಿಷ್ಣು, ಜ್ಯೋತಿಸ್ಸುಗಳಲ್ಲಿ ರಶ್ಮಿಗಳುಳ್ಳ ಸೂರ್ಯ, ಮರುದ್ಗಣಗಳಲ್ಲಿ ಮರೀಚಿ, ನಕ್ಷತ್ರಗಳ ಮಧ್ಯದಲ್ಲಿ ಚಂದ್ರ.[1]

1 'ಆದಿತ್ಯರಲ್ಲಿ ನಾನು ವಿಷ್ಣು' ಎಂದು ಹೇಳಿದ ಹಾಗೆ ಇದು ನಿರ್ಧಾರಣಷಷ್ಠಿಯಲ್ಲ. 'ಪ್ರಾಣಿಗಳಲ್ಲಿ ನಾನು ಚೈತನ್ಯ' ಎಂಬ ದೃಷ್ಟಾಂತದಂತೆ ಇದು ಸಾಮಾನ್ಯಷಷ್ಠಿ. 'ನಕ್ಷತ್ರಗಳಿಗೆ ಒಡೆಯನಾದ ಚಂದ್ರನು ನಾನೇ' ಎಂದು ಅರ್ಥ (ಶ್ರೀರಾಮಾನುಜ).

[ಭಗವಂತನು ಎಲ್ಲದರಲ್ಲಿಯೂ ಆತ್ಮನಾಗಿರುವುದರಿಂದ ಸಮಸ್ತಶಬ್ದಗಳೂ ಅವನಲ್ಲಿಯೇ ಪರ್ಯವಸಾನವನ್ನು ಹೊಂದುತ್ತವೆ. ಅದು ಹೇಗೆಂದರೆ ದೇವತೆ, ಮನುಷ್ಯ, ಪಕ್ಷಿ ಮೊದಲಾದ ಶಬ್ದಗಳು ಆಯಾ ಶರೀರಗಳನ್ನು ತಿಳಿಸಿ ಕೊನೆಗೆ ಆ ಶರೀರಗಳಲ್ಲಿರುವ ಆತ್ಮನನ್ನೇ ಬೋಧಿಸುತ್ತವೆ; ಭಗವಂತನು ತನ್ನ ವಿಭೂತಿಗಳಿಗೆ ಆತ್ಮನಾಗಿರುವುದರಿಂದ ಆಯಾ ವಿಭೂತಿಗಳನ್ನು ಪ್ರತಿಪಾದಿಸುವ ಶಬ್ದಗಳು ಸಾಮಾನಾಧಿಕರಣ್ಯದ ಮೂಲಕ ಭಗವಂತನಿಗೇ ಅನ್ವಯಿಸುತ್ತವೆ—ಶ್ರೀರಾಮಾನುಜ.]

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥**

ವೇದಾನಾಂ (ವೇದಗಳಲ್ಲಿ) ಸಾಮವೇದಃ ಅಸ್ಮಿ (ಸಾಮವೇದವಾಗಿರುವೆನು) ದೇವಾನಾಂ (ದೇವತೆಗಳಲ್ಲಿ) ವಾಸವಃ ಅಸ್ಮಿ (ಇಂದ್ರನಾಗಿರುವೆನು) ಇಂದ್ರಿಯಾಣಾಂ (ಇಂದ್ರಿಯಗಳಲ್ಲಿ) ಮನಃ ಅಸ್ಮಿ (ಮನಸ್ಸಾಗಿರುವೆನು) ಭೂತಾನಾಂ ಚ (ಮತ್ತು ಭೂತಗಳಲ್ಲಿ) ಚೇತನಾ ಅಸ್ಮಿ (ಚೈತನ್ಯವಾಗಿರುವೆನು).

೨೨. ನಾನು ವೇದಗಳಲ್ಲಿ ಸಾಮವೇದ, ದೇವತೆಗಳಲ್ಲಿ ಇಂದ್ರ, ಇಂದ್ರಿಯಗಳಲ್ಲಿ ಮನಸ್ಸು ಮತ್ತು ಭೂತಗಳಲ್ಲಿ ಚೈತನ್ಯ.[1]

[1] ಶರೀರೇಂದ್ರಿಯಗಳ ಗುಂಪಿನಲ್ಲಿ ಯಾವಾಗಲೂ ಅಭಿವ್ಯಕ್ತವಾಗಿರುವ ಬುದ್ಧಿಯ ವೃತ್ತಿ (ಶ್ರೀಶಂಕರ).

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥ ೨೩ ॥**

ರುದ್ರಾಣಾಂ ಚ (ರುದ್ರರಲ್ಲಿ) ಶಂಕರಃ ಅಸ್ಮಿ (ಶಂಕರನಾಗಿರುವೆನು) ಯಕ್ಷ-ರಕ್ಷಸಾಂ (ಯಕ್ಷರಾಕ್ಷಸರಲ್ಲಿ) ವಿತ್ತೇಶಃ (ಕುಬೇರನು) ವಸೂನಾಂ ಚ (ಅಷ್ಟವಸುಗಳಲ್ಲಿ) ಪಾವಕಃ ಅಸ್ಮಿ (ಅಗ್ನಿಯಾಗಿರುವೆನು) ಶಿಖರಿಣಾಂ ಚ (ಶಿಖರಗಳಿರುವ ಪರ್ವತಗಳಲ್ಲಿ) ಅಹಂ (ನಾನು) ಮೇರುಃ (ಮೇರು).

೨೩. ನಾನು ಏಕಾದಶರುದ್ರರಲ್ಲಿ ಶಂಕರ, ಯಕ್ಷರಾಕ್ಷಸರಲ್ಲಿ ಕುಬೇರ, ಅಷ್ಟವಸುಗಳಲ್ಲಿ ಅಗ್ನಿ, ಶಿಖರಗಳುಳ್ಳ ಪರ್ವತಗಳಲ್ಲಿ ಮೇರು.

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ ೨೪ ॥**

ಪಾರ್ಥ (ಎಲೈ ಅರ್ಜುನನೆ) ಪುರೋಧಸಾಂ ಚ (ರಾಜಪುರೋಹಿತರಲ್ಲಿ) ಮುಖ್ಯಂ (ಮುಖ್ಯನಾದ) ಬೃಹಸ್ಪತಿಂ (ಬೃಹಸ್ಪತಿಯೆಂದು) ಮಾಂ (ನನ್ನನ್ನು) ವಿದ್ಧಿ (ತಿಳಿದುಕೊ) ಸೇನಾನೀನಾಂ (ಸೇನಾಪತಿಗಳಲ್ಲಿ) ಸ್ಕಂದಃ (ಸ್ಕಂದ) ಸರಸಾಂ (ಸರಸ್ಸುಗಳಲ್ಲಿ) ಸಾಗರಃ ಅಸ್ಮಿ (ಸಾಗರವಾಗಿದ್ದೇನೆ).

೨೪. ಎಲೈ ಪಾರ್ಥ, ರಾಜಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿ ನಾನು ಎಂದು ತಿಳಿದುಕೊ; ನಾನು ಸೇನಾಪತಿಗಳಲ್ಲಿ ಸ್ಕಂದ, ಸರಸ್ಸುಗಳಲ್ಲಿ[1] ಸಾಗರ.

[1] ಕೃತಕವಾಗಿ ರಚಿಸದೆ ಸ್ವಾಭಾವಿಕವಾಗಿಯೇ ಉಂಟಾದುವುಗಳು.

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥ ೨೫ ॥**

ಅಹಂ (ನಾನು) ಮಹರ್ಷೀಣಾಂ (ಮಹರ್ಷಿಗಳಲ್ಲಿ) ಭೃಗುಃ ಅಸ್ಮಿ (ಭೃಗುವಾಗಿದ್ದೇನೆ) ಗಿರಾಂ (ಮಾತುಗಳಲ್ಲಿ) ಏಕಂ ಅಕ್ಷರಂ (ಏಕಾಕ್ಷರವಾದ ಪ್ರಣವ),

ಯಜ್ಞಾನಾಂ (ಯಜ್ಞಗಳಲ್ಲಿ) ಜಪಯಜ್ಞಃ (ಜಪಯಜ್ಞ) ಸ್ಥಾವರಾಣಾಂ (ಸ್ಥಾವರಗಳಲ್ಲಿ) ಹಿಮಾಲಯಃ (ಹಿಮಾಲಯ).

**೨೫.** ನಾನು ಮಹರ್ಷಿಗಳಲ್ಲಿ ಭೃಗು, ಮಾತುಗಳಲ್ಲಿ[1] ಏಕಾಕ್ಷರವಾದ ಪ್ರಣವ, ಯಜ್ಞಗಳಲ್ಲಿ ಜಪಯಜ್ಞ, ಸ್ಥಾವರಗಳಲ್ಲಿ ಹಿಮಾಲಯ.

1 ಅರ್ಥವನ್ನು ಬೋಧಿಸುವ ಶಬ್ದಗಳಲ್ಲಿ (ಶ್ರೀರಾಮಾನುಜ).

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥**

ಸರ್ವವೃಕ್ಷಾಣಾಂ (ಸರ್ವವೃಕ್ಷಗಳಲ್ಲಿ) ಅಶ್ವತ್ಥಃ (ಅಶ್ವತ್ಥ) ದೇವರ್ಷೀಣಾಂ ಚ (ದೇವರ್ಷಿಗಳಲ್ಲಿ) ನಾರದಃ (ನಾರದ) ಗಂಧರ್ವಾಣಾಂ (ಗಂಧರ್ವರಲ್ಲಿ) ಚಿತ್ರರಥಃ (ಚಿತ್ರರಥ) ಸಿದ್ಧಾನಾಂ (ಸಿದ್ಧರಲ್ಲಿ) ಕಪಿಲಃ ಮುನಿಃ (ಕಪಿಲಮುನಿ).

**೨೬.** ನಾನು ಸಮಸ್ತವೃಕ್ಷಗಳಲ್ಲಿ ಅಶ್ವತ್ಥ, ದೇವರ್ಷಿಗಳಲ್ಲಿ[1] ನಾರದ, ಗಂಧರ್ವರಲ್ಲಿ ಚಿತ್ರರಥ, ಸಿದ್ಧರಲ್ಲಿ[2] ಕಪಿಲಮುನಿ.

1 ದೇವತೆಗಳಾಗಿದ್ದು ಮಂತ್ರಗಳನ್ನು ಕಂಡುಹಿಡಿದುದರಿಂದ ಋಷಿತ್ವವನ್ನು ಹೊಂದಿದವರು (ಶ್ರೀಶಂಕರ).

2 ಜನ್ಮದಿಂದಲೇ ಧರ್ಮಜ್ಞಾನವೈರಾಗ್ಯೈಶ್ವರ್ಯಗಳನ್ನು ಪಡೆದವರು (ಶ್ರೀಶಂಕರ).

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ॥ ೨೭ ॥**

ಅಶ್ವಾನಾಂ (ಕುದುರೆಗಳಲ್ಲಿ) ಅಮೃತೋದ್ಭವಂ (ಅಮೃತೋದ್ಭವವಾದ) ಉಚ್ಚೈಃಶ್ರವಸಂ (ಉಚ್ಚೈಃಶ್ರವಸ್ಸು ಎಂದು) ಗಜೇಂದ್ರಾಣಾಂ (ಉತ್ತಮ ಗಜಗಳಲ್ಲಿ) ಐರಾವತಂ (ಐರಾವತವೆಂದು) ನರಾಣಾಂ ಚ (ಮನುಷ್ಯರಲ್ಲಿ) ನರಾಧಿಪಂ (ರಾಜನೆಂದು) ಮಾಂ (ನನ್ನನ್ನು) ವಿದ್ಧಿ (ತಿಳಿ).

**೨೭.** ಕುದುರೆಗಳಲ್ಲಿ ಅಮೃತೋದ್ಭವವಾದ[1] ಉಚ್ಚೈಃಶ್ರವಸ್ಸು ಎಂದೂ, ಉತ್ತಮಗಜಗಳಲ್ಲಿ ಐರಾವತವೆಂದೂ, ಮನುಷ್ಯರಲ್ಲಿ ರಾಜನೆಂದೂ ನನ್ನನ್ನು ತಿಳಿ.

1 ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಕಡೆದಾಗ ಹುಟ್ಟಿದ್ದು.

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥**

ಅಹಂ (ನಾನು) ಆಯುಧಾನಾಂ (ಆಯುಧಗಳಲ್ಲಿ) ವಜ್ರಂ (ವಜ್ರವು) ಧೇನೂನಾಂ (ಗೋವುಗಳಲ್ಲಿ) ಕಾಮಧುಕ್ ಅಸ್ಮಿ (ಕಾಮಧೇನುವಾಗಿರುವೆನು) ಪ್ರಜನಃ (ಪ್ರಜೋತ್ಪತ್ತಿಗೆ ಕಾರಣನಾದ) ಕಂದರ್ಪಃ ಚ ಅಸ್ಮಿ (ಕಂದರ್ಪನಾಗಿರುವೆನು) ಸರ್ಪಾಣಾಂ (ಸರ್ಪಗಳಲ್ಲಿ) ವಾಸುಕಿಃ ಅಸ್ಮಿ (ವಾಸುಕಿಯಾಗಿದ್ದೇನೆ).

೨೮. ನಾನು ಆಯುಧಗಳಲ್ಲಿ ವಜ್ರಾಯುಧ, ಗೋವುಗಳಲ್ಲಿ ಕಾಮಧೇನು, ಪ್ರಜೋತ್ಪತ್ತಿಗೆ ಕಾರಣನಾದ ಕಂದರ್ಪ, ಸರ್ಪಗಳಲ್ಲಿ ವಾಸುಕಿ.

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ**
**ಸಂಯಮತಾಮಹಮ್ ॥ ೨೯ ॥**

ನಾಗಾನಾಂ (ನಾಗಗಳಲ್ಲಿ) ಅನಂತಃ ಅಸ್ಮಿ (ಅನಂತನಾಗಿರುವೆನು) ಅಹಂ (ನಾನು) ಯಾದಸಾಂ ಚ (ಜಲವಾಸಿಗಳಲ್ಲಿ) ವರುಣಃ (ವರುಣ) ಪಿತೄಣಾಂ (ಪಿತೃಗಳಲ್ಲಿ) ಅರ್ಯಮಾ (ಅರ್ಯಮ) ಅಹಂ (ನಾನು) ಸಂಯಮತಾಂ ಚ (ದಂಡಿಸುವವರಲ್ಲಿ) ಯಮಃ ಅಸ್ಮಿ (ಯಮನಾಗಿರುವೆನು).

೨೯. ನಾನು ನಾಗಗಳಲ್ಲಿ ಅನಂತ, ಜಲವಾಸಿಗಳಲ್ಲಿ ವರುಣ, ಪಿತೃಗಳಲ್ಲಿ ಅರ್ಯಮ ಮತ್ತು ದಂಡಿಸುವವರಲ್ಲಿ ಯಮ.

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ**
**ಪಕ್ಷಿಣಾಮ್ ॥ ೩೦ ॥**

ಅಹಂ (ನಾನು) ದೈತ್ಯಾನಾಂ ಚ (ದೈತ್ಯರಲ್ಲಿ) ಪ್ರಹ್ಲಾದಃ ಅಸ್ಮಿ (ಪ್ರಹ್ಲಾದನಾಗಿರುವೆನು) ಕಲಯತಾಂ (ಗಣನೆಮಾಡುವವರಲ್ಲಿ) ಕಾಲಃ (ಕಾಲ) ಮೃಗಾಣಾಂ ಚ (ಮೃಗಗಳಲ್ಲಿ) ಅಹಂ (ನಾನು) ಮೃಗೇಂದ್ರಃ (ಸಿಂಹ) ಪಕ್ಷಿಣಾಂ ಚ (ಪಕ್ಷಿಗಳಲ್ಲಿ) ವೈನತೇಯಃ (ಗರುಡ).

೩೦. ನಾನು ದೈತ್ಯರಲ್ಲಿ ಪ್ರಹ್ಲಾದ, ಗಣನೆಮಾಡುವವರಲ್ಲಿ ಕಾಲ,[1] ಮೃಗಗಳಲ್ಲಿ ಸಿಂಹ ಮತ್ತು ಪಕ್ಷಿಗಳಲ್ಲಿ ಗರುಡ.

[1] ಅನರ್ಥವನ್ನು ಉಂಟುಮಾಡುವವರ ಮಧ್ಯದಲ್ಲಿ ಮೃತ್ಯುದೇವತೆ ನಾನೇ (ಶ್ರೀ ರಾಮಾನುಜ).

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧ ॥**

ಅಹಂ (ನಾನು) ಪವತಾಂ (ಪಾವನಮಾಡುವವರಲ್ಲಿ) ಪವನಃ (ವಾಯು) ಶಸ್ತ್ರಭೃತಾಂ (ಶಸ್ತ್ರಧಾರಿಗಳಲ್ಲಿ) ರಾಮಃ (ರಾಮನು) ಅಸ್ಮಿ (ಆಗಿರುವೆನು) ಝಷಾಣಾಂ (ಜಲಜಂತುಗಳಲ್ಲಿ) ಮಕರಃ ಚ ಅಸ್ಮಿ (ಮಕರವಾಗಿದ್ದೇನೆ) ಸ್ರೋತಸಾಂ (ಹರಿಯುವ ನದಿಗಳಲ್ಲಿ) ಜಾಹ್ನವೀ ಅಸ್ಮಿ (ಗಂಗೆಯಾಗಿದ್ದೇನೆ).

೩೧. ನಾನು ಪಾವನಮಾಡುವವರಲ್ಲಿ[1] ವಾಯು, ಶಸ್ತ್ರಧಾರಿಗಳಲ್ಲಿ ಶ್ರೀರಾಮ, ಜಲಜಂತುಗಳಲ್ಲಿ ಮಕರ ಮತ್ತು ನದಿಗಳಲ್ಲಿ ಗಂಗೆ.

1 ಗಮನಶಕ್ತಿಯಿರುವವರಲ್ಲಿ (ಶ್ರೀರಾಮಾನುಜ).

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨ ॥**

ಅರ್ಜುನ (ಎಲೈ ಅರ್ಜುನನೆ) ಸರ್ಗಾಣಾಂ (ಸೃಷ್ಟಿಗಳ) ಆದಿಃ (ಆದಿ) ಮಧ್ಯಂ (ಸ್ಥಿತಿ) ಅಂತಃ ಚ (ಪ್ರಳಯ) ಅಹಂ ಏವ (ನಾನೇ) ವಿದ್ಯಾನಾಂ (ವಿದ್ಯೆಗಳಲ್ಲಿ) ಅಧ್ಯಾತ್ಮವಿದ್ಯಾ (ಅಧ್ಯಾತ್ಮವಿದ್ಯೆ) ಅಹಂ (ನಾನು) ಪ್ರವದತಾಂ (ಚರ್ಚೆಮಾಡುವವರಲ್ಲಿ) ವಾದಃ (ವಾದ).

೩೨. ಎಲೈ ಅರ್ಜುನ, ಸೃಷ್ಟಿಗಳ ಉತ್ಪತ್ತಿಸ್ಥಿತಿಲಯಗಳು ನಾನೇ; ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯೂ, ಚರ್ಚೆಮಾಡುವವರಲ್ಲಿ ವಾದವೂ[1] ನಾನು.

1 ತತ್ತ್ವನಿರ್ಣಯಕ್ಕೆ ಪ್ರವೃತ್ತವಾದ ಚರ್ಚೆ.

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥ ೩೩ ॥**

ಅಕ್ಷರಾಣಾಂ (ಅಕ್ಷರಗಳಲ್ಲಿ) ಅಕಾರಃ ಅಸ್ಮಿ (ಅಕಾರವಾಗಿರುವೆನು) ಸಾಮಾಸಿಕಸ್ಯ ಚ (ಸಮಾಸಸಮೂಹದಲ್ಲಿ) ದ್ವಂದ್ವಃ (ದ್ವಂದ್ವ) ಅಹಂ ಏವ (ನಾನೇ) ಅಕ್ಷಯಃ (ಅಕ್ಷಯವಾದ) ಕಾಲಃ (ಕಾಲ) ಅಹಂ (ನಾನು) ವಿಶ್ವತೋಮುಖಃ (ಸರ್ವತೋಮುಖನಾದ) ಧಾತಾ (ಧಾತೃ).

೩೩. ನಾನು ಅಕ್ಷರಗಳಲ್ಲಿ ಅಕಾರ, ಸಮಾಸಸಮೂಹದಲ್ಲಿ ದ್ವಂದ್ವ ಸಮಾಸ;[1] ನಾನೇ ಅಕ್ಷಯವಾದ ಕಾಲ,[2] ಸರ್ವತೋಮುಖನಾದ ಧಾತೃ [3]

1 ಸಮಾಸದ ಉಭಯಪದಗಳ ಅರ್ಥಗಳು ಪ್ರಧಾನವಾದುದರಿಂದ ಈ ಸಮಾಸವು ಉತ್ಕೃಷ್ಟವಾಗಿದೆ (ಶ್ರೀರಾಮಾನುಜ).

2 ಕ್ಷಣ ಮೊದಲಾದ ಹೆಸರುಳ್ಳ ಕಾಲ ಅಥವಾ ಕಾಲಕ್ಕೂ ಕಾಲನಾದ ಪರಮೇಶ್ವರ (ಶ್ರೀಶಂಕರ).

3 ಕರ್ಮಫಲಗಳನ್ನು ವಿಧಿಸುವವನು (ಶ್ರೀಶಂಕರ).

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ**
**ಧೃತಿಃ ಕ್ಷಮಾ ॥ ೩೪ ॥**

ಅಹಂ (ನಾನು) ಸರ್ವಹರಃ (ಸರ್ವಹರನಾದ) ಮೃತ್ಯುಃ ಚ (ಮೃತ್ಯು) ಭವಿಷ್ಯತಾಂ ಚ (ಮುಂದೆ ಬರುವ ವಸ್ತುಗಳಿಗೆ) ಉದ್ಭವಃ (ಉತ್ಪತ್ತಿ) ನಾರೀಣಾಂ (ನಾರಿಯರಲ್ಲಿ) ಕೀರ್ತಿಃ (ಕೀರ್ತಿ) ಶ್ರೀಃ (ಶ್ರೀ) ವಾಕ್ (ವಾಕ್ಕು) ಸ್ಮೃತಿಃ (ಸ್ಮೃತಿ) ಮೇಧಾ (ಮೇಧಸ್ಸು) ಧೃತಿಃ (ಧೃತಿ) ಕ್ಷಮಾ ಚ (ಮತ್ತು ಕ್ಷಮೆ).

**೩೪.** ನಾನು ಸರ್ವಹರನಾದ[1] ಮೃತ್ಯು ಮತ್ತು ಮುಂದೆ ಬರುವ ವಸ್ತುಗಳಿಗೆ ಉತ್ಪತ್ತಿ; ನಾರಿಯರಲ್ಲಿ ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇದಸ್ಸು, ಧೃತಿ ಮತ್ತು ಕ್ಷಮೆ ನಾನು.

[1] ಪ್ರಾಣವನ್ನು ಅಪಹರಿಸುವ ಮೃತ್ಯುವಿಗೆ ಸರ್ವಹರವೆಂದು ಹೆಸರು. ಅಥವಾ ಪ್ರಳಯದಲ್ಲಿ ಎಲ್ಲವನ್ನೂ ನಾಶಮಾಡುವುದರಿಂದ ಪರಮೇಶ್ವರನೇ ಸರ್ವಹರ (ಶ್ರೀ ಶಂಕರ).

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ**
**ಕುಸುಮಾಕರಃ ॥ ೩೫ ॥**

ಅಹಂ (ನಾನು) ಸಾಮ್ನಾಂ (ಸಾಮಗಳಲ್ಲಿ) ಬೃಹತ್‌ಸಾಮ (ಬೃಹತ್ಸಾಮ) ಛಂದಸಾಂ (ಛಂದಸ್ಸುಗಳಲ್ಲಿ) ಗಾಯತ್ರೀ (ಗಾಯತ್ರಿ) ಅಹಂ (ನಾನು) ಮಾಸಾನಾಂ (ಮಾಸಗಳಲ್ಲಿ) ಮಾರ್ಗಶೀರ್ಷಃ (ಮಾರ್ಗಶೀರ್ಷ) ಋತೂನಾಂ (ಋತುಗಳಲ್ಲಿ) ಕುಸುಮಾಕರಃ (ವಸಂತ).

**೩೫.** ನಾನು ಸಾಮಗಳಲ್ಲಿ ಬೃಹತ್ಸಾಮ, ಛಂದಸ್ಸುಗಳಲ್ಲಿ ಗಾಯತ್ರಿ,[1] ಮಾಸಗಳಲ್ಲಿ ಮಾರ್ಗಶೀರ್ಷ ಮತ್ತು ಋತುಗಳಲ್ಲಿ ವಸಂತ.

[1] ಗಾಯತ್ರ್ಯಾದಿ ಛಂದಸ್ಸುಗಳಿಂದ ಕೂಡಿದ ಋಕ್ಕುಗಳಲ್ಲಿ ಗಾಯತ್ರಿ ಎಂಬ ಋಕ್ಕು ನಾನು.

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥ ೩೬ ॥**

ಅಹಂ (ನಾನು) ಛಲಯತಾಂ (ಮೋಸಮಾಡುವವರಿಗೆ) ದ್ಯೂತಂ (ದ್ಯೂತವು) ತೇಜಸ್ವಿನಾಂ (ತೇಜಸ್ವಿಗಳ) ತೇಜಃ (ತೇಜಸ್ಸು) ಅಸ್ಮಿ (ಆಗಿದ್ದೇನೆ) ಅಹಂ (ನಾನು)

ಜಯಃ ಅಸ್ಮಿ (ಜಯವಾಗಿರುವೆನು) ವ್ಯವಸಾಯಃ ಅಸ್ಮಿ (ವ್ಯವಸಾಯವಾಗಿರುವೆನು) ಸತ್ತ್ವವತಾಂ (ಸಾತ್ತ್ವಿಕರ) ಸತ್ತ್ವಂ (ಸತ್ತ್ವ).

೩೬. ಮೋಸಮಾಡುವವರಲ್ಲಿ ದ್ಯೂತವೂ, ತೇಜಸ್ವಿಗಳ ತೇಜಸ್ಸೂ ನಾನು ಆಗಿರುವೆನು. ನಾನು (ಜಯಶಾಲಿಗಳಲ್ಲಿ) ಜಯ, (ವ್ಯವಸಾಯಿಗಳಲ್ಲಿ) ವ್ಯವಸಾಯ ಮತ್ತು ಸಾತ್ತ್ವಿಕರ ಸತ್ತ್ವ.

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ೩೭ ॥**

ಅಹಂ (ನಾನು) ವೃಷ್ಣೀನಾಂ (ಯಾದವರಲ್ಲಿ) ವಾಸುದೇವಃ ಅಸ್ಮಿ (ವಾಸುದೇವನಾಗಿರುವೆನು) ಪಾಂಡವಾನಾಂ (ಪಾಂಡವರಲ್ಲಿ) ಧನಂಜಯಃ (ಅರ್ಜುನ) ಮುನೀನಾಂ ಅಪಿ (ಮುನಿಗಳಲ್ಲಿ) ವ್ಯಾಸಃ (ವೇದವ್ಯಾಸ) ಕವೀನಾಂ (ಕವಿಗಳಲ್ಲಿ) ಉಶನಾ ಕವಿಃ (ಉಶನಕವಿ).

೩೭. ನಾನು ಯಾದವರಲ್ಲಿ ವಾಸುದೇವ,[1] ಪಾಂಡವರಲ್ಲಿ ಧನಂಜಯ, ಮುನಿಗಳಲ್ಲಿ[2] ವೇದವ್ಯಾಸ ಮತ್ತು ಕವಿಗಳಲ್ಲಿ[3] ಉಶನಕವಿ.[4]

[1] ವಸುದೇವನಿಗೆ ಪುತ್ರತ್ವದಿಂದ ಇರುವುದೇ ಇಲ್ಲಿ ವಿಭೂತಿ (ಶ್ರೀರಾಮಾನುಜ).
[2] ಮನನಶೀಲರೂ ಮತ್ತು ಸರ್ವಪದಾರ್ಥಗಳನ್ನು ತಿಳಿದವರೂ ಆದವರಲ್ಲಿ (ಶ್ರೀ ಶಂಕರ).
[3] ದೂರದರ್ಶಿಗಳಲ್ಲಿ.
[4] ಶುಕ್ರಾಚಾರ್ಯ (ಶ್ರೀಧರ).

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥ ೩೮॥**

ಅಹಂ (ನಾನು) ದಮಯತಾಂ (ದಂಡಿಸುವವರ) ದಂಡಃ ಅಸ್ಮಿ (ಶಿಕ್ಷೆಯಾಗಿರುವೆನು) ಜಿಗೀಷತಾಂ (ಜಯಾಭಿಲಾಷಿಗಳ) ನೀತಿಃ ಅಸ್ಮಿ (ನೀತಿಯಾಗಿರುವೆನು) ಗುಹ್ಯಾನಾಂ (ಗುಹ್ಯಗಳಲ್ಲಿ) ಮೌನಂ ಏವ ಚ (ಮೌನ) ಜ್ಞಾನವತಾಂ (ಜ್ಞಾನಿಗಳ) ಜ್ಞಾನಂ ಅಸ್ಮಿ (ಜ್ಞಾನವಾಗಿರುವೆನು).

೩೮. ನಾನು ದಂಡಿಸುವವರ[1] ಶಿಕ್ಷೆ, ಜಯಾಭಿಲಾಷಿಗಳ ನೀತಿ, ಗುಹ್ಯಗಳಲ್ಲಿ ಮೌನ ಮತ್ತು ಜ್ಞಾನಿಗಳ ಜ್ಞಾನ.

[1] ದಾಂತರಲ್ಲದವರನ್ನು ದಮನಮಾಡುವ ಕಾರಣನು ನಾನು (ಶ್ರೀಶಂಕರ).

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ ಸ್ಯಾನ್ಮಯಾ ಭೂತಂ ಚರಾಚರಮ್ ॥ ೩೯ ॥**

ಅರ್ಜುನ (ಎಲೈ ಅರ್ಜುನನೆ) ಯತ್ ಚ (ಯಾವುದು) ಸರ್ವಭೂತಾನಾಂ (ಸರ್ವಭೂತಗಳಿಗೆ) ಬೀಜಂ (ಕಾರಣವೋ), ತತ್ ಅಪಿ (ಅದೂ ಕೂಡ) ಅಹಂ (ನಾನು) ಮಯಾ ವಿನಾ (ನಾನಿಲ್ಲದೆ) ಯತ್ ಸ್ಯಾತ್ (ಯಾವುದು ಇರುವುದೋ) ತತ್ (ಅ) ಚರಾಚರಂ (ಚರಾಚರವಾದ) ಭೂತಂ (ಭೂತವು) ನ ಅಸ್ತಿ (ಇರುವುದಿಲ್ಲ).

೩೯. ಎಲೈ ಅರ್ಜುನ, ಸರ್ವಭೂತಗಳಿಗೆ ಯಾವುದು ಕಾರಣವೋ ಅದೂ ಕೂಡ ನಾನೇ. ನಾನಿಲ್ಲದೆ ಇರುವ ಯಾವ ಚರಾಚರವಾದ ಭೂತವೂ ಇಲ್ಲ.

['ನಾನು ಇಲ್ಲದಿದ್ದರೆ (ಎಲ್ಲವೂ) ನಿರಾಕೃತವಾಗಿ ಶೂನ್ಯವಾಗುವುದು. ಆದುದರಿಂದ ನಾನು ಎಲ್ಲಕ್ಕೂ ಆತ್ಮ'—ಶ್ರೀಶಂಕರ.]

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತಃ ವಿಭೂತೇರ್ವಿಸ್ತರೋ ಮಯಾ ॥ ೪೦ ॥**

ಪರಂತಪ (ಎಲೈ ಅರ್ಜುನನೆ) ಮಮ (ನನ್ನ) ದಿವ್ಯಾನಾಂ (ದಿವ್ಯವಾದ) ವಿಭೂತೀನಾಂ (ವಿಭೂತಿಗಳಿಗೆ) ಅಂತಃ (ಕೊನೆಯು) ನ ಅಸ್ತಿ (ಇಲ್ಲ) ಏಷಃ ತು ವಿಭೂತೇಃ (ಈ ವಿಭೂತಿಯ) ವಿಸ್ತರಃ (ವಿಸ್ತಾರವು) ಮಯಾ (ನನ್ನಿಂದ) ಉದ್ದೇಶತಃ (ಸಂಕ್ಷೇಪವಾಗಿ) ಪ್ರೋಕ್ತಃ (ಹೇಳಲ್ಪಟ್ಟಿತು).

೪೦. ಎಲೈ ಅರ್ಜುನ, ನನ್ನ ದಿವ್ಯವಿಭೂತಿಗಳಿಗೆ ಕೊನೆಯಿಲ್ಲ. ಈ ವಿಭೂತಿಯ ವಿಸ್ತಾರವನ್ನು ನಾನು ಸಂಕ್ಷೇಪದಿಂದ ಹೇಳಿದ್ದೇನೆ.

**ಯದ್ಯದ್ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಂಽಶಸಂಭವಮ್ ॥ ೪೧ ॥**

ವಿಭೂತಿಮತ್ (ವಿಭೂತಿಯುಕ್ತವು) ಶ್ರೀಮತ್ (ಶ್ರೀಯುಕ್ತವು) ಊರ್ಜಿತಂ ಏವ ವಾ (ಅಥವಾ ಉತ್ಸಾಹದಿಂದ ಕೂಡಿದ) ಯತ್ ಯತ್ (ಯಾವ ಯಾವ) ಸತ್ತ್ವಂ (ವಸ್ತು ಉಂಟೋ) ತತ್ ತತ್ ಏವ (ಅವೆಲ್ಲವನ್ನೂ) ಮಮ (ನನ್ನ) ತೇಜೋಂಶ-ಸಂಭವಂ (ತೇಜಸ್ಸಿನ ಒಂದು ಅಂಶದಿಂದ ಉಂಟಾದುದೆಂದು) ತ್ವಂ (ನೀನು) ಅವಗಚ್ಛ (ತಿಳಿ).

೪೧. ಯಾವ ಯಾವ ವಸ್ತು ವಿಭೂತಿಯುಳ್ಳದ್ದೋ, ಶ್ರೀಯುಕ್ತವೋ ಅಥವಾ ಉತ್ಸಾಹದಿಂದ ಕೂಡಿದೆಯೋ ಅವೆಲ್ಲವೂ ನನ್ನ ತೇಜಸ್ಸಿನ ಒಂದು ಅಂಶದಿಂದ ಉಂಟಾದುದೆಂದು ತಿಳಿದುಕೊ.

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨ ॥**

ಅಥವಾ (ಅಥವಾ) ಅರ್ಜುನ (ಎಲೈ ಅರ್ಜುನನೆ) ಏತೇನ ಬಹುನಾ ಜ್ಞಾತೇನ (ಇದನ್ನು ಅನೇಕವಿಧವಾಗಿ ಅರಿತುಕೊಂಡು) ತವ (ನಿನಗೆ) ಕಿಂ (ಏನು) ಅಹಂ (ನಾನು) ಕೃತ್ಸ್ನಂ (ಸಮಸ್ತ) ಜಗತ್ (ಜಗತ್ತನ್ನು) ಏಕಾಂಶೇನ (ಒಂದು ಅಂಶದಿಂದ) ವಿಷ್ಟಭ್ಯ ಸ್ಥಿತಃ (ಧರಿಸಿಕೊಂಡು ಇದ್ದೇನೆ).

೪೨. ಅಥವಾ ಎಲೈ ಅರ್ಜುನ, ಈ (ವಿಭೂತಿಯನ್ನು) ಅನೇಕ ವಿಧವಾಗಿ ಅರಿತುಕೊಂಡು ನಿನಗೇನು ಪ್ರಯೋಜನವಾಗುವುದು? ನಾನು ಈ ಜಗತ್ತೆಲ್ಲವನ್ನೂ ಒಂದೇ ಅಂಶದಿಂದ[1] ಧರಿಸಿಕೊಂಡಿದ್ದೇನೆ.

[1] ಸರ್ವಭೂತಸ್ವರೂಪವಾದ ಒಂದೇ ಪಾದದಿಂದ. ಆದುದರಿಂದಲೇ ಮಂತ್ರವರ್ಣವು "ಪಾದೋಽಸ್ಯ ವಿಶ್ವಾ ಭೂತಾನಿ" (ಋಗ್ವೇದ, ೮, ೪, ೧೭, ೩) ಎಂದು ಹೇಳಿದೆ (ಶ್ರೀಶಂಕರ).

**ಇತಿ ವಿಭೂತಿಯೋಗೋ ನಾಮ ದಶಮೋಽಧ್ಯಾಯಃ ।**

ವಿಭೂತಿಯೋಗವೆಂಬ ಹತ್ತನೆಯ ಅಧ್ಯಾಯವು ಮುಗಿಯಿತು.

# ಹನ್ನೊಂದನೆಯ ಅಧ್ಯಾಯ

## ವಿಶ್ವರೂಪದರ್ಶನ

### ಅರ್ಜುನ ಉವಾಚ

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ**
**ವಿಗತೋ ಮಮ ॥ ೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)—ಮದನುಗ್ರಹಾಯ (ನನ್ನ ಅನುಗ್ರಹಕ್ಕಾಗಿ) ಪರಮಂ ಗುಹ್ಯಂ (ಪರಮಗುಹ್ಯವಾದ) ಅಧ್ಯಾತ್ಮಸಂಜ್ಞಿತಂ (ಅಧ್ಯಾತ್ಮವೆಂಬ ಹೆಸರುಳ್ಳ) ಯತ್ ವಚಃ (ಯಾವ ಮಾತು) ತ್ವಯಾ (ನಿನ್ನಿಂದ) ಉಕ್ತಂ (ಹೇಳಲ್ಪಟ್ಟಿತೋ) ತೇನ (ಅದರಿಂದ) ಮಮ (ನನ್ನ) ಅಯಂ ಮೋಹಃ (ಈ ಮೋಹವು) ವಿಗತಃ (ನಾಶವಾಯಿತು).

### ಅರ್ಜುನನು ಹೇಳಿದನು

೧. ನನ್ನ ಅನುಗ್ರಹಕ್ಕಾಗಿ, ಪರಮಗುಹ್ಯವೂ ಅಧ್ಯಾತ್ಮವೆಂಬ[1] ಹೆಸರುಳ್ಳದ್ದೂ ಆದ ಯಾವ ಮಾತನ್ನು ಹೇಳಿದೆಯೋ ಅದರಿಂದ ನನ್ನ ಈ ಮೋಹವು[2] ನಾಶವಾಯಿತು.

[1] ಆತ್ಮಾನಾತ್ಮಗಳನ್ನು ವಿಂಗಡಿಸುವ.
[2] ಅವಿವೇಕಬುದ್ಧಿ.

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨ ॥**

ಕಮಲಪತ್ರಾಕ್ಷ (ಎಲೈ ಕಮಲಪತ್ರಾಕ್ಷನೆ) ಭೂತಾನಾಂ (ಭೂತಗಳ) ಭವಾಪ್ಯಯೌ (ಉತ್ಪತ್ತಿಲಯಗಳು) ಮಯಾ (ನನ್ನಿಂದ) ವಿಸ್ತರಶಃ ಹಿ (ವಿಸ್ತಾರವಾಗಿ) ಶ್ರುತೌ (ಕೇಳಲ್ಪಟ್ಟುವು) ಅವ್ಯಯಂ (ಅವ್ಯಯವಾದ) ಮಾಹಾತ್ಮ್ಯಂ ಅಪಿ ಚ (ಮಾಹಾತ್ಮ್ಯವೂ ಕೂಡ) [ಶ್ರುತಂ (ಕೇಳಲ್ಪಟ್ಟಿತು)].

೨. ಎಲೈ ಕಮಲಪತ್ರಾಕ್ಷನೆ, ಪ್ರಾಣಿಗಳ ಉತ್ಪತ್ತಿಲಯಗಳನ್ನೂ ಮತ್ತು (ನಿನ್ನ) ಅವ್ಯಯವಾದ ಮಾಹಾತ್ಮ್ಯೆಯನ್ನೂ ಕೂಡ ವಿಸ್ತಾರವಾಗಿ ಕೇಳಿದೆನು.

**ಏವಮೇತದ್ಯಥಾತ್ಥ ತ್ವಂ ಆತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩ ॥**

ಪರಮೇಶ್ವರ (ಎಲೈ ಪರಮೇಶ್ವರನೆ) ತ್ವಂ (ನೀನು) ಆತ್ಮಾನಂ (ನಿನ್ನನ್ನು) ಯಥಾ (ಯಾವ ಪ್ರಕಾರವಾಗಿ) ಆತ್ಥ (ಹೇಳಿರುವೆಯೋ) ಏತತ್ (ಇದು) ಏವಂ (ಹಾಗೆಯೇ ಸರಿ) [ತಥಾಪಿ (ಹಾಗಾದರೂ)] ಪುರುಷೋತ್ತಮ (ಎಲೈ ಪುರುಷೋತ್ತಮನೆ) ತೇ (ನಿನ್ನ) ಐಶ್ವರಂ ರೂಪಂ (ಐಶ್ವರರೂಪವನ್ನು) ದ್ರಷ್ಟುಂ (ನೋಡಲು) ಇಚ್ಛಾಮಿ (ಇಚ್ಛಿಸುತ್ತೇನೆ).

**೩.** ಎಲೈ ಪರಮೇಶ್ವರ, ನೀನು ನಿನ್ನನ್ನು ಯಾವ ಪ್ರಕಾರವಾಗಿ ಹೇಳಿರುವೆಯೋ ಅದು ಹಾಗೆಯೇ ಸರಿ. (ಹಾಗಾದರೂ) ಎಲೈ ಪುರುಷೋತ್ತಮ, ನಿನ್ನ ಐಶ್ವರರೂಪವನ್ನು[1] ನೋಡಲು ಇಚ್ಛಿಸುತ್ತೇನೆ.

[1] ವೈಷ್ಣವರೂಪವನ್ನು (ಶ್ರೀಶಂಕರ).

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥ ೪ ॥**

ಪ್ರಭೋ (ಎಲೈ ಪ್ರಭುವೆ) ತತ್ (ಅದನ್ನು) ಮಯಾ (ನನ್ನಿಂದ) ದ್ರಷ್ಟುಂ (ನೋಡಲು) ಶಕ್ಯಂ ಇತಿ (ಸಾಧ್ಯವೆಂದು) ಮನ್ಯಸೇ ಯದಿ (ತಿಳಿಯುವೆಯಾದರೆ) ತತಃ (ಆ ಕಾರಣದಿಂದ) ಯೋಗೇಶ್ವರ (ಎಲೈ ಯೋಗೇಶ್ವರನೆ) ತ್ವಂ (ನೀನು) ಮೇ (ನನಗೆ) ಅವ್ಯಯಂ (ಅಕ್ಷಯವಾದ) ಆತ್ಮಾನಂ (ನಿನ್ನನ್ನು) ದರ್ಶಯ (ತೋರಿಸು).

**೪.** ಎಲೈ ಪ್ರಭು, ಅದನ್ನು ನೋಡಲು ನನ್ನಿಂದ ಸಾಧ್ಯವೆಂದು ನೀನು ತಿಳಿಯುವೆಯಾದರೆ, ಎಲೈ ಯೋಗೇಶ್ವರ, ಅಕ್ಷಯವಾದ ನಿನ್ನ ರೂಪವನ್ನು ನನಗೆ ತೋರಿಸು.

ಶ್ರೀಭಗವಾನ್ ಉವಾಚ

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಪಾರ್ಥ (ಎಲೈ ಅರ್ಜುನನೆ) ಮೇ (ನನ್ನ) ಶತಶಃ (ನೂರಾರು ಬಗೆಯಾದ) ಅಥ (ಹಾಗೆಯೇ) ಸಹಸ್ರಶಃ (ಸಾವಿರಾರು ಬಗೆಯಾದ) ನಾನಾವಿಧಾನಿ (ನಾನಾವಿಧವಾದ) ದಿವ್ಯಾನಿ (ದಿವ್ಯವಾದ) ನಾನಾವರ್ಣಾಕೃತೀನಿ ಚ (ನಾನಾ ವರ್ಣಗಳುಳ್ಳ ಮತ್ತು ಆಕೃತಿಗಳುಳ್ಳ) ರೂಪಾಣಿ (ರೂಪಗಳನ್ನು) ಪಶ್ಯ (ನೋಡು).

ಶ್ರೀಕೃಷ್ಣನು ಹೇಳಿದನು

೫. ಎಲೈ ಅರ್ಜುನ, ನಾನಾವಿಧವಾದ ದಿವ್ಯವಾದ ಅನೇಕ ವರ್ಣ ಮತ್ತು ಆಕೃತಿಗಳುಳ್ಳ ನನ್ನ ಅಸಂಖ್ಯಾತ ರೂಪಗಳನ್ನು ನೋಡು.

**ಪಶ್ಯಾದಿತ್ಯಾನ್ ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬ ॥**

ಭಾರತ (ಎಲೈ ಅರ್ಜುನನೆ) ಆದಿತ್ಯಾನ್ (ಆದಿತ್ಯರನ್ನೂ) ವಸೂನ್ (ವಸುಗಳನ್ನೂ) ರುದ್ರಾನ್ (ರುದ್ರರನ್ನೂ) ಅಶ್ವಿನೌ (ಅಶ್ವಿನೀದೇವತೆಗಳನ್ನೂ) ಮರುತಃ (ಮರುದ್ಗಣಗಳನ್ನೂ) ತಥಾ (ಹಾಗೆಯೇ) ಬಹೂನಿ (ಅನೇಕ) ಅದೃಷ್ಟಪೂರ್ವಾಣಿ (ಹಿಂದೆ ಎಂದೂ ನೋಡದಿರುವ) ಆಶ್ಚರ್ಯಾಣಿ (ಆಶ್ಚರ್ಯಗಳನ್ನು) ಪಶ್ಯ (ನೋಡು).

೬. ಎಲೈ ಅರ್ಜುನ, ಆದಿತ್ಯರನ್ನೂ ವಸುಗಳನ್ನೂ ರುದ್ರರನ್ನೂ ಅಶ್ವಿನೀ ದೇವತೆಗಳನ್ನೂ ಮರುದ್ಗಣಗಳನ್ನೂ ಮತ್ತು ಹಿಂದೆ ಎಂದೂ ನೋಡದಿರುವ ಅನೇಕ ಆಶ್ಚರ್ಯಗಳನ್ನೂ ನೋಡು.[1]

[1] ನನ್ನ ಒಂದೇ ರೂಪದಲ್ಲಿ ನೋಡು (ಶ್ರೀರಾಮಾನುಜ).

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭ ॥**

ಗುಡಾಕೇಶ (ಎಲೈ ಅರ್ಜುನನೆ) ಇಹ (ಇಲ್ಲಿ) ಮಮ (ನನ್ನ) ದೇಹೇ (ದೇಹದಲ್ಲಿ) ಏಕಸ್ಥಂ (ಒಂದೇ ಕಡೆಯಲ್ಲಿ) ಕೃತ್ಸ್ನಂ (ಇಡೀ) ಸಚರಾಚರಂ (ಚರಾಚರವಾದ) ಜಗತ್ (ಜಗತ್ತನ್ನು) ಅನ್ಯತ್ ಚ (ಮತ್ತು ಬೇರೆ) ಯತ್ (ಯಾವುದನ್ನು) ದ್ರಷ್ಟುಂ (ನೋಡಲು) ಇಚ್ಛಸಿ (ಇಚ್ಛಿಸುತ್ತೀಯೋ) [ಅದನ್ನು] ಅದ್ಯ (ಈಗ) ಪಶ್ಯ (ನೋಡು).

೭. ಎಲೈ ಅರ್ಜುನ, ಇಲ್ಲಿ ನನ್ನ ದೇಹದ ಒಂದೇ ಕಡೆಯಲ್ಲಿ ಚರಾಚರವಾದ ಇಡೀ ಜಗತ್ತನ್ನು ಈಗ ನೋಡು; ಮತ್ತು ಬೇರೆ ಯಾವುದನ್ನು[1] ನೋಡಲು ಇಚ್ಛಿಸುತ್ತೀಯೋ (ಅದನ್ನೂ ಕೂಡ ನೋಡು).

[1] 'ನಾವೇ ಒಂದು ವೇಳೆ ಜಯಿಸುತ್ತೇವೋ' (೨, ೬) ಎಂಬ ಸಂದೇಹವನ್ನು ಕುರಿತು (ಶ್ರೀಶಂಕರ).

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥ ೮ ॥**

ತು (ಆದರೆ) ಸ್ವಚಕ್ಷುಷಾ ಏವ (ನಿನ್ನ ಕಣ್ಣಿನಿಂದಲೇ) ಮಾಂ (ನನ್ನನ್ನು) ದ್ರಷ್ಟುಂ (ನೋಡಲು) ನ ಶಕ್ಯಸೇ (ಶಕ್ತನಾಗಲಾರೆ) ತೇ (ನಿನಗೆ) ದಿವ್ಯಂ (ದಿವ್ಯವಾದ) ಚಕ್ಷುಃ (ಚಕ್ಷುಸ್ಸನ್ನು) ದದಾಮಿ (ಕೊಡುವೆನು) ಮೇ (ನನ್ನ) ಐಶ್ವರಂ ಯೋಗಂ (ಐಶ್ವರಯೋಗವನ್ನು) ಪಶ್ಯ (ನೋಡು).

೮. ಆದರೆ ನಿನ್ನ ಕಣ್ಣಿನಿಂದಲೇ ನನ್ನನ್ನು ನೋಡಲು ಶಕ್ತನಾಗಲಾರೆ; ನಿನಗೆ ದಿವ್ಯವಾದ ಚಕ್ಷುಸ್ಸನ್ನು ಕೊಡುವೆನು. ನನ್ನ ಐಶ್ವರಯೋಗವನ್ನು ನೋಡು.

ಸಂಜಯ ಉವಾಚ

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥ ೯ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)—ರಾಜನ್ (ಎಲೈ ರಾಜನೆ) ಮಹಾಯೋಗೇಶ್ವರಃ (ಮಹಾಯೋಗೇಶ್ವರನಾದ) ಹರಿಃ (ಹರಿಯು) ಏವಂ (ಹೀಗೆ) ಉಕ್ತ್ವಾ (ಹೇಳಿ) ತತಃ (ಅನಂತರ) ಐಶ್ವರಂ (ಈಶ್ವರೀಯವಾದ) ಪರಮಂ ರೂಪಂ (ವಿಶ್ವರೂಪವನ್ನು) ಪಾರ್ಥಾಯ (ಅರ್ಜುನನಿಗೆ) ದರ್ಶಯಾಮಾಸ (ತೋರಿಸಿದನು).

ಸಂಜಯನು ಹೇಳಿದನು

೯. ಎಲೈ ರಾಜನೆ, ಮಹಾಯೋಗೇಶ್ವರನಾದ ಹರಿಯು[1] ಹೀಗೆ ಹೇಳಿ, ಅನಂತರ ಅರ್ಜುನನಿಗೆ ಈಶ್ವರೀಯವಾದ (ತನ್ನ) ವಿಶ್ವರೂಪವನ್ನು ತೋರಿಸಿದನು.

[1] ನಾರಾಯಣನು (ಶ್ರೀಶಂಕರ).

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦ ॥**

ಅನೇಕ-ವಕ್ತ್ರ-ನಯನಂ (ಅನೇಕ ಮುಖಗಳೂ ಕಣ್ಣುಗಳೂ ಉಳ್ಳದ್ದಾಗಿಯೂ) ಅನೇಕಾದ್ಭುತ-ದರ್ಶನಂ (ಅನೇಕ ಅದ್ಭುತದರ್ಶನಗಳುಳ್ಳದ್ದಾಗಿಯೂ) ಅನೇಕ-ದಿವ್ಯಾಭರಣಂ (ಅನೇಕ ದಿವ್ಯಾಭರಣಗಳುಳ್ಳದ್ದಾಗಿಯೂ) ದಿವ್ಯಾನೇಕೋದ್ಯತಾಯುಧಂ (ಎತ್ತಿ ಹಿಡಿಯಲ್ಪಟ್ಟ ಅನೇಕ ದಿವ್ಯಾಯುಧಗಳುಳ್ಳದ್ದಾಗಿಯೂ) [ಇರುವ ರೂಪವನ್ನು ತೋರಿಸಿದನು].

೧೦. ಅನೇಕ ಮುಖಗಳೂ ಕಣ್ಣುಗಳೂ ಇರುವ, ಅನೇಕ ಅದ್ಭುತ ದರ್ಶನಗಳಿರುವ, ದಿವ್ಯಾಭರಣಗಳಿಂದ ಅಲಂಕೃತವಾದ ಮತ್ತು ಎತ್ತಿ ಹಿಡಿಯಲ್ಪಟ್ಟ ಅನೇಕ ದಿವ್ಯಾಯುಧಗಳಿಂದ ಕೂಡಿದ (ರೂಪವನ್ನು ತೋರಿಸಿದನು).

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ॥೧೧॥**

ದಿವ್ಯಮಾಲ್ಯಾಂಬರಧರಂ (ದಿವ್ಯವಾದ ಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿರುವ) ದಿವ್ಯಗಂಧಾನುಲೇಪನಂ (ದಿವ್ಯಗಂಧದಿಂದ ಅನುಲಿಪ್ತನಾದ) ಸರ್ವಾಶ್ಚರ್ಯಮಯಂ (ಸರ್ವಾಶ್ಚರ್ಯಮಯನಾದ) ಅನಂತಂ (ಅನಂತನಾದ) ವಿಶ್ವತೋಮುಖಂ (ವಿಶ್ವತೋಮುಖನಾದ) ದೇವಂ (ದೇವನನ್ನು) [ತೋರಿಸಿದನು].

೧೧. ದಿವ್ಯವಾದ ಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿರುವ, ದಿವ್ಯಗಂಧದಿಂದ ಅನುಲಿಪ್ತನಾದ, ಸರ್ವಾಶ್ಚರ್ಯಮಯನೂ ಅನಂತನೂ ವಿಶ್ವತೋಮುಖನೂ[1] ಆದ ದೇವನನ್ನು (ತೋರಿಸಿದನು).

[1] ಸರ್ವಪ್ರಾಣಿಗಳಿಗೂ ಆತ್ಮನಾದುದರಿಂದ ಸರ್ವತೋಮುಖನು, ಎಂದರೆ ಎಲ್ಲೆಲ್ಲಿಯೂ ಮುಖವುಳ್ಳವನು (ಶ್ರೀಶಂಕರ).

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾತ್ ಭಾಸಸ್ತಸ್ಯ ಮಹಾತ್ಮನಃ ॥ ೧೨ ॥**

ದಿವಿ (ಆಕಾಶದಲ್ಲಿ) ಸೂರ್ಯಸಹಸ್ರಸ್ಯ (ಸಹಸ್ರಸೂರ್ಯರ) ಭಾಃ (ಪ್ರಭೆಯು) ಯುಗಪತ್ (ಒಂದೇ ಸಲ) ಉತ್ಥಿತಾ ಭವೇತ್ ಯದಿ (ಉಂಟಾದರೆ) ಸಾ (ಅದು) ತಸ್ಯ (ಆ) ಮಹಾತ್ಮನಃ (ಮಹಾತ್ಮನ) ಭಾಸಃ (ಪ್ರಭೆಯು) ಸದೃಶೀ ಸ್ಯಾತ್ (ಸದೃಶವಾದೀತು).

೧೨. ಸಹಸ್ರಸೂರ್ಯರ ಪ್ರಭೆಯು ಒಂದೇ ಸಲ ಆಕಾಶದಲ್ಲಿ ಉಂಟಾದರೆ, ಅದು ಆ ಮಹಾತ್ಮನ ಪ್ರಭೆಗೆ ಸದೃಶವಾದೀತು.

**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩ ॥**

ತದಾ (ಆಗ) ಪಾಂಡವಃ (ಅರ್ಜುನನು) ತತ್ರ (ಅಲ್ಲಿ) ದೇವದೇವಸ್ಯ (ದೇವದೇವನ) ಶರೀರೇ (ಶರೀರದಲ್ಲಿ) ಅನೇಕಧಾ (ಅನೇಕ ಪ್ರಕಾರವಾಗಿ) ಪ್ರವಿಭಕ್ತಂ (ವಿಭಾಗವಾಗಿರುವ) ಕೃತ್ಸ್ನಂ ಜಗತ್ (ಜಗತ್ತೆಲ್ಲವನ್ನೂ) ಏಕಸ್ಥಂ (ಏಕದೇಶದಲ್ಲಿರುವುದನ್ನಾಗಿ) ಅಪಶ್ಯತ್ (ನೋಡಿದನು).

೧೩. ಆಗ ಅನೇಕಪ್ರಕಾರವಾಗಿ ವಿಭಾಗವಾಗಿರುವ[1] ಜಗತ್ತೆಲ್ಲವೂ ದೇವದೇವನ ಆ ಶರೀರದಲ್ಲಿ ಏಕದೇಶದಲ್ಲಿರುವುದನ್ನು ಅರ್ಜುನನು ನೋಡಿದನು.

[1] ದೇವತೆಗಳು ಪಿತೃಗಳು ಮನುಷ್ಯರು ಮುಂತಾದ ಭೇದಗಳಿಂದ ವಿಭಾಗವಾಗಿರುವ.

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥**

ತತಃ (ಅನಂತರ) ವಿಸ್ಮಯಾವಿಷ್ಟಃ (ಆಶ್ಚರ್ಯಭರಿತನಾದ) ಹೃಷ್ಟರೋಮಾ (ಹರ್ಷದಿಂದ ರೋಮಾಂಚವುಳ್ಳವನಾದ) ಸಃ ಧನಂಜಯಃ (ಆ ಅರ್ಜುನನು) ದೇವಂ (ದೇವನನ್ನು) ಶಿರಸಾ (ಶಿರಸ್ಸಿನಿಂದ) ಪ್ರಣಮ್ಯ (ನಮಸ್ಕರಿಸಿ) ಕೃತಾಂಜಲಿಃ (ಕೈಜೋಡಿಸಿದವನಾಗಿ) ಅಭಾಷತ (ಹೇಳಿದನು).

**೧೪.** ಅನಂತರ ಆಶ್ಚರ್ಯಭರಿತನೂ ಹರ್ಷದಿಂದ ರೋಮಾಂಚನವುಳ್ಳವನೂ ಆದ ಅರ್ಜುನನು ದೇವನಾದ (ಶ್ರೀಕೃಷ್ಣನಿಗೆ) ಶಿರಸಾ ನಮಸ್ಕರಿಸಿ ಕೈಜೋಡಿಸಿಕೊಂಡು (ಹೀಗೆ) ಹೇಳಿದನು.

ಅರ್ಜುನ ಉವಾಚ

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಂ**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ದೇವ (ಎಲೈ ದೇವನೆ) ತವ (ನಿನ್ನ) ದೇಹೇ (ದೇಹದಲ್ಲಿ) ಸರ್ವಾನ್ ದೇವಾನ್ (ಎಲ್ಲಾ ದೇವತೆಗಳನ್ನೂ) ತಥಾ (ಹಾಗೆಯೇ) ಭೂತವಿಶೇಷಸಂಘಾನ್ (ವಿಶೇಷಾಕಾರಗಳುಳ್ಳ ಪ್ರಾಣಿಗಳ ಗುಂಪುಗಳನ್ನು) ಕಮಲಾಸನಸ್ಥಂ (ಕಮಲಾಸನನಾದ) ಈಶಂ (ಈಶ್ವರನಾದ) ಬ್ರಹ್ಮಾಣಂ (ಬ್ರಹ್ಮನನ್ನು) ಸರ್ವಾನ್ ಋಷೀನ್ ಚ (ಎಲ್ಲಾ ಋಷಿಗಳನ್ನು) ದಿವ್ಯಾನ್ ಉರಗಾನ್ ಚ (ದಿವ್ಯವಾದ ಉರಗಗಳನ್ನು) ಪಶ್ಯಾಮಿ (ನೋಡುತ್ತಿರುವೆನು).

ಅರ್ಜುನನು ಹೇಳಿದನು

**೧೫.** ಎಲೈ ದೇವ, ಎಲ್ಲಾ ದೇವತೆಗಳನ್ನೂ ವಿಶೇಷಾಕಾರಗಳುಳ್ಳ ಪ್ರಾಣಿಗಳ ಗುಂಪುಗಳನ್ನೂ ಕಮಲಾಸನನೂ ಈಶ್ವರನೂ ಆದ ಬ್ರಹ್ಮನನ್ನೂ[1] ಎಲ್ಲಾ ಋಷಿಗಳನ್ನೂ ದಿವ್ಯವಾದ ಉರಗಗಳನ್ನೂ[2] ನಿನ್ನ ದೇಹದಲ್ಲಿ ನೋಡುತ್ತಿದ್ದೇನೆ.

1 ಪ್ರಜೆಗಳಿಗೆ ಒಡೆಯನಾದ ಚತುರ್ಮುಖಬ್ರಹ್ಮ.
2 ವಾಸುಕಿ ಮೊದಲಾದವರು.

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾ ಸರ್ವತೋಽನಂತರೂಪಮ್ ।**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬ ॥**

ವಿಶ್ವೇಶ್ವರ (ಎಲೈ ವಿಶ್ವೇಶ್ವರನೆ) ಅನೇಕ-ಬಾಹೂದರ-ವಕ್ತ್ರ-ನೇತ್ರಂ (ಅನೇಕ ಬಾಹುಗಳು ಉದರಗಳು ಮುಖಗಳು ನೇತ್ರಗಳು-ಇವುಗಳು ಉಳ್ಳವನನ್ನಾಗಿಯೂ) ಅನಂತರೂಪಂ (ಅನಂತರೂಪನನ್ನಾಗಿಯೂ) ತ್ವಾ(ನಿನ್ನನ್ನು) ಸರ್ವತಃ (ಎಲ್ಲೆಲ್ಲಿಯೂ) ಪಶ್ಯಾಮಿ (ನೋಡುತ್ತಿದ್ದೇನೆ) ಪುನಃ (ಪುನಃ) ವಿಶ್ವರೂಪ (ಎಲೈ ವಿಶ್ವರೂಪನೆ) ತವ (ನಿನ್ನ) ಅಂತಂ (ಅಂತವನ್ನು) ನ ಪಶ್ಯಾಮಿ (ಕಾಣಲಾರೆ) ಮಧ್ಯಂ ನ (ಮಧ್ಯವನ್ನು ಕಾಣಲಾರೆ) ಆದಿಂ ನ (ಆದಿಯನ್ನು ಕಾಣಲಾರೆ).

೧೬. ಎಲೈ ವಿಶ್ವೇಶ್ವರ, ಅನೇಕ ಬಾಹುಗಳು ಉದರಗಳು ಮುಖಗಳು ನೇತ್ರಗಳು— ಇವುಗಳು ಉಳ್ಳವನೂ, ಅನಂತರೂಪಗಳುಳ್ಳವನೂ ಆದ ನಿನ್ನನ್ನು ಎಲ್ಲೆಲ್ಲಿಯೂ ನೋಡುತ್ತಿದ್ದೇನೆ; ಪುನಃ, ಎಲೈ ವಿಶ್ವರೂಪ, ನಿನ್ನ ಆದಿಮಧ್ಯಾಂತಗಳನ್ನು ಕಾಣಲಾರೆನು.

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋದೀಪ್ತಿಮಂತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ-**
**ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥ ೧೭ ॥**

ಕಿರೀಟಿನಂ (ಕಿರೀಟವನ್ನು ಧರಿಸಿರುವವನನ್ನಾಗಿ) ಗದಿನಂ (ಗದೆಯನ್ನು ಹಿಡಿದಿರುವವನನ್ನಾಗಿ) ಚಕ್ರಿಣಂ ಚ (ಚಕ್ರವನ್ನು ಧರಿಸಿರುವವನನ್ನಾಗಿ) ತೇಜೋರಾಶಿಂ (ತೇಜೋರಾಶಿಯನ್ನಾಗಿ) ಸರ್ವತೋದೀಪ್ತಿಮಂತಂ (ಎಲ್ಲೆಲ್ಲಿಯೂ ಪ್ರಕಾಶವುಳ್ಳವನನ್ನಾಗಿ) ಸಮಂತಾತ್ (ಸುತ್ತಲೂ) ದುರ್ನಿರೀಕ್ಷ್ಯಂ (ನೋಡಲು ಅಸಾಧ್ಯನನ್ನಾಗಿ) ದೀಪ್ತಾನಲಾರ್ಕದ್ಯುತಿಂ (ಪ್ರಕಾಶಿಸುತ್ತಿರುವ ಅಗ್ನಿಸೂರ್ಯರಂತೆ ಪ್ರಭೆಯುಳ್ಳವನನ್ನಾಗಿ) ಅಪ್ರಮೇಯಂ (ಅಪ್ರಮೇಯನನ್ನಾಗಿ) ತ್ವಾಂ (ನಿನ್ನನ್ನು) ಪಶ್ಯಾಮಿ (ನೋಡುತ್ತಿದ್ದೇನೆ).

೧೭. ಕಿರೀಟ ಗದೆ ಚಕ್ರ — ಇವುಗಳನ್ನು ಧರಿಸಿರುವವನೂ, ತೇಜೋರಾಶಿಯೂ, ಎಲ್ಲೆಲ್ಲಿಯೂ ಪ್ರಕಾಶವುಳ್ಳವನೂ, ಸುತ್ತಲೂ ನೋಡಲಸಾಧ್ಯನೂ, ಪ್ರಕಾಶಿಸುತ್ತಿರುವ ಅಗ್ನಿಸೂರ್ಯರಂತೆ ಪ್ರಭೆಯುಳ್ಳವನೂ, ಅಪ್ರಮೇಯನೂ ಆದ ನಿನ್ನನ್ನು ನೋಡುತ್ತಿದ್ದೇನೆ.

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥**

ತ್ವಂ (ನೀನು) ವೇದಿತವ್ಯಂ (ತಿಳಿಯಲ್ಪಡಬೇಕಾಗಿರುವ) ಪರಮಂ ಅಕ್ಷರಂ (ಪರಮವಾದ ಅಕ್ಷರ) ತ್ವಂ (ನೀನು) ಅಸ್ಯ ವಿಶ್ವಸ್ಯ (ಈ ವಿಶ್ವದ) ಪರಂ ನಿಧಾನಂ (ಶ್ರೇಷ್ಠವಾದ ಆಧಾರ) ತ್ವಂ (ನೀನು) ಅವ್ಯಯಃ (ಅವ್ಯಯನು) ಶಾಶ್ವತಧರ್ಮ-ಗೋಪ್ತಾ (ಶಾಶ್ವತಧರ್ಮವನ್ನು ಕಾಪಾಡುವವನು) ತ್ವಂ (ನೀನು) ಸನಾತನಃ (ಸನಾತನನಾದ) ಪುರುಷಃ (ಪುರುಷನು) [ಎಂದು] ಮೇ ಮತಃ (ನನ್ನ ಮತ).

**೧೮.** (ಮುಮುಕ್ಷುಗಳು) ತಿಳಿಯಬೇಕಾಗಿರುವ ಪರಮವಾದ ಅಕ್ಷರ ನೀನು; ಈ ವಿಶ್ವಕ್ಕೆ ಶ್ರೇಷ್ಠವಾದ ಆಧಾರ ನೀನು; ನೀನು ಅವ್ಯಯನು ಮತ್ತು ಶಾಶ್ವತಧರ್ಮವನ್ನು ಕಾಪಾಡುವವನು; ಸನಾತನನಾದ ಪುರುಷನೇ ನೀನು ಎಂದು ನನ್ನ ಮತ.

**ಅನಾದಿಮಧ್ಯಾಂತಮನಂತವೀರ್ಯ-**
**ಮನಂತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪಂತಮ್ ॥ ೧೯ ॥**

ಅನಾದಿಮಧ್ಯಾಂತಂ (ಆದಿಮಧ್ಯಾಂತರಹಿತನನ್ನಾಗಿ) ಅನಂತವೀರ್ಯಂ (ಅನಂತವೀರ್ಯನನ್ನಾಗಿ) ಅನಂತಬಾಹುಂ (ಅನಂತಬಾಹುವನ್ನಾಗಿ) ಶಶಿಸೂರ್ಯ-ನೇತ್ರಂ (ಸೂರ್ಯಚಂದ್ರರೇ ನೇತ್ರಗಳಾಗಿ ಉಳ್ಳವನನ್ನಾಗಿ) ದೀಪ್ತಹುತಾಶವಕ್ತ್ರಂ (ಪ್ರದೀಪ್ತಾಗ್ನಿಯಂತೆ ಬಾಯಿಯುಳ್ಳವನನ್ನಾಗಿ) ಸ್ವತೇಜಸಾ (ತನ್ನ ತೇಜಸ್ಸಿನಿಂದ) ಇದಂ ವಿಶ್ವಂ (ಈ ವಿಶ್ವವನ್ನು) ತಪಂತಂ (ತಪಿಸುತ್ತಿರುವವನನ್ನಾಗಿ) ತ್ವಾಂ (ನಿನ್ನನ್ನು) ಪಶ್ಯಾಮಿ (ನೋಡುತ್ತಿದ್ದೇನೆ).

**೧೯.** ಆದಿಮಧ್ಯಾಂತರಹಿತನೂ ಅನಂತವೀರ್ಯನೂ ಅನಂತಬಾಹುಗಳುಳ್ಳವನೂ ಸೂರ್ಯಚಂದ್ರರೇ[1] ನೇತ್ರಗಳಾಗಿ ಉಳ್ಳವನೂ ಪ್ರದೀಪ್ತವಾದ ಅಗ್ನಿಯಂತೆ[2] ಬಾಯಿಯುಳ್ಳವನೂ ತನ್ನ ತೇಜಸ್ಸಿನಿಂದ ಈ ವಿಶ್ವವನ್ನು ತಪಿಸುತ್ತಿರುವವನೂ ಆದ ನಿನ್ನನ್ನು ನೋಡುತ್ತಿದ್ದೇನೆ.

1 ಸೂರ್ಯಚಂದ್ರರಂತೆ ಪ್ರತಾಪ-ಪ್ರಸಾದಗಳಿಂದ ಕೂಡಿದ ಸಮಸ್ತನೇತ್ರಗಳುಳ್ಳವನು (ಶ್ರೀರಾಮಾನುಜ).

[2] ಪ್ರಜ್ವಲಿಸುತ್ತಿರುವ ಪ್ರಳಯಾಗ್ನಿಯಂತೆ ಸಂಹಾರಕ್ಕೆ ಅನುಗುಣವಾದ ಬಾಯಿಯುಳ್ಳವನು (ಶ್ರೀರಾಮಾನುಜ).

**ದ್ಯಾವಾಪೃಥಿವ್ಯೋರಿದಮಂತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥**

ದ್ಯಾವಾಪೃಥಿವ್ಯೋಃ ಹಿ (ದ್ಯುಲೋಕ-ಭೂಲೋಕಗಳ) ಇದಂ (ಈ) ಅಂತರಂ (ಮಧ್ಯಭಾಗವು) ತ್ವಯಾ ಏಕೇನ (ನಿನ್ನೊಬ್ಬನಿಂದಲೇ) ವ್ಯಾಪ್ತಂ (ವ್ಯಾಪ್ತವಾಗಿದೆ) ಸರ್ವಾಃ ಚ (ಮತ್ತು ಎಲ್ಲಾ) ದಿಶಃ (ದಿಕ್ಕುಗಳು) [ವ್ಯಾಪ್ತಾಃ (ವ್ಯಾಪ್ತವಾಗಿರುವುವು)] ಮಹಾತ್ಮನ್ (ಎಲೈ ಮಹಾತ್ಮನೆ) ತವ (ನಿನ್ನ) ಇದಂ (ಈ) ಅದ್ಭುತಂ (ಅದ್ಭುತವಾದ) ಉಗ್ರಂ (ಉಗ್ರವಾದ) ರೂಪಂ (ರೂಪವನ್ನು) ದೃಷ್ಟ್ವಾ (ನೋಡಿ) ಲೋಕತ್ರಯಂ (ಲೋಕತ್ರಯವು) ಪ್ರವ್ಯಥಿತಂ (ಭಯಗೊಂಡಿರುತ್ತದೆ).

೨೦. ದ್ಯುಲೋಕ-ಭೂಲೋಕಗಳ ಈ ಮಧ್ಯಭಾಗವೂ ಮತ್ತು ಎಲ್ಲಾ ದಿಕ್ಕುಗಳೂ ನಿನ್ನೊಬ್ಬನಿಂದಲೇ ವ್ಯಾಪ್ತವಾಗಿರುವುವು. ಎಲೈ ಮಹಾತ್ಮನೆ, ಅದ್ಭುತವೂ ಉಗ್ರವೂ ಆದ ನಿನ್ನ ಈ ರೂಪವನ್ನು ನೋಡಿ ಮೂರು ಲೋಕಗಳೂ ಭಯಗೊಂಡಿರುತ್ತವೆ.

**ಅಮೀ ಹಿ ತ್ವಾಂ ಸುರಸಂಘಾ ವಿಶಂತಿ**
**ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ**
**ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥**

ಅಮೀ (ಈ) ಸುರಸಂಘಾಃ (ದೇವತೆಗಳ ಸಂಘಗಳು) ತ್ವಾಂ ಹಿ (ನಿನ್ನನ್ನೇ) ವಿಶಂತಿ (ಪ್ರವೇಶಿಸುತ್ತಿರುವುವು) ಕೇಚಿತ್ (ಕೆಲವರು) ಭೀತಾಃ (ಭೀತರಾಗಿ) ಪ್ರಾಂಜಲಯಃ (ಕೈಜೋಡಿಸಿಕೊಂಡು) ಗೃಣಂತಿ (ಸ್ತುತಿಸುತ್ತಿರುವರು) ಮಹರ್ಷಿ-ಸಿದ್ಧಸಂಘಾಃ (ಮಹರ್ಷಿಸಿದ್ಧಸಂಘಗಳು) ಸ್ವಸ್ತಿ ಇತಿ ಉಕ್ತ್ವಾ (ಸ್ವಸ್ತಿ ಎಂದು ಹೇಳಿ) ಪುಷ್ಕಲಾಭಿಃ (ಪ್ರಚುರವಾದ) ಸ್ತುತಿಭಿಃ (ಸ್ತುತಿಗಳಿಂದ) ತ್ವಾಂ (ನಿನ್ನನ್ನು) ಸ್ತುವಂತಿ (ಸ್ತುತಿಸುತ್ತಿರುವುವು).

೨೧. ಈ ದೇವತೆಗಳ ಸಂಘಗಳು[1] ನಿನ್ನನ್ನೇ ಪ್ರವೇಶಿಸುತ್ತಿರುವುವು;[2] ಕೆಲವರು ಭೀತರಾಗಿ ಕೈಜೋಡಿಸಿಕೊಂಡು ಸ್ತುತಿಸುತ್ತಿರುವರು; ಮಹರ್ಷಿ

ಸಿದ್ಧಸಂಘಗಳು 'ಸ್ವಸ್ತಿ' ಎಂದು ಹೇಳಿ ನಿನ್ನನ್ನು ಪ್ರಚುರವಾದ ಸ್ತುತಿಗಳಿಂದ ಸ್ತೋತ್ರಮಾಡುತ್ತಿರುವುವು.

1 ಮನುಷ್ಯರೂಪದಲ್ಲಿ ಅವತರಿಸಿರುವ ವಸುಗಳೇ ಮುಂತಾದ ದೇವತಾಗಣಗಳು (ಶ್ರೀಶಂಕರ).

2 ನಿನ್ನ ಸಮೀಪಕ್ಕೆ ಹೋಗುತ್ತಿರುವುವು (ಶ್ರೀರಾಮಾನುಜ).

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾಃ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವಯಕ್ಷಾಸುರಸಿದ್ಧಸಂಘಾಃ**
**ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ ೨೨ ॥**

ಯೇ ಚ (ಯಾವ) ರುದ್ರಾದಿತ್ಯಾಃ (ರುದ್ರರು ಮತ್ತು ಆದಿತ್ಯರು) ವಸವಃ (ವಸುಗಳು) ಸಾಧ್ಯಾಃ (ಸಾಧ್ಯರು) ವಿಶ್ವೇ (ವಿಶ್ವೇದೇವತೆಗಳು) ಅಶ್ವಿನೌ (ಅಶ್ವಿನೀ ದೇವತೆಗಳು) ಮರುತಃ ಚ (ಮರುದ್ಗಣಗಳು) ಊಷ್ಮಪಾಃ ಚ (ಪಿತೃಗಳು) ಗಂಧರ್ವ-ಯಕ್ಷಾಸುರ-ಸಿದ್ಧಸಂಘಾಃ ಚ (ಗಂಧರ್ವಯಕ್ಷಾಸುರಸಿದ್ಧಸಂಘಗಳು) ಸರ್ವೇ ಏವ (ಇವರೆಲ್ಲರೂ) ವಿಸ್ಮಿತಾಃ (ಆಶ್ಚರ್ಯವುಳ್ಳವರಾಗಿ) ತ್ವಾಂ (ನಿನ್ನನ್ನು) ವೀಕ್ಷಂತೇ (ನೋಡುತ್ತಿರುವರು).

**೨೨.** ರುದ್ರರು ಆದಿತ್ಯರು ವಸುಗಳು ಸಾಧ್ಯರು ವಿಶ್ವೇದೇವತೆಗಳು ಅಶ್ವಿನೀದೇವತೆಗಳು ಮರುದ್ಗಣಗಳು ಗಂಧರ್ವಯಕ್ಷಾಸುರಸಿದ್ಧಸಂಘಗಳು —ಇವರೆಲ್ಲರೂ ಆಶ್ಚರ್ಯಯುಕ್ತರಾಗಿ ನಿನ್ನನ್ನೇ ನೋಡುತ್ತಿರುವರು.

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥ ೨೩ ॥**

ಮಹಾಬಾಹೋ (ಎಲೈ ಮಹಾಬಾಹುವೆ) ತೇ (ನಿನ್ನ) ಬಹು-ವಕ್ತ್ರ-ನೇತ್ರಂ (ಅನೇಕ ಮುಖಗಳೂ ನೇತ್ರಗಳೂ ಉಳ್ಳ) ಬಹು-ಬಾಹೂರು-ಪಾದಂ (ಅನೇಕ ಬಾಹುಗಳೂ ತೊಡೆಗಳೂ ಪಾದಗಳೂ ಉಳ್ಳ) ಬಹೂದರಂ (ಅನೇಕ ಉದರಗಳುಳ್ಳ) ಬಹು-ದಂಷ್ಟ್ರಾ-ಕರಾಲಂ (ಅನೇಕ ಕೋರೆದಾಡೆಗಳಿಂದ ಕರಾಳವಾದ) ಮಹತ್ (ದೊಡ್ಡ) ರೂಪಂ (ರೂಪವನ್ನು) ದೃಷ್ಟ್ವಾ (ನೋಡಿ) ಲೋಕಾಃ (ಲೋಕಗಳು) ಪ್ರವ್ಯಥಿತಾಃ (ಭಯಗೊಂಡಿವೆ) ತಥಾ (ಹಾಗೆಯೇ) ಅಹಂ (ನಾನು ಕೂಡ) [ಭಯಗೊಂಡಿದ್ದೇನೆ].

೨೩. ಎಲೈ ಮಹಾಬಾಹು, ಅನೇಕ ಮುಖಗಳೂ ಕಣ್ಣುಗಳೂ ಬಾಹುಗಳೂ ತೊಡೆಗಳೂ ಪಾದಗಳೂ ಉದರಗಳೂ ಉಳ್ಳ, ಅನೇಕ ಕೋರೆದಾಡೆಗಳಿಂದ ಕರಾಳವಾದ ನಿನ್ನ ಮಹದ್ರೂಪವನ್ನು ನೋಡಿ ಲೋಕಗಳೂ ಮತ್ತು ನಾನೂ ಭಯಗೊಂಡಿದ್ದೇವೆ.

ನಭಃಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಂ
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥ ೨೪ ॥

ವಿಷ್ಣೋ (ಎಲೈ ವಿಷ್ಣುವೆ) ನಭಃಸ್ಪೃಶಂ (ಅಂತರಿಕ್ಷವನ್ನು ಮುಟ್ಟಿರುವವನೂ) ದೀಪ್ತಂ (ತೇಜೋಮಯನೂ) ಅನೇಕವರ್ಣಂ (ಅನೇಕ ವರ್ಣಗಳುಳ್ಳವನೂ) ವ್ಯಾತ್ತಾನನಂ (ತೆರೆಯಲ್ಪಟ್ಟ ಬಾಯಿಗಳುಳ್ಳವನೂ) ದೀಪ್ತ-ವಿಶಾಲ-ನೇತ್ರಂ (ಉಜ್ಜ್ವಲವೂ ವಿಶಾಲವೂ ಆದ ನೇತ್ರಗಳುಳ್ಳವನೂ) [ಆದ] ತ್ವಾಂ (ನಿನ್ನನ್ನು) ದೃಷ್ಟ್ವಾ (ನೋಡಿ) ಪ್ರವ್ಯಥಿತಾಂತರಾತ್ಮಾ (ಭಯಗೊಂಡ ಮನಸ್ಸುಳ್ಳವನಾಗಿದ್ದೇನೆ) ಧೃತಿಂ (ಧೈರ್ಯವನ್ನೂ) ಶಮಂ ಚ (ಶಾಂತಿಯನ್ನೂ) ನ ವಿಂದಾಮಿ (ಹೊಂದದೆ ಇರುವೆನು).

೨೪. ಎಲೈ ವಿಷ್ಣು, ಅಂತರಿಕ್ಷವನ್ನು ಮುಟ್ಟಿರುವವನೂ ತೇಜೋಮಯನೂ ಅನೇಕ ವರ್ಣಗಳುಳ್ಳವನೂ ತೆರೆಯಲ್ಪಟ್ಟ ಬಾಯಿಗಳುಳ್ಳವನೂ ಉಜ್ಜ್ವಲವಿಶಾಲವಾದ ನೇತ್ರಗಳುಳ್ಳವನೂ ಆದ ನಿನ್ನನ್ನು ನೋಡಿ ನನ್ನ ಮನಸ್ಸು ಭಯಗೊಂಡಿದೆ. ಧೈರ್ಯವನ್ನೂ ಮತ್ತು ಶಾಂತಿಯನ್ನೂ ಹೊಂದದೆ ಇರುವೆನು.

ದಂಷ್ಟ್ರಾಕರಾಲಾನಿ ಚ ತೇ ಮುಖಾನಿ
ದೃಷ್ಟ್ವೈವ ಕಾಲಾನಲಸನ್ನಿಭಾನಿ ।
ದಿಶೋ ನ ಜಾನೇ ನ ಲಭೇ ಚ ಶರ್ಮ
ಪ್ರಸೀದ ದೇವೇಶ ಜಗನ್ನಿವಾಸ ॥ ೨೫ ॥

ದೇವೇಶ (ಎಲೈ ದೇವೇಶನೆ) ತೇ (ನಿನ್ನ) ದಂಷ್ಟ್ರಾ-ಕರಾಲಾನಿ (ಕೋರೆದಾಡೆಗಳಿಂದ ಕರಾಳವಾಗಿರುವ) ಕಾಲಾನಲ-ಸನ್ನಿಭಾನಿ ಚ (ಮತ್ತು ಪ್ರಳಯಾಗ್ನಿಯಂತಿರುವ) ಮುಖಾನಿ (ಮುಖಗಳನ್ನು) ದೃಷ್ಟ್ವಾ ಏವ (ನೋಡಿಯೇ) ದಿಶಃ (ದಿಕ್ಕುಗಳನ್ನು) ನ ಜಾನೇ (ಕಾಣದೆ ಇರುವೆನು) ಶರ್ಮ ಚ (ಮತ್ತು ಸುಖವನ್ನೂ) ನ ಲಭೇ (ಹೊಂದದೆ ಇರುವೆನು) ಜಗನ್ನಿವಾಸ (ಎಲೈ ಜಗನ್ನಿವಾಸನೆ) ಪ್ರಸೀದ (ಪ್ರಸನ್ನನಾಗು).

೨೫. ಎಲೈ ದೇವೇಶ, ಕೋರೆದಾಡೆಗಳಿಂದ ಕರಾಳವಾಗಿರುವ, ಪ್ರಳಯಾಗ್ನಿಯಂತಿರುವ ನಿನ್ನ ಮುಖಗಳನ್ನು ನೋಡಿ ದಿಕ್ಕುಗಳನ್ನು ಕಾಣದೇ ಇರುವೆನು, ಸುಖವನ್ನೂ ಹೊಂದದೇ ಇರುವೆನು. ಎಲೈ ಜಗನ್ನಿವಾಸ, ಪ್ರಸನ್ನನಾಗು.

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬ ॥**

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾಂತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭ ॥**

ಅವನಿಪಾಲ-ಸಂಘೈಃ ಸಹ (ರಾಜಸಮೂಹಗಳಿಂದ ಕೂಡಿರುವ) ಅಮೀ ಚ (ಈ) ಧೃತರಾಷ್ಟ್ರಸ್ಯ (ಧೃತರಾಷ್ಟ್ರನ) ಸರ್ವೇ (ಎಲ್ಲಾ) ಪುತ್ರಾಃ ಏವ (ಪುತ್ರರು) ತಥಾ (ಹಾಗೆಯೇ) ಭೀಷ್ಮಃ (ಭೀಷ್ಮ) ದ್ರೋಣಃ (ದ್ರೋಣ) ಅಸೌ ಚ ಸೂತಪುತ್ರಃ (ಈ ಕರ್ಣ) ಅಸ್ಮದೀಯೈಃ ಅಪಿ (ನಮ್ಮವರಾದ) ಯೋಧಮುಖ್ಯೈಃ ಸಹ (ಮುಖ್ಯ ಯೋಧರೊಂದಿಗೆ) ತ್ವಾಂ (ನಿನ್ನನ್ನು) [ವಿಶಂತಿ (ಪ್ರವೇಶಿಸುತ್ತಿರುವರು)] [ಅವರು] ತ್ವರಮಾಣಾಃ (ತ್ವರೆಮಾಡುತ್ತಾ) ತೇ (ನಿನ್ನ) ದಂಷ್ಟ್ರಾಕರಾಲಾನಿ (ಕೋರೆದಾಡೆಗಳಿಂದ ಕರಾಳವೂ) ಭಯಾನಕಾನಿ (ಭಯಂಕರವೂ ಆದ) ವಕ್ತ್ರಾಣಿ (ಮುಖಗಳನ್ನು) ವಿಶಂತಿ (ಹೋಗುತ್ತಿರುವರು) ಕೇಚಿತ್ (ಕೆಲವರು) ಚೂರ್ಣಿತೈಃ (ಪುಡಿಪುಡಿಯಾದ) ಉತ್ತಮಾಂಗೈಃ (ತಲೆಗಳಿಂದ) ದಶನಾಂತರೇಷು (ಹಲ್ಲುಸಂದುಗಳಲ್ಲಿ) ವಿಲಗ್ನಾಃ (ಸಿಕ್ಕಿಕೊಂಡು) ಸಂದೃಶ್ಯಂತೇ (ಕಾಣುತ್ತಿರುವರು).

೨೬-೨೭. ರಾಜಸಮೂಹಗಳಿಂದ ಕೂಡಿರುವ ಧೃತರಾಷ್ಟ್ರನ ಈ ಸಮಸ್ತಪುತ್ರರು ಭೀಷ್ಮ ದ್ರೋಣ ಮತ್ತು ಕರ್ಣ— ಇವರೆಲ್ಲಾ ನಮ್ಮ ಮುಖ್ಯರಾದ ಯೋಧರಿಂದ ಕೂಡಿ, ಕೋರೆದಾಡೆಗಳಿಂದ ಕರಾಳವೂ ಭಯಂಕರವೂ ಆದ ನಿನ್ನ ಮುಖಗಳನ್ನು ತ್ವರೆಯಿಂದ ಪ್ರವೇಶಿಸುತ್ತಿರುವರು. ಕೆಲವರು ನಿನ್ನ ಹಲ್ಲಿನ ಸಂದುಗಳಲ್ಲಿ ಸಿಕ್ಕಿಕೊಂಡು ಪುಡಿಪುಡಿಯಾದ ತಲೆಗಳಿಂದ ಕಾಣುತ್ತಿರುವರು.

[ಕೌರವರ ಸಂಹಾರವು ಆಗ ನಡೆಯದೇ ಇದ್ದರೂ, ಭಗವತ್ಕೃಪೆಯಿಂದ ಪಡೆದ ದಿವ್ಯದೃಷ್ಟಿಯಿಂದ ಮುಂದೆ ನಡೆಯುವ ಅವರ ಸಂಹಾರವನ್ನು ಅರ್ಜುನನು ನೋಡಿದನು ಎಂದು ರಾಮಾನುಜಭಾಷ್ಯದಲ್ಲಿ ಸೂಚಿತವಾಗಿದೆ.]

**ಯಥಾ ನದೀನಾಂ ಬಹವೋಽಂಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವಂತಿ ।**
**ತಥಾ ತವಾಮೀ ನರಲೋಕವೀರಾ**
**ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥ ೨೮ ॥**

ಯಥಾ (ಹೇಗೆ) ನದೀನಾಂ (ನದಿಗಳ) ಬಹವಃ (ವಿಪುಲವಾದ) ಅಂಬುವೇಗಾಃ (ಜಲಪ್ರವಾಹಗಳು) ಸಮುದ್ರಂ ಏವ ಅಭಿಮುಖಾಃ (ಸಮುದ್ರಾಭಿಮುಖವಾಗಿ) ದ್ರವಂತಿ (ಹರಿಯುತ್ತಿರುವುವೋ) ತಥಾ (ಹಾಗೆಯೇ) ಅಮೀ (ಈ) ನರಲೋಕ-ವೀರಾಃ (ನರಲೋಕದ ವೀರರು) ತವ (ನಿನ್ನ) ಅಭಿವಿಜ್ವಲಂತಿ (ಪ್ರಜ್ವಲಿಸುತ್ತಿರುವ) ವಕ್ತ್ರಾಣಿ (ಬಾಯಿಗಳನ್ನು) ವಿಶಂತಿ (ಪ್ರವೇಶಿಸುತ್ತಿರುವರು).

೨೮. ಹೇಗೆ ನದಿಗಳ ವಿಪುಲವಾದ ಜಲಪ್ರವಾಹಗಳು ಸಮುದ್ರಾಭಿಮುಖವಾಗಿ ಹರಿಯುತ್ತಿರುವುವೋ ಹಾಗೆಯೇ ಈ ನರಲೋಕವೀರರು ಪ್ರಜ್ವಲಿಸುತ್ತಿರುವ ನಿನ್ನ ಬಾಯಿಗಳನ್ನು ಪ್ರವೇಶಿಸುತ್ತಿರುವರು.

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ**
**ವಿಶಂತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶಂತಿ ಲೋಕಾ-**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥**

ಯಥಾ (ಹೇಗೆ) ಪತಂಗಾಃ (ಪತಂಗಗಳು) ಸಮೃದ್ಧವೇಗಾಃ (ಅತಿವೇಗವುಳ್ಳವುಗಳಾಗಿ) ನಾಶಾಯ (ನಾಶಕ್ಕಾಗಿ) ಪ್ರದೀಪ್ತಂ (ಉರಿಯುತ್ತಿರುವ) ಜ್ವಲನಂ (ಜ್ವಾಲೆಯನ್ನು) ವಿಶಂತಿ (ಪ್ರವೇಶಿಸುತ್ತವೆಯೋ) ತಥಾ (ಹಾಗೆಯೇ) ಲೋಕಾಃ ಅಪಿ (ಜನಗಳೂ ಕೂಡ) ಸಮೃದ್ಧವೇಗಾಃ (ಅತಿವೇಗವುಳ್ಳವರಾಗಿ) ನಾಶಾಯ ಏವ (ನಾಶಕ್ಕಾಗಿಯೇ) ತವ (ನಿನ್ನ) ವಕ್ತ್ರಾಣಿ (ಬಾಯಿಗಳನ್ನು) ವಿಶಂತಿ (ಪ್ರವೇಶಿಸುತ್ತಿರುವರು)

೨೯. ಹೇಗೆ ಪತಂಗಗಳು[1] ಅತಿವೇಗವುಳ್ಳವುಗಳಾಗಿ ಉರಿಯುತ್ತಿರುವ ಜ್ವಾಲೆಯನ್ನು (ತಮ್ಮ) ನಾಶಕ್ಕಾಗಿ ಪ್ರವೇಶಿಸುತ್ತವೆಯೋ ಹಾಗೆಯೇ ಈ

ಜನರೂ ಕೂಡ ಅತಿವೇಗವುಳ್ಳವರಾಗಿ ನಿನ್ನ ಮುಖಗಳನ್ನು (ತಮ್ಮ) ನಾಶಕ್ಕಾಗಿ ಪ್ರವೇಶಿಸುತ್ತಿರುವರು.

1 ಬೆಂಕಿಯಲ್ಲಿ ಬೀಳುವ ಹುಳುಗಳು.

**ಲೇಲಿಹ್ಯಸೇ ಗ್ರಸಮಾನಃ ಸಮಂತಾ-**
**ಲ್ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥ ೩೦ ॥**

ವಿಷ್ಣೋ (ಎಲೈ ವಿಷ್ಣುವೆ) ಜ್ವಲದ್ಭಿಃ (ಪ್ರಜ್ವಲಿಸುತ್ತಿರುವ) ವದನೈಃ (ಮುಖಗಳಿಂದ) ಸಮಗ್ರಾನ್ (ಎಲ್ಲಾ) ಲೋಕಾನ್ (ಲೋಕಗಳನ್ನೂ) ಸಮಂತಾತ್ (ಎಲ್ಲಾ ಕಡೆಯಿಂದಲೂ) ಗ್ರಸಮಾನಃ (ನುಂಗುವವನಾಗಿ) ಲೇಲಿಹ್ಯಸೇ (ಚಪ್ಪರಿಸುತ್ತಿದ್ದೀಯೆ) ತವ (ನಿನ್ನ) ಉಗ್ರಾಃ (ಉಗ್ರವಾದ) ಭಾಸಃ (ಕಾಂತಿಗಳು) ತೇಜೋಭಿಃ (ತೇಜಸ್ಸುಗಳಿಂದ) ಆಪೂರ್ಯ (ತುಂಬಿಕೊಂಡು) ಸಮಗ್ರಂ ಜಗತ್ (ಜಗತ್ತನ್ನೆಲ್ಲಾ) ಪ್ರತಪಂತಿ (ತಪಿಸುತ್ತಿವೆ).

೩೦. ಎಲೈ ವಿಷ್ಣು, ಪ್ರಜ್ವಲಿಸುತ್ತಿರುವ ನಿನ್ನ ಮುಖಗಳಿಂದ ಎಲ್ಲಾ ಕಡೆಯಿಂದಲೂ ಸಮಸ್ತ ಲೋಕಗಳನ್ನೂ ನುಂಗುವವನಾಗಿ ಚಪ್ಪರಿಸುತ್ತಿದ್ದೀಯೆ. ನಿನ್ನ ಉಗ್ರವಾದ ಕಾಂತಿಗಳು ತೇಜಸ್ಸುಗಳಿಂದ ತುಂಬಿಕೊಂಡು ಜಗತ್ತನ್ನೆಲ್ಲಾ ತಪಿಸುತ್ತಿವೆ.

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ ೩೧ ॥**

ಉಗ್ರರೂಪಃ (ಉಗ್ರರೂಪನಾದ) ಭವಾನ್ (ನೀನು) ಕಃ (ಯಾರು) ಮೇ (ನನಗೆ) ಆಖ್ಯಾಹಿ (ಹೇಳು) ದೇವವರ (ಎಲೈ ದೇವವರನೆ) ತೇ (ನಿನಗೆ) ನಮಃ ಅಸ್ತು (ನಮಸ್ಕಾರವಿರಲಿ) ಪ್ರಸೀದ (ಪ್ರಸನ್ನನಾಗು) ಆದ್ಯಂ (ಆದ್ಯನಾದ) ಭವಂತಂ (ನಿನ್ನನ್ನು) ವಿಜ್ಞಾತುಂ (ತಿಳಿದುಕೊಳ್ಳಲು) ಇಚ್ಛಾಮಿ (ಇಚ್ಛಿಸುತ್ತೇನೆ) ಹಿ (ಏಕೆಂದರೆ) ತವ (ನಿನ್ನ) ಪ್ರವೃತ್ತಿಂ (ಪ್ರವೃತ್ತಿಯನ್ನು) ನ ಪ್ರಜಾನಾಮಿ (ಅರಿಯೆನು).

೩೧. ಉಗ್ರರೂಪನಾದ ನೀನು ಯಾರು? ನನಗೆ ಹೇಳು. ಎಲೈ ದೇವವರನೆ, ನಿನಗೆ ನಮಸ್ಕಾರ. ಪ್ರಸನ್ನನಾಗು. ಆದಿಪುರುಷನಾದ ನಿನ್ನನ್ನು ತಿಳಿಯಲು ಇಚ್ಛಿಸುತ್ತೇನೆ; ಏಕೆಂದರೆ ನಿನ್ನ ಪ್ರವೃತ್ತಿಯನ್ನು ನಾನು ಅರಿಯೆನು.

ಶ್ರೀಭಗವಾನ್ ಉವಾಚ

**ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧಃ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾ ನ ಭವಿಷ್ಯಂತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಲೋಕಕ್ಷಯಕೃತ್ (ಲೋಕಕ್ಷಯಕಾರಿಯಾದ) ಪ್ರವೃದ್ಧಃ (ವೃದ್ಧಿಯನ್ನು ಪಡೆದಿರುವ) ಕಾಲಃ ಅಸ್ಮಿ (ಕಾಲನಾಗಿರುವೆನು) ಲೋಕಾನ್ (ಲೋಕಗಳನ್ನು) ಸಮಾಹರ್ತುಂ (ಸಂಹಾರ ಮಾಡಲು) ಇಹ (ಇಲ್ಲಿ, ಈಗ) ಪ್ರವೃತ್ತಃ (ಹೊರಟಿರುವೆನು) ತ್ವಾ ಋತೇ ಅಪಿ (ನೀನಿಲ್ಲದಿದ್ದರೂ) ಪ್ರತ್ಯನೀಕೇಷು (ಶತ್ರುಸೈನ್ಯಗಳಲ್ಲಿ) ಯೇ (ಯಾವ) ಯೋಧಾಃ (ಯೋಧರು) ಅವಸ್ಥಿತಾಃ (ಇರುವರೋ) ಸರ್ವೇ (ಅವರೆಲ್ಲರೂ) ನ ಭವಿಷ್ಯಂತಿ (ಜೀವಿಸಲಾರರು).

ಶ್ರೀಕೃಷ್ಣನು ಹೇಳಿದನು

೩೨. ಲೋಕಕ್ಷಯಕಾರಿಯೂ ವೃದ್ಧಿಯನ್ನು ಪಡೆದಿರುವವನೂ ಆದ ಕಾಲನು ನಾನಾಗಿರುವೆನು ಲೋಕಗಳನ್ನು ಸಂಹಾರಮಾಡುವುದಕ್ಕೆ ಈಗ ಹೊರಟಿರುವೆನು. ಶತ್ರುಸೈನ್ಯಗಳಲ್ಲಿ ಯಾವ ಯೋಧರು ಇರುವರೋ ಅವರೆಲ್ಲರೂ— ನೀನಿಲ್ಲದಿದ್ದರೂ[1] — ಜೀವಿಸಲಾರರು.

[1] ನೀನು ಯುದ್ಧಮಾಡದಿದ್ದರೂ.

**ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥**

ತಸ್ಮಾತ್ (ಆದುದರಿಂದ) ತ್ವಂ (ನೀನು) ಉತ್ತಿಷ್ಠ (ಏಳು) ಯಶಃ (ಯಶಸ್ಸನ್ನು) ಲಭಸ್ವ (ಪಡೆ) ಶತ್ರೂನ್ (ಶತ್ರುಗಳನ್ನು) ಜಿತ್ವಾ (ಜಯಿಸಿ) ಸಮೃದ್ಧಂ (ಸಮೃದ್ಧವಾದ) ರಾಜ್ಯಂ (ರಾಜ್ಯವನ್ನು) ಭುಂಕ್ಷ್ವ (ಅನುಭವಿಸು) ಏತೇ (ಇವರು) ಪೂರ್ವಂ ಏವ (ಮೊದಲೇ) ಮಯಾ ಏವ (ನನ್ನಿಂದಲೇ) ನಿಹತಾಃ (ಹತರಾಗಿರುವರು) ಸವ್ಯ-ಸಾಚಿನ್ (ಎಲೈ ಸವ್ಯಸಾಚಿಯೆ) ನಿಮಿತ್ತಮಾತ್ರಂ ಭವ (ನಿಮಿತ್ತಮಾತ್ರನಾಗು).

೩೩. ಆದುದರಿಂದ ನೀನು ಏಳು, ಯಶಸ್ಸನ್ನು ಹೊಂದು. ಶತ್ರುಗಳನ್ನು ಜಯಿಸಿ ಸಮೃದ್ಧವಾದ ರಾಜ್ಯವನ್ನು ಅನುಭವಿಸು. ಇವರೆಲ್ಲರೂ

ಮೊದಲೇ ನನ್ನಿಂದಲೇ ಹತರಾಗಿರುವರು. ಎಲೈ ಸವ್ಯಸಾಚಿಯೆ,[1] (ನೀನು) ನಿಮಿತ್ತಮಾತ್ರನಾಗು.

[1] ಎಡಗೈಯಿಂದಲೂ ಶರಸಂಧಾನಮಾಡಲು ಶಕ್ತಿಯುಳ್ಳವನು; ಎಂದರೆ ಎರಡು ಕೈಗಳಿಂದಲೂ ಬಾಣವನ್ನು ಬಿಡಲು ಸಮರ್ಥನಾದವನು.

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪ ॥**

ಮಯಾ (ನನ್ನಿಂದ) ಹತಾನ್ (ಹತರಾದ) ದ್ರೋಣಂ ಚ (ದ್ರೋಣನನ್ನೂ) ಭೀಷ್ಮಂ ಚ (ಭೀಷ್ಮನನ್ನೂ) ಜಯದ್ರಥಂ ಚ (ಜಯದ್ರಥನನ್ನೂ) ಕರ್ಣಂ (ಕರ್ಣನನ್ನೂ) ತಥಾ (ಹಾಗೆಯೇ) ಅನ್ಯಾನ್ (ಇತರರಾದ) ಯೋಧವೀರಾನ್ ಅಪಿ (ವೀರರನ್ನೂ) ತ್ವಂ (ನೀನು) ಜಹಿ (ಜಯಿಸು, ಕೊಲ್ಲು) ಮಾ ವ್ಯಥಿಷ್ಠಾಃ (ವ್ಯಥೆಪಡಬೇಡ) ರಣೇ (ಯುದ್ಧದಲ್ಲಿ) ಸಪತ್ನಾನ್ (ಶತ್ರುಗಳನ್ನು) ಜೇತಾಸಿ (ಜಯಿಸುವೆ) ಯುಧ್ಯಸ್ವ (ಯುದ್ಧಮಾಡು).

**೩೪.** ನನ್ನಿಂದ ಹತರಾದ ದ್ರೋಣ ಭೀಷ್ಮ ಜಯದ್ರಥ ಕರ್ಣ — ಇವರನ್ನೂ ಮತ್ತು ಇತರ ವೀರರನ್ನೂ ನೀನು ಕೊಲ್ಲು. ವ್ಯಥೆಪಡಬೇಡ; ಯುದ್ಧದಲ್ಲಿ ಶತ್ರುಗಳನ್ನು ಜಯಿಸುವೆ. (ಆದುದರಿಂದ) ಯುದ್ಧಮಾಡು.

ಸಂಜಯ ಉವಾಚ

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)—ಕೇಶವಸ್ಯ (ಶ್ರೀಕೃಷ್ಣನ) ಏತತ್ (ಈ) ವಚನಂ (ವಾಕ್ಯವನ್ನು, ಮಾತನ್ನು) ಶ್ರುತ್ವಾ (ಕೇಳಿ) ಕೃತಾಂಜಲಿಃ (ಕೈಗಳನ್ನು ಜೋಡಿಸಿದವನಾಗಿ) ವೇಪಮಾನಃ (ನಡುಗುವವನಾಗಿ) ಕಿರೀಟೀ (ಅರ್ಜುನನು) ಭೂಯಃ ಏವ (ಪುನಃ ಪುನಃ) ನಮಸ್ಕೃತ್ವಾ (ನಮಸ್ಕರಿಸುತ್ತಾ) ಭೀತಭೀತಃ (ಅತ್ಯಂತ ಭಯಪಟ್ಟವನಾಗಿ) ಪ್ರಣಮ್ಯ (ತಲೆಬಾಗಿಸಿ) ಕೃಷ್ಣಂ (ಕೃಷ್ಣನನ್ನು ಕುರಿತು) ಸಗದ್ಗದಂ (ಗದ್ಗದಕಂಠದಿಂದ) ಆಹ (ಹೇಳಿದನು).

### ಸಂಜಯನು ಹೇಳಿದನು

**೩೫.** ಶ್ರೀಕೃಷ್ಣನ ಈ ಮಾತನ್ನು ಕೇಳಿ ಅರ್ಜುನನು ಕೈಗಳನ್ನು ಜೋಡಿಸಿಕೊಂಡು ನಡುಗುತ್ತಾ ಪುನಃ ಪುನಃ ನಮಸ್ಕರಿಸುತ್ತಾ ಅತ್ಯಂತ ಭೀತನಾಗಿ ತಲೆಬಾಗಿಸಿಕೊಂಡು ಕೃಷ್ಣನನ್ನು ಕುರಿತು ಗದ್ಗದಕಂಠದಿಂದ ಹೇಳಿದನು.

### ಅರ್ಜುನ ಉವಾಚ

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ　　॥ ೩೬ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)—ಹೃಷೀಕೇಶ (ಎಲೈ ಹೃಷೀಕೇಶನೆ) ತವ (ನಿನ್ನ) ಪ್ರಕೀರ್ತ್ಯಾ (ಮಾಹಾತ್ಮ್ಯಕೀರ್ತನೆಯಿಂದ) ಜಗತ್ (ಜಗತ್ತು) ಪ್ರಹೃಷ್ಯತಿ (ಸಂತೋಷಪಡುತ್ತಲಿದೆ) ಅನುರಜ್ಯತೇ ಚ (ಅನುರಾಗವನ್ನು ಹೊಂದುತ್ತಿದೆ) ರಕ್ಷಾಂಸಿ (ರಾಕ್ಷಸರು) ಭೀತಾನಿ (ಭೀತರಾಗಿ) ದಿಶಃ (ದಿಕ್ಕುಗಳಿಗೆ) ದ್ರವಂತಿ (ಓಡುತ್ತಿರುವರು) ಸರ್ವೇ (ಎಲ್ಲಾ) ಸಿದ್ಧಸಂಘಾಃ (ಸಿದ್ಧರ ಸಂಘಗಳು) ನಮಸ್ಯಂತಿ (ನಮಸ್ಕರಿಸುತ್ತಿರುವುವು) [ಇವೆಲ್ಲವೂ] ಸ್ಥಾನೇ (ಯುಕ್ತವೇ).

### ಅರ್ಜುನನು ಹೇಳಿದನು

**೩೬.** ಎಲೈ ಹೃಷೀಕೇಶ, ನಿನ್ನ ಮಾಹಾತ್ಮ್ಯಕೀರ್ತನೆಯಿಂದ ಜಗತ್ತು[1] ಸಂತೋಷಪಡುತ್ತಲಿದೆ ಮತ್ತು ಅನುರಾಗವನ್ನು ಹೊಂದುತ್ತಲಿದೆ. ರಾಕ್ಷಸರು ಭೀತರಾಗಿ ದಿಕ್ಕುಗಳಿಗೆ ಓಡುತ್ತಿರುವರು. ಸಿದ್ಧರ ಸಂಘಗಳೆಲ್ಲವೂ ನಮಸ್ಕರಿಸುತ್ತಿರುವುವು. (ಇವೆಲ್ಲ) ಯುಕ್ತವೇ ಸರಿ.

[1] ಅಲ್ಲಿಗೆ ಬಂದ ಸಮಸ್ತ ಗಂಧರ್ವ-ಸಿದ್ಧ-ಯಕ್ಷ-ವಿದ್ಯಾಧರ-ಕಿನ್ನರ-ಕಿಂಪುರುಷಾದಿಗಳು (ಶ್ರೀರಾಮಾನುಜ).

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನಂತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್　　॥ ೩೭ ॥**

ಮಹಾತ್ಮನ್ (ಎಲೈ ಮಹಾತ್ಮನೆ) ಬ್ರಹ್ಮಣಃ ಅಪಿ (ಬ್ರಹ್ಮನ) ಆದಿಕರ್ತ್ರೇ ಚ (ಆದಿಕಾರಣನಾದ) ಗರೀಯಸೇ (ಉತ್ಕೃಷ್ಟನಾದ) ತೇ (ನಿನಗೆ) ಕಸ್ಮಾತ್ (ಯಾವ

ಕಾರಣದಿಂದ) ನ ನಮೇರನ್ (ನಮಸ್ಕರಿಸದೆ ಇರುವರು) ಅನಂತ (ಎಲೈ ಅನಂತನೆ) ದೇವೇಶ (ಎಲೈ ದೇವೇಶನೆ) ಜಗನ್ನಿವಾಸ (ಎಲೈ ಜಗನ್ನಿವಾಸನೆ) ತ್ವಂ (ನೀನು) ಅಕ್ಷರಂ (ಅಕ್ಷರ) ಸತ್ (ಸತ್ತು) ಅಸತ್ (ಅಸತ್ತು) ಯತ್ (ಯಾವುದು) ಪರಂ (ಪರವೋ) ತತ್ (ಅದು).

೩೭. ಎಲೈ ಮಹಾತ್ಮನೆ, ಬ್ರಹ್ಮನಿಗೂ ಆದಿಕಾರಣನಾದ (ಎಲ್ಲರಿಗಿಂತಲೂ) ಉತ್ಕೃಷ್ಟನಾದ ನಿನಗೆ ಹೇಗೆ ನಮಸ್ಕರಿಸದೆ ಇದ್ದಾರು? ಎಲೈ ಅನಂತ, ದೇವೇಶ, ಜಗನ್ನಿವಾಸ, ನೀನೇ ಅಕ್ಷರ, ಸತ್ತು, ಅಸತ್ತು ಮತ್ತು ಪರವಾದದ್ದು.

[‘ಸತ್’ ಎಂದರೆ ಇರತಕ್ಕದ್ದು, ‘ಅಸತ್’ ಎಂದರೆ ‘ಇಲ್ಲ’ ಎಂಬ ಬುದ್ಧಿ. ಸದಸತ್ತುಗಳು ಅಕ್ಷರಕ್ಕೆ ಉಪಾಧಿಗಳಾಗಿರುವುದರಿಂದ ಅಕ್ಷರವು ಅವುಗಳ ಮೂಲಕ ತಾನು ‘ಸತ್, ಅಸತ್’ ಎಂದು ಉಪಚಾರದಿಂದ ಕರೆಯಲ್ಪಟ್ಟಿದೆ. ಪರಮಾರ್ಥ ದೃಷ್ಟಿಯಿಂದ ಅಕ್ಷರವು ಸದಸತ್ತುಗಳನ್ನು ಮೀರಿದೆ—ಶ್ರೀಶಂಕರ.]

ತ್ವಮಾದಿದೇವಃ ಪುರುಷಃ ಪುರಾಣಃ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ ॥ ೩೮ ॥

ಅನಂತರೂಪ (ಎಲೈ ಅನಂತರೂಪನೆ) ತ್ವಂ (ನೀನು) ಆದಿದೇವಃ (ಆದಿದೇವನು) ಪುರಾಣಃ (ಪುರಾತನನಾದ) ಪುರುಷಃ (ಪುರುಷನು) ತ್ವಂ (ನೀನು) ಅಸ್ಯ (ಈ) ವಿಶ್ವಸ್ಯ (ವಿಶ್ವದ) ಪರಂ (ಉತ್ಕೃಷ್ಟವಾದ) ನಿಧಾನಂ (ಆಶ್ರಯು) ವೇತ್ತಾ (ತಿಳಿಯುವವನು) ವೇದ್ಯಂ ಚ (ತಿಳಿಯತಕ್ಕ ವಸ್ತು) ಪರಂ ಧಾಮ ಚ ಅಸಿ (ಮತ್ತು ಪರಮಧಾಮವಾಗಿರುವೆ) ತ್ವಯಾ (ನಿನ್ನಿಂದ) ವಿಶ್ವಂ (ವಿಶ್ವವು) ತತಂ (ವ್ಯಾಪ್ತವಾಗಿದೆ).

೩೮. ಆದಿದೇವನು, ಪುರಾಣಪುರುಷನು ನೀನು. ಈ ವಿಶ್ವಕ್ಕೆ ಉತ್ಕೃಷ್ಟವಾದ ಆಶ್ರಯವು ನೀನು. ನೀನು ಸರ್ವಜ್ಞ, ಜ್ಞೇಯವಸ್ತು ಮತ್ತು ಪರಮಧಾಮ. ಎಲೈ ಅನಂತರೂಪ, ನಿನ್ನಿಂದಲೇ ವಿಶ್ವವು ವ್ಯಾಪ್ತವಾಗಿದೆ.

ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।
ನಮೋ ನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥ ೩೯ ॥

ತ್ವಂ (ನೀನು) ವಾಯುಃ (ವಾಯು) ಯಮಃ (ಯಮ) ಅಗ್ನಿಃ (ಅಗ್ನಿ) ವರುಣಃ (ವರುಣ) ಶಶಾಂಕಃ (ಚಂದ್ರ) ಪ್ರಜಾಪತಿಃ (ಪ್ರಜಾಪತಿ) ಪ್ರಪಿತಾಮಹಃ ಚ (ಪ್ರಪಿತಾಮಹನು) ತೇ (ನಿನಗೆ) ಸಹಸ್ರಕೃತ್ವಃ (ಸಾವಿರ ಸಲ) ನಮಃ ಅಸ್ತು (ನಮಸ್ಕಾರವಿರಲಿ) ಪುನಃ ಚ (ಮತ್ತು ಪುನಃ) ನಮಃ (ನಮಸ್ಕಾರ) ಭೂಯಃ ಅಪಿ (ಮತ್ತೊಂದು ಸಲ) ತೇ (ನಿನಗೆ) ನಮೋ ನಮಃ (ನಮಸ್ಕಾರ).

೩೯. ವಾಯು ಯಮ ಅಗ್ನಿ ವರುಣ ಚಂದ್ರ ಪ್ರಜಾಪತಿ ಮತ್ತು ಪ್ರಪಿತಾಮಹ[1]—ಇವರೆಲ್ಲರೂ ನೀನೇ. ನಿನಗೆ ಸಾವಿರ ಸಲ ನಮಸ್ಕಾರ ವಿರಲಿ, ಪುನಃ ನಮಸ್ಕಾರ, ಮತ್ತೊಮ್ಮೆ ನಮೋ ನಮಃ.

[1] ಅಜ್ಜನಿಗೂ ತಂದೆ, ಎಂದರೆ ಬ್ರಹ್ಮನ ತಂದೆ.

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನಂತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ ೪೦ ॥**

ಸರ್ವ (ಎಲೈ ಸರ್ವಾತ್ಮನೆ) ತೇ (ನಿನಗೆ) ಪುರಸ್ತಾತ್ (ಮುಂದೆ) ಅಥ (ಮತ್ತು) ಪೃಷ್ಠತಃ (ಹಿಂದೆ) ನಮಃ (ನಮಸ್ಕಾರ) ತೇ (ನಿನಗೆ) ಸರ್ವತಃ ಏವ (ಎಲ್ಲಾ ಕಡೆ ಯಲ್ಲಿಯೂ) ನಮಃ ಅಸ್ತು (ನಮಸ್ಕಾರವಿರಲಿ) ಅನಂತವೀರ್ಯ (ಎಲೈ ಅನಂತ ವೀರ್ಯನೆ) ತ್ವಂ (ನೀನು) ಅಮಿತವಿಕ್ರಮಃ (ಅಮಿತವಿಕ್ರಮನು) ಸರ್ವಂ (ಎಲ್ಲ ವನ್ನೂ) ಸಮಾಪ್ನೋಷಿ (ವ್ಯಾಪಿಸಿಕೊಂಡಿರುವೆ) ತತಃ (ಆ ಕಾರಣದಿಂದ) ಸರ್ವಃ ಅಸಿ (ಸರ್ವಸ್ವರೂಪನಾಗಿರುವೆ).

೪೦. ಎಲೈ ಸರ್ವಾತ್ಮನೆ, ನಿನಗೆ ಹಿಂದೆ ಮುಂದೆ ಮತ್ತು ಎಲ್ಲಾ ಕಡೆ ಯಲ್ಲಿಯೂ ನಮಸ್ಕಾರವಿರಲಿ! ಎಲೈ ಅನಂತವೀರ್ಯನೆ, ನೀನು ಅಮಿತ ಪರಾಕ್ರಮನು. ನೀನು ಎಲ್ಲವನ್ನೂ ವ್ಯಾಪಿಸಿಕೊಂಡಿರುವುದರಿಂದ ಸರ್ವ ಸ್ವರೂಪನಾಗಿರುವೆ.

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥ ೪೧ ॥**

**ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨ ॥**

ಅಚ್ಯುತ (ಎಲೈ ಅಚ್ಯುತನೆ) ತವ (ನಿನ್ನ) ಮಹಿಮಾನಂ (ಮಹಿಮೆಯನ್ನು) ಇದಂ (ಇದನ್ನು, ಈ ವಿಶ್ವರೂಪವನ್ನು) ಅಜಾನತಾ (ತಿಳಿಯದಿರುವ) ಮಯಾ (ನನ್ನಿಂದ) ಪ್ರಮಾದಾತ್ (ಪ್ರಮಾದದಿಂದ) ಪ್ರಣಯೇನ ವಾ ಅಪಿ (ಅಥವಾ ಪ್ರಣಯದಿಂದ) ಸಖಾ ಇತಿ (ಸ್ನೇಹಿತನೆಂದು) ಮತ್ವಾ (ತಿಳಿದು) ಹೇ ಕೃಷ್ಣ (ಎಲೈ ಕೃಷ್ಣನೆ) ಹೇ ಯಾದವ (ಎಲೈ ಯಾದವನೆ) ಹೇ ಸಖೇ (ಎಲೈ ಸಖನೆ) ಇತಿ (ಹೀಗೆ) ಪ್ರಸಭಂ (ದಿಟ್ಟತನದಿಂದ) ಯತ್ (ಯಾವುದು) ಉಕ್ತಂ (ಹೇಳಲ್ಪಟ್ಟಿತೋ) ವಿಹಾರ-ಶಯ್ಯಾಸನ-ಭೋಜನೇಷು (ವಿಹಾರ ಶಯನ ಆಸನ ಭೋಜನ— ಇವುಗಳಲ್ಲಿ) ಏಕಃ (ಒಬ್ಬನಿರುವಾಗ) ಅಥವಾ (ಅಥವಾ) ತತ್ಸಮಕ್ಷಂ (ಇತರರ ಎದುರಿಗೆ) ಅವಹಾ-ಸಾರ್ಥಂ (ಅಪಹಾಸಕ್ಕಾಗಿ) ಯತ್ ಚ (ಯಾವ) ಅಸತ್ಕೃತಃ ಅಸಿ (ಅವಮರ್ಯಾದೆಯನ್ನು ಹೊಂದಲ್ಪಟ್ಟಿಯೋ) ತತ್ (ಅದೆಲ್ಲವನ್ನು) ಅಪ್ರಮೇಯಂ (ಅಪ್ರಮೇಯನಾದ) ತ್ವಾಂ (ನಿನ್ನನ್ನು) ಅಹಂ (ನಾನು) ಕ್ಷಾಮಯೇ (ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ).

**೪೧-೪೨.** ಎಲೈ ಅಚ್ಯುತ, ನಿನ್ನ ಮಹಿಮೆಯನ್ನೂ ಮತ್ತು ಈ ವಿಶ್ವರೂಪವನ್ನೂ ಅರಿಯದೆ ನೀನು ಸ್ನೇಹಿತನೆಂದು ತಿಳಿದು, ಪ್ರಮಾದದಿಂದಾಗಲೀ ಪ್ರಣಯದಿಂದಾಗಲೀ 'ಎಲೈ ಕೃಷ್ಣ', 'ಎಲೈ ಯಾದವ', 'ಎಲೈ ಸಖ' ಎಂದು ಯಾವುವನ್ನು ದಿಟ್ಟತನದಿಂದ ಹೇಳಿದೆನೋ, ಮತ್ತು ವಿಹಾರ ಶಯನ ಆಸನ ಭೋಜನ— ಇವುಗಳಲ್ಲಿ ನೀನು ಒಬ್ಬನೇ ಇರುವಾಗ ಅಥವಾ ಇತರರ ಎದುರಿಗೆ ಅಪಹಾಸಕ್ಕಾಗಿ ಯಾವ ರೀತಿ ಅಪಮರ್ಯಾದೆಯನ್ನು ಮಾಡಿದೆನೋ ಅದೆಲ್ಲವನ್ನೂ ಕ್ಷಮಿಸಬೇಕೆಂದು ಅಪ್ರಮೇಯನಾದ ನಿನ್ನನ್ನು ಬೇಡಿಕೊಳ್ಳುತ್ತೇನೆ.

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ ೪೩ ॥**

ಅಪ್ರತಿಮಪ್ರಭಾವ (ಎಲೈ ಅಪ್ರತಿಮಪ್ರಭಾವನೆ) ತ್ವಂ (ನೀನು) ಅಸ್ಯ (ಈ) ಚರಾಚರಸ್ಯ (ಸ್ಥಾವರಜಂಗಮಾತ್ಮಕವಾದ) ಲೋಕಸ್ಯ (ಲೋಕಕ್ಕೆ) ಪಿತಾ (ತಂದೆ)

ಪೂಜ್ಯಃ (ಪೂಜ್ಯನು) ಗರೀಯಾನ್ ಚ (ಶ್ರೇಷ್ಠನು) ಅಸಿ (ಆಗಿದ್ದೀಯೆ) ಲೋಕತ್ರಯೇ ಅಪಿ (ಲೋಕತ್ರಯದಲ್ಲಿಯೂ) ತ್ವತ್ಸಮಃ (ನಿನಗೆ ಸಮನಾದವನು) ನ ಅಸ್ತಿ (ಯಾವನೂ ಇಲ್ಲ) ಅಭ್ಯಧಿಕಃ (ನಿನಗಿಂತ ದೊಡ್ಡವನು) ಕುತಃ (ಎಲ್ಲಿ).

೪೩. ಎಲೈ ಅಪ್ರತಿಮಪ್ರಭಾವನೆ, ಈ ಸ್ಥಾವರಜಂಗಮಾತ್ಮಕವಾದ ಲೋಕಕ್ಕೆ ತಂದೆಯೂ ಪೂಜ್ಯನೂ ಗುರುವೂ ಶ್ರೇಷ್ಠನೂ ಆದವನು ನೀನೇ. ಲೋಕತ್ರಯದಲ್ಲಿಯೂ ನಿನಗೆ ಸಮನಾದವನು ಯಾವನೂ ಇಲ್ಲ; ಹೀಗಿರುವಾಗ ನಿನಗಿಂತ ದೊಡ್ಡವನಾದವನು ಎಲ್ಲಿರುವನು?

**ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪ ॥**

ದೇವ (ಎಲೈ ದೇವನೆ) ತಸ್ಮಾತ್ (ಆದುದರಿಂದ) ಅಹಂ (ನಾನು) ಕಾಯಂ (ಶರೀರವನ್ನು) ಪ್ರಣಿಧಾಯ (ದಂಡದಂತೆ ಕೆಳಗೆ ಬೀಳಿಸಿ) ಪ್ರಣಮ್ಯ (ನಮಸ್ಕರಿಸಿ) ಈಡ್ಯಂ (ಸ್ತುತ್ಯರ್ಹನಾದ) ಈಶಂ (ಈಶ್ವರನಾದ) ತ್ವಾಂ (ನಿನ್ನನ್ನು) ಪ್ರಸಾದಯೇ (ಪ್ರಸನ್ನನಾಗೆಂದು ಪ್ರಾರ್ಥಿಸುತ್ತೇನೆ) ಪುತ್ರಸ್ಯ (ಮಗನ) [ಅಪರಾಧಂ (ತಪ್ಪನ್ನು)] ಪಿತಾ ಇವ (ತಂದೆಯಂತೆಯೂ) ಸಖ್ಯುಃ (ಸ್ನೇಹಿತನ) [ಅಪರಾಧಂ (ತಪ್ಪನ್ನು)] ಸಖಾ ಇವ (ಸ್ನೇಹಿತನಂತೆಯೂ) ಪ್ರಿಯಾಯಾಃ (ಪ್ರಿಯಳ) [ಅಪರಾಧಂ (ತಪ್ಪನ್ನು)] ಪ್ರಿಯಃ [ಇವ] (ಪ್ರಿಯನಂತೆಯೂ) [ಮಮ ಅಪರಾಧಂ (ನನ್ನ ತಪ್ಪನ್ನು)] ಸೋಢುಂ ಅರ್ಹಸಿ (ಸಹಿಸಲು ಯೋಗ್ಯನಾಗಿದ್ದೀಯೆ).

೪೪. ಎಲೈ ದೇವ, ಆದುದರಿಂದ ನನ್ನ ಶರೀರವನ್ನು ದಂಡದಂತೆ ಕೆಳಗೆ ಬೀಳಿಸಿ, ನಮಸ್ಕರಿಸಿ ಸ್ತುತ್ಯರ್ಹನೂ ಈಶ್ವರನೂ ಆದ ನಿನ್ನನ್ನು ಪ್ರಸನ್ನನಾಗೆಂದು ಪ್ರಾರ್ಥಿಸುತ್ತೇನೆ. ತಂದೆಯು ಮಗನ (ಅಪರಾಧವನ್ನೂ), ಸ್ನೇಹಿತನು ಸ್ನೇಹಿತನ (ಅಪರಾಧವನ್ನೂ) ಪ್ರಿಯನು ಪ್ರಿಯಳ (ಅಪರಾಧವನ್ನೂ ಸಹಿಸುವಂತೆ ನನ್ನ ಅಪರಾಧವನ್ನು) ಸಹಿಸಿಕೊಳ್ಳಬೇಕು.

[ಶ್ರೀರಾಮಾನುಜಾಚಾರ್ಯರು 'ಪ್ರಿಯಃ ಪ್ರಿಯಾಯಾರ್ಹಸಿ' ಎಂಬ ಪದಗಳನ್ನು 'ಪ್ರಿಯಃ ಪ್ರಿಯಾಯಾಃ ಅರ್ಹಸಿ' ಎಂದು ಪದಚ್ಛೇದವನ್ನು ಮಾಡಿಲ್ಲ; 'ಪ್ರಿಯಃ ಪ್ರಿಯಾಯ ಮೇ ಸರ್ವಂ ಸೋಢುಮರ್ಹಸಿ' ಎಂದು ಹೇಳಿರುತ್ತಾರೆ. ಈ ಭಾಷ್ಯದ ಪ್ರಕಾರ 'ಪ್ರಿಯನಾದ ನೀನು ನನಗೆ ಪ್ರಿಯವನ್ನುಂಟುಮಾಡಲು ಎಲ್ಲವನ್ನೂ ಸಹಿಸಿಕೊಳ್ಳಲು ಯೋಗ್ಯನಾಗಿರುವೆ' ಎಂದು ಅರ್ಥವಾಗುತ್ತೆ. ಮೊದಲು ಕೊಟ್ಟ 'ತಂದೆ-ಮಗನ', 'ಸ್ನೇಹಿತ-ಸ್ನೇಹಿತನ' ದೃಷ್ಟಾಂತಗಳಂತೆ ಮೂರನೆಯದು ಉಪಮಾನವಲ್ಲ.]

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥**

ದೇವ (ಎಲೈ ದೇವನೆ) ಅದೃಷ್ಟಪೂರ್ವಂ (ಹಿಂದೆ ಎಂದಿಗೂ ನೋಡದೇ ಇರುವ) [ವಿಶ್ವರೂಪಂ (ವಿಶ್ವರೂಪವನ್ನು)] ದೃಷ್ಟ್ವಾ (ನೋಡಿ) ಹೃಷಿತಃ ಅಸ್ಮಿ (ಹರ್ಷಿತನಾಗಿರುವೆನು) ಭಯೇನ ಚ (ಮತ್ತು ಭಯದಿಂದ) ಮೇ (ನನ್ನ) ಮನಃ (ಮನಸ್ಸು) ಪ್ರವ್ಯಥಿತಂ (ಕ್ಲೇಶಗೊಂಡಿದೆ) ದೇವೇಶ (ಎಲೈ ದೇವೇಶನೆ) ಜಗನ್ನಿವಾಸ (ಎಲೈ ಜಗನ್ನಿವಾಸನೆ) ತತ್ ರೂಪಂ ಏವ (ಆ ರೂಪವನ್ನೇ) ಮೇ (ನನಗೆ) ದರ್ಶಯ (ತೋರಿಸು) ಪ್ರಸೀದ (ಪ್ರಸನ್ನನಾಗು).

**೪೫.** ಎಲೈ ದೇವ, ಹಿಂದೆ ಎಂದಿಗೂ ನೋಡದಿರುವ (ವಿಶ್ವರೂಪವನ್ನು) ನೋಡಿ ಹರ್ಷಿತನಾಗಿರುವೆನು ಮತ್ತು ಭಯದಿಂದ ನನ್ನ ಮನಸ್ಸು ಕ್ಲೇಶಗೊಂಡಿದೆ. ಎಲೈ ದೇವೇಶ, ಆ ರೂಪವನ್ನೇ[1] ನನಗೆ ತೋರಿಸು; ಎಲೈ ಜಗನ್ನಿವಾಸ, ಪ್ರಸನ್ನನಾಗು.

[1] ನನ್ನ ಸಖನಾಗಿದ್ದ ಆ ರೂಪವನ್ನೇ (ಶ್ರೀಶಂಕರ). ನಿನ್ನ ಸುಪ್ರಸನ್ನವಾದ ರೂಪವನ್ನೇ (ಶ್ರೀರಾಮಾನುಜ).

**ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥**

ಅಹಂ (ನಾನು) ತ್ವಾಂ (ನಿನ್ನನ್ನು) ತಥಾ ಏವ (ಮೊದಲಿನಂತೆಯೇ) ಕಿರೀಟಿನಂ (ಕಿರೀಟವುಳ್ಳವನನ್ನಾಗಿ) ಗದಿನಂ (ಗದೆಯುಳ್ಳವನನ್ನಾಗಿ) ಚಕ್ರಹಸ್ತಂ (ಚಕ್ರಪಾಣಿಯನ್ನಾಗಿ) ದ್ರಷ್ಟುಂ (ನೋಡಲು) ಇಚ್ಛಾಮಿ (ಇಚ್ಛಿಸುತ್ತೇನೆ) ಸಹಸ್ರಬಾಹೋ (ಎಲೈ ಸಹಸ್ರಬಾಹುವೆ) ವಿಶ್ವಮೂರ್ತೇ (ಎಲೈ ವಿಶ್ವಮೂರ್ತಿಯೆ) ತೇನ (ಆ) ಚತುರ್ಭುಜೇನ (ಚತುರ್ಭುಜಗಳುಳ್ಳ) ರೂಪೇಣ ಏವ (ರೂಪದಿಂದಲೇ) ಭವ (ಇರು).

**೪೬.** ಎಲೈ ಸಹಸ್ರಬಾಹು, ಮೊದಲಿನಂತೆ ಕಿರೀಟಧಾರಿಯೂ, ಗದಾಧರನೂ ಚಕ್ರಪಾಣಿಯೂ ಆಗಿ ಇರುವ ನಿನ್ನನ್ನು ನೋಡಲು ಇಚ್ಛಿಸು

ತ್ತೇನೆ. ಎಲೈ ವಿಶ್ವಮೂರ್ತಿ, ಚತುರ್ಭುಜವುಳ್ಳ ಅದೇ[1] ರೂಪದಿಂದಲೇ ಇರುವವನಾಗು.

[1] ವಸುದೇವನ ಪುತ್ರನ ರೂಪದಿಂದ.

ಶ್ರೀಭಗವಾನ್ ಉವಾಚ

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಅರ್ಜುನ (ಎಲೈ ಅರ್ಜುನನೆ) ಪ್ರಸನ್ನೇನ(ಪ್ರಸನ್ನನಾದ) ಮಯಾ(ನನ್ನಿಂದ) ಆತ್ಮಯೋಗಾತ್(ಆತ್ಮ ಯೋಗದ ದೆಸೆಯಿಂದ) ಮೇ(ನನ್ನ) ಇದಂ(ಈ) ತೇಜೋಮಯಂ(ತೇಜೋಮಯ ವಾದ) ವಿಶ್ವಂ (ಸಂಪೂರ್ಣವಾದ) ಅನಂತಂ (ಅನಂತವಾದ) ಆದ್ಯಂ (ಆದ್ಯವಾದ) ಪರಂ ರೂಪಂ (ವಿಶ್ವರೂಪವು) ದರ್ಶಿತಂ (ತೋರಿಸಲ್ಪಟ್ಟಿತು) ಯತ್ (ಯಾವ ರೂಪವು) ತ್ವದನ್ಯೇನ (ನಿನ್ನ ಹೊರತು) ನ ದೃಷ್ಟಪೂರ್ವಂ (ಯಾರಿಂದಲೂ ಹಿಂದೆ ನೋಡಲ್ಪಡಲಿಲ್ಲ).

ಶ್ರೀಕೃಷ್ಣನು ಹೇಳಿದನು

೪೭. ಎಲೈ ಅರ್ಜುನ, ಪ್ರಸನ್ನನಾದ ನಾನು ತೇಜೋಮಯವೂ ಸಂಪೂರ್ಣವೂ ಅನಂತವೂ ಆದ್ಯವೂ[1] ಆದ ಈ ವಿಶ್ವರೂಪವನ್ನು ನನ್ನ ಯೋಗದ ಸಾಮರ್ಥ್ಯದಿಂದ ತೋರಿಸಿದೆನು. ನಿನ್ನ ಹೊರತು ಬೇರೆ ಯಾರೂ ಹಿಂದೆ ಇದನ್ನು ನೋಡಿರಲಿಲ್ಲ.

[1] ಆದಿಯಿಂದಲೂ ಇರುವುದು.

**ನ ವೇದಯಜ್ಞಾಧ್ಯಯನೈರ್ನ ದಾನೈ-**
**ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥**

ಕುರುಪ್ರವೀರ (ಎಲೈ ಕುರುವೀರನೆ) ವೇದ-ಯಜ್ಞಾಧ್ಯಯನೈಃ (ವೇದಾಧ್ಯ ಯನದಿಂದಾಗಲೀ, ಯಜ್ಞಜ್ಞಾನದಿಂದಾಗಲೀ) ಏವಂರೂಪಃ (ಈ ವಿಶ್ವರೂಪವುಳ್ಳ) ಅಹಂ (ನಾನು) ನೃಲೋಕೇ (ಮನುಷ್ಯಲೋಕದಲ್ಲಿ) ತ್ವದನ್ಯೇನ (ನಿನ್ನ ಹೊರತು ಬೇರೆ ಯಾವನಿಂದಲೂ) ದ್ರಷ್ಟುಂ (ನೋಡಲು) ನ ಶಕ್ಯಃ (ಸಾಧ್ಯನಲ್ಲ) ದಾನೈಃ

(ದಾನಗಳಿಂಧಲೂ) ನ(ನೋಡಲು ಸಾಧ್ಯನಲ್ಲ) ಕ್ರಿಯಾಭಿಃ ಚ(ಮತ್ತು ಶ್ರೌತಕರ್ಮ ಗಳಿಂದಲೂ) ನ(ನೋಡಲು ಸಾಧ್ಯನಲ್ಲ) ಉಗ್ರೈಃ(ಉಗ್ರವಾದ) ತಪೋಭಿಃ(ತಪಸ್ಸು ಗಳಿಂದ) ನ(ನೋಡಲು ಸಾಧ್ಯನಲ್ಲ).

೪೮. ಎಲೈ ಕುರುವೀರನೆ, ವೇದಾಧ್ಯಯನ ಯಜ್ಞಜ್ಞಾನ ದಾನಗಳು ಶ್ರೌತಕರ್ಮಗಳು ಮತ್ತು ಉಗ್ರವಾದ ತಪಸ್ಸುಗಳು— ಇವುಗಳಿಂದಲೂ ಈ ವಿಶ್ವರೂಪವುಳ್ಳ ನನ್ನನ್ನು ಮನುಷ್ಯಲೋಕದಲ್ಲಿ ನೋಡಲು ಬೇರೆ ಯಾರಿಗೂ ಸಾಧ್ಯವಿಲ್ಲ.

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥**

ಈದೃಕ್ (ಇಂತಹ) ಮಮ (ನನ್ನ) ಘೋರಂ (ಘೋರವಾದ) ರೂಪಂ (ರೂಪವನ್ನು) ದೃಷ್ಟ್ವಾ (ನೋಡಿ) ತೇ (ನಿನಗೆ) ವ್ಯಥಾ ಮಾ (ಭಯವಾಗದಿರಲಿ) ವಿಮೂಢಭಾವಃ ಚ ಮಾ (ಮತ್ತು ಭ್ರಾಂತಿಯು ಆಗದಿರಲಿ) ವ್ಯಪೇತ-ಭೀಃ (ಭಯ ವನ್ನು ಬಿಟ್ಟವನಾಗಿ) ಪ್ರೀತಮನಾಃ ಚ (ಪ್ರಸನ್ನಚಿತ್ತನಾಗಿ) ಪುನಃ (ಪುನಃ) ತ್ವಂ (ನೀನು) ಮೇ (ನನ್ನ) ಇದಂ (ಈ) ತತ್ (ಅ) ರೂಪಂ ಏವ (ರೂಪವನ್ನೇ) ಪ್ರಪಶ್ಯ (ನೋಡು).

೪೯. ಇಂತಹ ಘೋರವಾದ ರೂಪವನ್ನು ನೋಡಿ ನಿನಗೆ ಭಯವೂ ಭ್ರಾಂತಿಯೂ ಆಗದಿರಲಿ. ನೀನು ಭಯವನ್ನು ತ್ಯಜಿಸಿ ಪ್ರಸನ್ನಚಿತ್ತನಾಗಿ ಪುನಃ ನನ್ನ ಅದೇ ಈ ರೂಪವನ್ನು[1] ನೋಡು.

[1] ಚತುರ್ಭುಜವುಳ್ಳ ಶಂಖಚಕ್ರಗದೆಗಳನ್ನು ಧರಿಸಿರುವ (ಅರ್ಜುನನಿಗೆ) ಇಷ್ಟವಾದ ರೂಪ (ಶ್ರೀಶಂಕರ).

ಸಂಜಯ ಉವಾಚ

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)—ಇತಿ (ಹೀಗೆ) ವಾಸು-ದೇವಃ (ಶ್ರೀಕೃಷ್ಣನು) ಅರ್ಜುನಂ (ಅರ್ಜುನನ್ನು ಕುರಿತು) ತಥಾ ಉಕ್ತ್ವಾ (ಹಾಗೆಂದು

ಹೇಳಿ) ಭೂಯಃ (ಪುನಃ) ಸ್ವಕಂ (ತನ್ನ) ರೂಪಂ (ರೂಪವನ್ನು) ದರ್ಶಯಾಮಾಸ (ತೋರಿಸಿದನು) ಮಹಾತ್ಮಾ (ಮಹಾತ್ಮನಾದ ಶ್ರೀಕೃಷ್ಣನು) ಸೌಮ್ಯವಪುಃ ಭೂತ್ವಾ (ಸೌಮ್ಯಶರೀರವುಳ್ಳವನಾಗಿ) ಪುನಃ (ಪುನಃ) ಭೀತಂ ಏನಂ (ಭೀತಿಗೊಂಡಿರುವ ಇವನನ್ನು) ಆಶ್ವಾಸಯಾಮಾಸ ಚ (ಸಂತೈಸಿದನು).

### ಸಂಜಯನು ಹೇಳಿದನು

೫೦. ಹೀಗೆ ಅರ್ಜುನನನ್ನು ಕುರಿತು ಶ್ರೀಕೃಷ್ಣನು ಹಾಗೆಂದು ಹೇಳಿ ಪುನಃ ತನ್ನ ರೂಪವನ್ನು[1] ತೋರಿಸಿದನು. ಮಹಾತ್ಮನಾದ ಶ್ರೀಕೃಷ್ಣನು ಸೌಮ್ಯವಾದ ಶರೀರವುಳ್ಳವನಾಗಿ ಪುನಃ ಭೀತನಾದ ಅವನನ್ನು ಸಂತೈಸಿದನು.

[1] ಚತುರ್ಭುಜರೂಪವನ್ನು.

### ಅರ್ಜುನ ಉವಾಚ

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು) -- ಜನಾರ್ದನ (ಎಲೈ ಜನಾರ್ದನನೆ) ತವ (ನಿನ್ನ) ಇದಂ (ಈ) ಸೌಮ್ಯಂ (ಸೌಮ್ಯವಾದ) ಮಾನುಷಂ ರೂಪಂ (ಮನುಷ್ಯರೂಪವನ್ನು) ದೃಷ್ಟ್ವಾ (ನೋಡಿ) ಇದಾನೀಂ (ಈಗ) ಅಹಂ (ನಾನು) ಸಚೇತಾಃ ಸಂವೃತ್ತಃ ಅಸ್ಮಿ (ಪ್ರಸನ್ನಚಿತ್ತನಾಗಿರುವೆನು) ಪ್ರಕೃತಿಂ (ಸ್ವಸ್ಥತೆಯನ್ನು) ಗತಃ [ಅಸ್ಮಿ] (ಹೊಂದಿರುವವನಾಗಿರುವೆನು).

### ಅರ್ಜುನನು ಹೇಳಿದನು

೫೧. ಎಲೈ ಜನಾರ್ದನ, ನಿನ್ನ ಸೌಮ್ಯವಾದ ಈ ಮನುಷ್ಯರೂಪವನ್ನು[1] ನೋಡಿ ಈಗ ನಾನು ಪ್ರಸನ್ನಚಿತ್ತವುಳ್ಳವನಾಗಿ ಸ್ವಾಸ್ಥ್ಯವನ್ನು ಪಡೆದಿರುತ್ತೇನೆ.

[1] ಶ್ರೀಕೃಷ್ಣನ ರೂಪವು ಚತುರ್ಭುಜವುಳ್ಳದ್ದಾಗಿದ್ದರೂ ಅದು ಮಾನುಷವೆಂದೇ ಗ್ರಹಿಸಬೇಕು

### ಶ್ರೀಭಗವಾನ್ ಉವಾಚ

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಮಮ (ನನ್ನ) ಇದಂ (ಈ) ಸುದುರ್ದರ್ಶಂ (ದುರ್ದರ್ಶವಾದ) ಯತ್ (ಯಾವ) ರೂಪಂ (ರೂಪವನ್ನು) ದೃಷ್ಟವಾನ್ ಅಸಿ (ನೋಡಿದೆಯೋ) ದೇವಾಃ ಅಪಿ (ದೇವತೆಗಳೂ ಕೂಡ)

ನಿತ್ಯಂ (ಯಾವಾಗಲೂ) ಅಸ್ಯ ರೂಪಸ್ಯ (ಈ ವಿಶ್ವರೂಪದ) ದರ್ಶನಕಾಂಕ್ಷಿಣಃ (ದರ್ಶನವನ್ನು ಬಯಸುವವರು).

ಶ್ರೀಕೃಷ್ಣನು ಹೇಳಿದನು

**೫೨.** ದುರ್ದರ್ಶವಾದ ಈ ನನ್ನ ಯಾವ ರೂಪವನ್ನು ನೋಡಿದೆಯೋ ಈ ವಿಶ್ವರೂಪವನ್ನು ಯಾವಾಗಲೂ ಕಾಣಲು ದೇವತೆಗಳೂ ಕೂಡ ಬಯಸುತ್ತಿರುವರು.

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩ ॥**

ಯಥಾ (ಹೇಗೆ) ಮಾಂ (ನನ್ನನ್ನು) ದೃಷ್ಟವಾನ್ ಅಸಿ (ನೋಡಿದ್ದೀಯೋ) ಏವಂವಿಧಃ (ಈ ರೂಪವುಳ್ಳ) ಅಹಂ (ನಾನು) ವೇದೈಃ (ವೇದಗಳಿಂದ) ದ್ರಷ್ಟುಂ (ನೋಡಲು) ನ ಶಕ್ಯಃ (ಸಾಧ್ಯನಲ್ಲ) ತಪಸಾ (ತಪಸ್ಸಿನಿಂದ) ನ (ನೋಡಲು ಸಾಧ್ಯನಲ್ಲ) ದಾನೇನ (ದಾನದಿಂದ) ನ (ನೋಡಲು ಸಾಧ್ಯನಲ್ಲ) ಇಜ್ಯಯಾ ಚ (ಯಜ್ಞದಿಂದಲೂ) ನ (ನೋಡಲು ಸಾಧ್ಯನಲ್ಲ).

**೫೩.** ನೀನು ಯಾವ ಪ್ರಕಾರ ನನ್ನನ್ನು ನೋಡಿರುವೆಯೋ ಈ ರೂಪವುಳ್ಳ ನಾನು ವೇದಾಧ್ಯಯನದಿಂದಲೂ ತಪಸ್ಸಿನಿಂದಲೂ ದಾನದಿಂದಲೂ ಯಜ್ಞದಿಂದಲೂ ನೋಡಲು ಸಾಧ್ಯನಲ್ಲ.

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೫೪ ॥**

ಪರಂತಪ (ಎಲೈ ಪರಂತಪನೆ) ಅರ್ಜುನ (ಎಲೈ ಅರ್ಜುನನೆ) ತು (ಆದರೆ) ಅನನ್ಯಯಾ (ಅನನ್ಯವಾದ) ಭಕ್ತ್ಯಾ (ಭಕ್ತಿಯಿಂದ) ಏವಂವಿಧಃ (ಈ ವಿಧನಾದ) ಅಹಂ (ನಾನು) ತತ್ತ್ವೇನ (ತತ್ತ್ವದಿಂದ, ಯಥಾರ್ಥವಾಗಿ) ಜ್ಞಾತುಂ (ತಿಳಿದುಕೊಳ್ಳುವುದಕ್ಕೆ) ದ್ರಷ್ಟುಂ ಚ (ಸಾಕ್ಷಾತ್ಕರಿಸುವುದಕ್ಕೆ) ಪ್ರವೇಷ್ಟುಂ ಚ (ಮತ್ತು ಪ್ರವೇಶಿಸುವುದಕ್ಕೆ) ಶಕ್ಯಃ (ಸಾಧ್ಯನು).

**೫೪.** ಎಲೈ ಪರಂತಪ, ಅರ್ಜುನ, ಆದರೆ ಅನನ್ಯವಾದ ಭಕ್ತಿಯಿಂದ ಈ ವಿಧನಾದ[1] ನನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳಲು, ಸಾಕ್ಷಾತ್ಕರಿಸಲು ಮತ್ತು ಪ್ರವೇಶಿಸಲು[2] ಸಾಧ್ಯವು.

[1] ವಿಶ್ವರೂಪವೆಂಬ ಪ್ರಕಾರವುಳ್ಳ (ಶ್ರೀಶಂಕರ).

[2] ಮೋಕ್ಷವನ್ನು ಹೊಂದಲು (ಶ್ರೀಶಂಕರ).

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥ ೫೫ ॥**

ಪಾಂಡವ (ಎಲೈ ಅರ್ಜುನನೆ) ಯಃ (ಯಾವನು) ಮತ್ಕರ್ಮಕೃತ್ (ನನಗಾಗಿಯೇ ಕರ್ಮಗಳನ್ನು ಮಾಡುವನೋ) ಮತ್ಪರಮಃ (ನನ್ನನ್ನೇ ಪರಮಗತಿಯೆಂದು ತಿಳಿದಿರುವನೋ) ಮದ್ಭಕ್ತಃ (ನನ್ನ ಭಕ್ತನೋ) ಸಂಗವರ್ಜಿತಃ (ಸಂಗರಹಿತನೋ) ಸರ್ವಭೂತೇಷು ಚ (ಸಮಸ್ತಭೂತಗಳಲ್ಲಿ) ನಿರ್ವೈರಃ (ವೈರವಿಲ್ಲದವನೋ) ಸಃ (ಅವನು) ಮಾಂ (ನನ್ನನ್ನು) ಏತಿ (ಹೊಂದುತ್ತಾನೆ).

**೫೫.** ಎಲೈ ಅರ್ಜುನ, ಯಾವನು ನನಗಾಗಿಯೇ ಕರ್ಮಗಳನ್ನು ಮಾಡುವನೋ, ನನ್ನನ್ನೇ ಪರಮಗತಿಯೆಂದು ತಿಳಿದಿರುವನೋ, ನನ್ನ ಭಕ್ತನೋ,[1] ಸಂಗರಹಿತನೋ,[2] ಸಮಸ್ತಭೂತಗಳಲ್ಲಿ ವೈರವಿಲ್ಲದವನೋ ಅವನು ನನ್ನನ್ನೇ ಸೇರುತ್ತಾನೆ.

[1] ಎಲ್ಲಾ ಪ್ರಕಾರಗಳಿಂದಲೂ ಸಂಪೂರ್ಣ ಮನಸ್ಸಿನಿಂದಲೂ ಸರ್ವೋತ್ಸಾಹದಿಂದಲೂ ಭಗವಂತನನ್ನೇ ಭಜಿಸುವವನು (ಶ್ರೀಶಂಕರ).

[2] ಧನ ಹೆಂಡತಿ ಮಕ್ಕಳು ಸ್ನೇಹಿತರು ನೆಂಟರು ಮೊದಲಾದವರಲ್ಲಿ ಆಸಕ್ತಿಯಿಲ್ಲದವನು (ಶ್ರೀಶಂಕರ).

[ಗೀತಾಶಾಸ್ತ್ರದಲ್ಲೆಲ್ಲಾ ಸಾರಭೂತವಾದ ಅರ್ಥವನ್ನು ನಿಃಶ್ರೇಯಸ್ಸೆಂಬ ಪ್ರಯೋಜನಕ್ಕಾಗಿ ಅನುಷ್ಠಾನಮಾಡಬೇಕೆಂದು (ಈ ಶ್ಲೋಕದಲ್ಲಿ) ಒಟ್ಟುಗೂಡಿಸಿ ಭಗವಂತನು ಹೇಳಿರುತ್ತಾನೆ—ಶ್ರೀಶಂಕರ.]

**ಇತಿ ವಿಶ್ವರೂಪದರ್ಶನಂ ನಾಮ ಏಕಾದಶೋಽಧ್ಯಾಯಃ ।**

ವಿಶ್ವರೂಪದರ್ಶನವೆಂಬ ಹನ್ನೊಂದನೆಯ ಅಧ್ಯಾಯವು ಮುಗಿಯಿತು.

# ಹನ್ನೆರಡನೆಯ ಅಧ್ಯಾಯ

## ಭಕ್ತಿಯೋಗ

ಅರ್ಜುನ ಉವಾಚ

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥ ೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)—ಏವಂ (ಈ ರೀತಿಯಾಗಿ) ಸತತಯುಕ್ತಾಃ (ಸತತಯುಕ್ತರಾದ) ಯೇ ಭಕ್ತಾಃ (ಯಾವ ಭಕ್ತರು) ತ್ವಾಂ (ನಿನ್ನನ್ನು) ಪರ್ಯುಪಾಸತೇ (ಉಪಾಸನೆಮಾಡುತ್ತಾರೆಯೋ) ಯೇ ಚ ಅಪಿ (ಮತ್ತು ಯಾರು) ಅವ್ಯಕ್ತಂ (ಅವ್ಯಕ್ತವಾದ) ಅಕ್ಷರಂ (ಅಕ್ಷರವನ್ನು) [ಉಪಾಸನೆಮಾಡುತ್ತಾರೆಯೋ] ತೇಷಾಂ (ಅವರಲ್ಲಿ) ಕೇ ಯೋಗವಿತ್ತಮಾಃ (ಶ್ರೇಷ್ಠರಾದ ಯೋಗವಿದರು ಯಾರು).

ಅರ್ಜುನನು ಹೇಳಿದನು

೧. ಈ ರೀತಿಯಲ್ಲಿ[1] ಸತತಯುಕ್ತರಾಗಿ[2] ಯಾವ ಭಕ್ತರು ನಿನ್ನನ್ನು[3] ಉಪಾಸನೆಮಾಡುತ್ತಾರೆಯೋ ಮತ್ತು ಯಾರು ಅವ್ಯಕ್ತವಾದ ಅಕ್ಷರವನ್ನು[4] ಉಪಾಸನೆಮಾಡುತ್ತಾರೆಯೋ—ಅವರಲ್ಲಿ ಯೋಗವನ್ನು ಅತಿಶಯವಾಗಿ ತಿಳಿದವರು ಯಾರು?

[1] ಹಿಂದಿನ ಶ್ಲೋಕದಲ್ಲಿ ಮತ್ಕರ್ಮಕೃತ್ ಎಂದು ಮೊದಲಾಗಿ ಹೇಳಿರುವ ರೀತಿಯಲ್ಲಿ.

[2] ನಿರಂತರವಾಗಿ ಭಗವಂತನ ಕರ್ಮವೇ ಮೊದಲಾದ ವಿಷಯಗಳಲ್ಲಿ ಸಮಾಹಿತರಾಗಿ (ಶ್ರೀಶಂಕರ).

[3] ವಿಶ್ವರೂಪವನ್ನು.

[4] ಯಾವ ಉಪಾಧಿಗಳೂ ಇಲ್ಲದೆ ಇಂದ್ರಿಯಗಳಿಗೆ ಅಗೋಚರವಾದ ಬ್ರಹ್ಮ (ಶ್ರೀಶಂಕರ).

ಶ್ರೀಭಗವಾನ್ ಉವಾಚ

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥ ೨ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಯೇ (ಯಾರು) ಮಯಿ (ನನ್ನಲ್ಲಿ) ಮನಃ (ಮನಸ್ಸನ್ನು) ಆವೇಶ್ಯ (ನಿಲ್ಲಿಸಿ) ನಿತ್ಯಯುಕ್ತಾಃ (ನಿತ್ಯ

ಯುಕ್ತರಾಗಿ) ಪರಯಾ (ಪರಮವಾದ) ಶ್ರದ್ಧಯಾ ಉಪೇತಾಃ (ಶ್ರದ್ಧೆಯಿಂದ ಕೂಡಿದವರಾಗಿ) ಮಾಂ (ನನ್ನನ್ನು) ಉಪಾಸತೇ (ಉಪಾಸನೆಮಾಡುತ್ತಾರೆಯೋ) ತೇ (ಅವರು) ಯುಕ್ತತಮಾಃ (ಯುಕ್ತತಮರೆಂದು) ಮೇ (ನನ್ನ) ಮತಾಃ (ಮತವು).

ಶ್ರೀಕೃಷ್ಣನು ಹೇಳಿದನು

೨. ಯಾರು ನನ್ನಲ್ಲಿ[1] ಮನಸ್ಸನ್ನು ನಿಲ್ಲಿಸಿ, ನಿತ್ಯಯುಕ್ತರಾಗಿ, ಪರಮ ಶ್ರದ್ಧೆಯಿಂದ ಕೂಡಿದವರಾಗಿ ನನ್ನನ್ನು ಉಪಾಸನೆಮಾಡುತ್ತಾರೆಯೋ ಅವರು ಯುಕ್ತತಮರೆಂದು ನನ್ನ ಮತ.

1 ವಿಶ್ವರೂಪನಾದ ಪರಮೇಶ್ವರನಲ್ಲಿ (ಶ್ರೀಶಂಕರ).

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ ೩ ॥**
**ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥ ೪ ॥**

ತು (ಆದರೆ) ಯೇ (ಯಾರು) ಸರ್ವತ್ರ (ಎಲ್ಲಾ ಕಾಲದಲ್ಲಿಯೂ) ಸಮಬುದ್ಧಯಃ (ಸಮಬುದ್ಧಿಯುಳ್ಳವರಾಗಿ) ಸರ್ವಭೂತಹಿತೇ ರತಾಃ (ಸರ್ವಪ್ರಾಣಿಗಳ ಹಿತದಲ್ಲಿ ನಿರತರಾಗಿ) ಇಂದ್ರಿಯಗ್ರಾಮಂ (ಇಂದ್ರಿಯಸಮುದಾಯವನ್ನು) ಸಂನಿಯಮ್ಯ (ನಿಗ್ರಹಿಸಿಕೊಂಡು) ಅನಿರ್ದೇಶ್ಯಂ (ನಿರ್ದೇಶಿಸಲು ಅಶಕ್ಯವಾದ) ಅವ್ಯಕ್ತಂ (ಅವ್ಯಕ್ತವಾದ) ಸರ್ವತ್ರಗಂ (ಸರ್ವವ್ಯಾಪಿಯಾದ) ಅಚಿಂತ್ಯಂ (ಚಿಂತಿಸಲು ಅಸಾಧ್ಯವಾದ) ಕೂಟಸ್ಥಂ (ಕೂಟಸ್ಥವಾದ) ಅಚಲಂ (ಅಚಲವಾದ) ಧ್ರುವಂ (ಶಾಶ್ವತವಾದ) ಅಕ್ಷರಂ (ಅಕ್ಷರವನ್ನು) ಪರ್ಯುಪಾಸತೇ (ಉಪಾಸನೆಮಾಡುತ್ತಾರೆಯೋ) ತೇ (ಅವರು) ಮಾಂ ಏವ (ನನ್ನನ್ನೇ) ಪ್ರಾಪ್ನುವಂತಿ (ಹೊಂದುತ್ತಾರೆ).

೩-೪. ಆದರೆ ಇಂದ್ರಿಯಸಮುದಾಯವನ್ನು ನಿಗ್ರಹಿಸಿಕೊಂಡು ಎಲ್ಲಾ ಕಾಲದಲ್ಲಿಯೂ ಸಮಬುದ್ಧಿಯುಳ್ಳವರೂ[1] ಸರ್ವಪ್ರಾಣಿಗಳ ಹಿತದಲ್ಲಿ ನಿರತರೂ ಆದ ಯಾರು ನಿರ್ದೇಶಿಸಲು ಅಶಕ್ಯವೂ[2] ಅವ್ಯಕ್ತವೂ ಸರ್ವವ್ಯಾಪಿಯೂ ಚಿಂತಿಸಲು ಅಶಕ್ಯವೂ ಕೂಟಸ್ಥವೂ[3] ಅಚಲವೂ ಶಾಶ್ವತವೂ ಆದ ಅಕ್ಷರವನ್ನು ಉಪಾಸನೆಮಾಡುತ್ತಾರೆಯೋ ಅವರು ನನ್ನನ್ನೇ ಹೊಂದುತ್ತಾರೆ.

1 ಇಷ್ಟಾನಿಷ್ಟಗಳು ಪ್ರಾಪ್ತವಾದಾಗ ಸಮಾನವಾದ ಬುದ್ಧಿಯುಳ್ಳವರು (ಶ್ರೀಶಂಕರ).

2 ಅವ್ಯಕ್ತವಾಗಿರುವುದರಿಂದ ಮಾತಿಗೆ ಗೋಚರವಲ್ಲದ್ದು (ಶ್ರೀಶಂಕರ).

3 ಕೂಟ ಎಂದರೆ ಮಾಯೆ. ಮಾಯಾರೂಪವಾದ ಜಗತ್ತಿಗೆ ಸಾಕ್ಷಿಯಾಗಿರುವುದು ಅಥವಾ ಅಧಿಷ್ಠಾನವಾಗಿರುವುದು.

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥**

ಅವ್ಯಕ್ತಾಸಕ್ತಚೇತಸಾಂ ತೇಷಾಂ (ಅವ್ಯಕ್ತದಲ್ಲಿ ಆಸಕ್ತವಾದ ಚಿತ್ತವುಳ್ಳವರಿಗೆ) ಕ್ಲೇಶಃ (ಕ್ಲೇಶವು) ಅಧಿಕತರಃ (ಅಧಿಕತರವಾಗಿರುತ್ತದೆ) ಹಿ (ಏಕೆಂದರೆ) ದೇಹವದ್ಭಿಃ (ದೇಹವುಳ್ಳವರಿಂದ) ಅವ್ಯಕ್ತಾ ಗತಿಃ (ಅವ್ಯಕ್ತವೆಂಬ ಗತಿಯು) ದುಃಖಂ (ದುಃಖದಿಂದ) ಅವಾಪ್ಯತೇ (ಹೊಂದಲ್ಪಡುತ್ತದೆ).

೫. ಅವ್ಯಕ್ತದಲ್ಲಿ ಆಸಕ್ತವಾದ ಮನಸ್ಸುಳ್ಳವರಿಗೆ[1] ಕ್ಲೇಶವು ಅಧಿಕತರವಾಗಿರುತ್ತದೆ; ಏಕೆಂದರೆ ದೇಹವಂತರಿಗೆ[2] ಅವ್ಯಕ್ತವೆಂಬ ಗತಿಯು ದುರ್ಲಭವಾಗಿರುತ್ತದೆ.

1 ಅಕ್ಷರೋಪಾಸಕರಿಗೆ.
2 ದೇಹಾಭಿಮಾನವುಳ್ಳವರಿಗೆ.

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥**
**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭ ॥**

ಪಾರ್ಥ (ಎಲೈ ಅರ್ಜುನನೆ) ತು (ಆದರೆ) ಯೇ (ಯಾರು) ಸರ್ವಾಣಿ (ಎಲ್ಲಾ) ಕರ್ಮಾಣಿ (ಕರ್ಮಗಳನ್ನು) ಮಯಿ (ನನ್ನಲ್ಲಿ) ಸಂನ್ಯಸ್ಯ (ಅರ್ಪಿಸಿ) ಮತ್ಪರಾಃ (ಮತ್ಪರಾಯಣರಾಗಿ) ಅನನ್ಯೇನ ಯೋಗೇನ ಏವ (ಅನನ್ಯವಾದ ಯೋಗದಿಂದಲೇ) ಮಾಂ (ನನ್ನನ್ನು) ಧ್ಯಾಯಂತಃ (ಧ್ಯಾನಿಸುತ್ತಾ ಇರುವವರಾಗಿ) ಉಪಾಸತೇ (ಉಪಾಸನೆ ಮಾಡುತ್ತಾರೆಯೋ) ಮಯಿ (ನನ್ನಲ್ಲಿ) ಆವೇಶಿತಚೇತಸಾಂ ತೇಷಾಂ (ಇಡಲ್ಪಟ್ಟ ಮನಸ್ಸುಳ್ಳವರ) ನ ಚಿರಾತ್ (ಶೀಘ್ರವಾಗಿ) ಮೃತ್ಯುಸಂಸಾರಸಾಗರಾತ್ (ಮೃತ್ಯುಸಂಸಾರಸಾಗರದಿಂದ) ಅಹಂ (ನಾನು) ಸಮುದ್ಧರ್ತಾ (ಉದ್ಧಾರಮಾಡುವವನು) ಭವಾಮಿ (ಆಗುತ್ತೇನೆ).

೬–೭. ಎಲೈ ಅರ್ಜುನ, ಆದರೆ ಯಾರು ಸಮಸ್ತಕರ್ಮಗಳನ್ನು ನನ್ನಲ್ಲಿ ಅರ್ಪಿಸಿ ಮತ್ಪರರಾಗಿ[1] ಅನನ್ಯವಾದ ಯೋಗದಿಂದಲೇ ನನ್ನನ್ನು ಧ್ಯಾನಿಸುತ್ತಾ ಉಪಾಸನೆಮಾಡುತ್ತಾರೆಯೋ ನನ್ನಲ್ಲಿ ಮನಸ್ಸುಳ್ಳ ಅಂತಹವರನ್ನು ನಾನು ಮೃತ್ಯುಸಂಸಾರಸಾಗರದಿಂದ[2] ಶೀಘ್ರವಾಗಿ ಉದ್ಧಾರಮಾಡುತ್ತೇನೆ.

1 ಭಗವಂತನು ಯಾರಿಗೆ 'ಪರನೋ' ಅವನು ಮತ್ಪರನು.
2 ಮೃತ್ಯುವಿನಿಂದ ಕೂಡಿದ ಸಂಸಾರ ಮೃತ್ಯುಸಂಸಾರ.

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

ಮಯಿ ಏವ (ನನ್ನಲ್ಲಿಯೇ) ಮನಃ (ಮನಸ್ಸನ್ನು) ಆಧತ್ಸ್ವ (ಇಡು) ಮಯಿ (ನನ್ನಲ್ಲಿ) ಬುದ್ಧಿಂ (ಬುದ್ಧಿಯನ್ನು) ನಿವೇಶಯ (ಸೇರಿಸು) ಅತಃ ಊರ್ಧ್ವಂ (ಅನಂತರ) ಮಯಿ ಏವ (ನನ್ನಲ್ಲಿಯೇ) ನಿವಸಿಷ್ಯಸಿ (ನಿವಾಸಮಾಡುವೆ) [ಎಂಬುದರಲ್ಲಿ] ನ ಸಂಶಯಃ (ಸಂಶಯವಿಲ್ಲ).

೮. ನನ್ನಲ್ಲಿಯೇ[1] ಮನಸ್ಸನ್ನು[2] ಇಡು; ನನ್ನಲ್ಲಿ ಬುದ್ಧಿಯನ್ನು[3] ಸೇರಿಸು; ಅನಂತರ[4] ನನ್ನಲ್ಲಿಯೇ ನಿವಾಸಮಾಡುವೆ (ಎಂಬುದರಲ್ಲಿ) ಸಂಶಯವಿಲ್ಲ.

1 ವಿಶ್ವರೂಪನಾದ ಈಶ್ವರನಲ್ಲಿ (ಶ್ರೀಶಂಕರ).
2 ಸಂಕಲ್ಪ-ವಿಕಲ್ಪಾತ್ಮಕವಾದ ಮನಸ್ಸನ್ನು (ಶ್ರೀಶಂಕರ).
3 ಭಗವಂತನಲ್ಲಿ ಅಧ್ಯವಸಾಯವನ್ನು ಮಾಡುವ ಬುದ್ಧಿಯನ್ನು (ಶ್ರೀಶಂಕರ).
4 ಶರೀರಪಾತವಾದ ಮೇಲೆ (ಶ್ರೀಶಂಕರ).

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯ ॥**

ಧನಂಜಯ (ಅರ್ಜುನನೆ) ಅಥ (ಒಂದು ವೇಳೆ) ಮಯಿ (ನನ್ನಲ್ಲಿ) ಚಿತ್ತಂ (ಚಿತ್ತವನ್ನು) ಸ್ಥಿರಂ (ಸ್ಥಿರವಾಗಿ) ಸಮಾಧಾತುಂ (ಸಮಾಧಾನಮಾಡಲು) ನ ಶಕ್ನೋಷಿ (ಶಕ್ತನಾಗದಿದ್ದರೆ) ತತಃ (ಆಮೇಲೆ) ಅಭ್ಯಾಸಯೋಗೇನ (ಅಭ್ಯಾಸಯೋಗದಿಂದ) ಮಾಂ (ನನ್ನನ್ನು) ಆಪ್ತುಂ (ಹೊಂದುವುದಕ್ಕೆ) ಇಚ್ಛ (ಇಚ್ಛಿಸು).

೯. ಎಲೈ ಅರ್ಜುನ, ಒಂದು ವೇಳೆ ನನ್ನಲ್ಲಿ ಚಿತ್ತವನ್ನು ಸ್ಥಿರವಾಗಿ ಸಮಾಧಾನಮಾಡಲು ಶಕ್ತನಾಗದಿದ್ದರೆ ಅಭ್ಯಾಸಯೋಗದಿಂದ[1] ನನ್ನನ್ನು ಹೊಂದುವುದಕ್ಕೆ ಇಚ್ಛಿಸು.

1 ಚಿತ್ತವನ್ನು ಎಲ್ಲಾ ಕಡೆಯಿಂದಲೂ ಎಳೆದುಕೊಂಡು ಒಂದೇ ಆಲಂಬನದಲ್ಲಿ ನಿಲ್ಲಿಸುವುದು ಅಭ್ಯಾಸ; ಅದರ ಸಹಿತ (ಮನಸ್ಸನ್ನು) ಸಮಾಧಾನಗೊಳಿಸುವ ಲಕ್ಷಣವುಳ್ಳದ್ದು ಯೋಗ (ಶ್ರೀಶಂಕರ).

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ ೧೦ ॥**

ಅಭ್ಯಾಸೇ ಅಪಿ (ಅಭ್ಯಾಸದಲ್ಲಿಯೂ) ಅಸಮರ್ಥಃ ಅಸಿ (ಸಮರ್ಥನಾಗದಿದ್ದರೆ) ಮತ್ಕರ್ಮ-ಪರಮಃ (ನನಗಾಗಿ ಮಾಡುವ ಕರ್ಮಗಳಲ್ಲಿ ಪರಾಯಣನು)

ಭವ (ಆಗು) ಮದರ್ಥಂ (ನನಗಾಗಿ) ಕರ್ಮಾಣಿ (ಕರ್ಮಗಳನ್ನು) ಕುರ್ವನ್ ಅಪಿ (ಮಾಡುತ್ತಿದ್ದರೂ) ಸಿದ್ಧಿಂ (ಸಿದ್ಧಿಯನ್ನು) ಅವಾಪ್ಸ್ಯಸಿ (ಹೊಂದುತ್ತೀಯೆ).

೧೦. ಅಭ್ಯಾಸದಲ್ಲಿಯೂ (ನೀನು) ಸಮರ್ಥನಾಗದಿದ್ದರೆ ನನಗಾಗಿ ಮಾಡುವ ಕರ್ಮಗಳಲ್ಲಿ[1] ಪರಾಯಣನಾಗು; (ಹೀಗೆ) ನನಗಾಗಿ ಕರ್ಮಗಳನ್ನು ಮಾಡುತ್ತಿದ್ದರೂ ಸಿದ್ಧಿಯನ್ನು ಹೊಂದುತ್ತೀಯೆ.

1 ದೇವಾಲಯನಿರ್ಮಾಣ, ಉದ್ಯಾನನಿರ್ಮಾಣ, ಪ್ರದೀಪವನ್ನು ಹತ್ತಿಸುವುದು, ದೇವಾಲಯವನ್ನು ಗುಡಿಸುವುದು, ಸಾರಿಸುವುದು ಮೊದಲಾದವು (ಶ್ರೀರಾಮಾನುಜ).

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

ಅಥ (ಒಂದು ವೇಳೆ) ಏತತ್ ಅಪಿ (ಇದನ್ನೂ ಕೂಡ) ಕರ್ತುಂ (ಮಾಡಲು) ಅಶಕ್ತಃ ಅಸಿ (ಅಶಕ್ತನಾದರೆ) ತತಃ (ಹಾಗಾದರೆ) ಯತಾತ್ಮವಾನ್ (ಯತಾತ್ಮನಾಗಿ) ಮದ್ಯೋಗಂ (ನನ್ನ ಯೋಗವನ್ನು) ಆಶ್ರಿತಃ (ಆಶ್ರಯಿಸಿದವನಾಗಿ) ಸರ್ವ-ಕರ್ಮ-ಫಲ-ತ್ಯಾಗಂ (ಸರ್ವಕರ್ಮಗಳ ಫಲತ್ಯಾಗವನ್ನು) ಕುರು (ಮಾಡು).

೧೧. ಇದನ್ನೂ ಕೂಡ ಮಾಡಲು ಅಶಕ್ತನಾದರೆ, ಯತಾತ್ಮನಾಗಿ[1] ನನ್ನ ಯೋಗವನ್ನು[2] ಆಶ್ರಯಿಸಿದವನಾಗಿ ಸರ್ವಕರ್ಮಗಳ ಫಲಗಳನ್ನು ತ್ಯಾಗಮಾಡು.

1 ಚಿತ್ತವನ್ನು ನಿಗ್ರಹಿಸಿದವನಾಗಿ.
2 ಭಗವಂತನಲ್ಲಿ ಸರ್ವಕರ್ಮಗಳ ಅರ್ಪಣರೂಪವಾದ ಯೋಗವನ್ನು.

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥ ೧೨ ॥**

ಹಿ (ಏಕೆಂದರೆ) ಅಭ್ಯಾಸಾತ್ (ಅಭ್ಯಾಸಕ್ಕಿಂತಲೂ) ಜ್ಞಾನಂ (ಜ್ಞಾನವು) ಶ್ರೇಯಃ (ಶ್ರೇಯಸ್ಕರವಾದದ್ದು) ಜ್ಞಾನಾತ್ (ಜ್ಞಾನಕ್ಕಿಂತಲೂ) ಧ್ಯಾನಂ (ಧ್ಯಾನವು) ವಿಶಿಷ್ಯತೇ (ಉತ್ತಮವಾಗಿರುವುದು) ಧ್ಯಾನಾತ್ (ಧ್ಯಾನಕ್ಕಿಂತ) ಕರ್ಮಫಲತ್ಯಾಗಃ (ಕರ್ಮಫಲತ್ಯಾಗವು) [ಉತ್ತಮವು] ತ್ಯಾಗಾತ್ ಅನಂತರಂ (ತ್ಯಾಗದಿಂದ ಕೂಡಲೇ) ಶಾಂತಿಃ (ಶಾಂತಿಯು) [ಉಂಟಾಗುತ್ತದೆ].

೧೨. ಏಕೆಂದರೆ ಅಭ್ಯಾಸಕ್ಕಿಂತಲೂ ಜ್ಞಾನವು ಶ್ರೇಯಸ್ಕರವಾದದ್ದು; ಜ್ಞಾನಕ್ಕಿಂತಲೂ ಧ್ಯಾನವು ಉತ್ತಮವಾಗಿರುವುದು ; ಧ್ಯಾನಕ್ಕಿಂತ ಕರ್ಮಫಲತ್ಯಾಗವು (ಉತ್ತಮವು); ತ್ಯಾಗದಿಂದ ಕೂಡಲೇ ಶಾಂತಿಯು (ಉಂಟಾಗುತ್ತದೆ).

[ಈ ಶ್ಲೋಕದಲ್ಲಿ ಸರ್ವಕರ್ಮಫಲತ್ಯಾಗವನ್ನು ಹೊಗಳಿದೆ.]

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**
**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ**
**ಸ ಮೇ ಪ್ರಿಯಃ ॥ ೧೪ ॥**

ಯಃ (ಯಾವನು) ಸರ್ವಭೂತಾನಾಂ (ಸರ್ವಪ್ರಾಣಿಗಳಲ್ಲಿ) ಅದ್ವೇಷ್ಟಾ (ದ್ವೇಷರಹಿತನೋ) ಮೈತ್ರಃ (ಮಿತ್ರಭಾವದಿಂದ ಇರುವವನೋ) ಕರುಣಃ (ಕರುಣೆಯುಳ್ಳವನೋ) ನಿರ್ಮಮಃ ಏವ ಚ (ಮಮತೆಯಿಲ್ಲದವನೋ) ನಿರಹಂಕಾರಃ (ಅಹಂಕಾರವಿಲ್ಲದವನೋ) ಸಮದುಃಖಸುಖಃ (ಸುಖದುಃಖಗಳಲ್ಲಿ ಸಮಾನವಾಗಿರುವವನೋ) ಕ್ಷಮೀ (ಕ್ಷಮಾಶೀಲನೋ) ಸತತಂ (ಯಾವಾಗಲೂ) ಸಂತುಷ್ಟಃ (ಸಂತುಷ್ಟನೋ) ಯೋಗೀ (ಯೋಗಿಯೋ) ಯತಾತ್ಮಾ (ಯತಾತ್ಮನೋ) ದೃಢ-ನಿಶ್ಚಯಃ (ದೃಢವಾದ ನಿಶ್ಚಯವುಳ್ಳವನೋ) ಮಯಿ (ನನ್ನಲ್ಲಿ) ಅರ್ಪಿತಮನೋ-ಬುದ್ಧಿಃ (ಅರ್ಪಿತವಾದ ಮನೋಬುದ್ಧಿಗಳುಳ್ಳವನೋ) ಮದ್ಭಕ್ತಃ (ನನ್ನ ಭಕ್ತನೋ) ಸಃ (ಅವನು) ಮೇ (ನನಗೆ) ಪ್ರಿಯಃ (ಪ್ರಿಯನು).

**೧೩-೧೪.** ಯಾವನು ಸರ್ವಪ್ರಾಣಿಗಳನ್ನು ದ್ವೇಷಿಸುವುದಿಲ್ಲವೋ, ಮಿತ್ರಭಾವದಿಂದ ಕೂಡಿರುವನೋ, ಕರುಣೆಯುಳ್ಳವನೋ, ಅಹಂಕಾರಮಮಕಾರಗಳಿಲ್ಲದವನೋ, ಸುಖದುಃಖಗಳಲ್ಲಿ ಸಮಾನವಾಗಿರುವವನೋ, ಕ್ಷಮಾಶೀಲನೋ, ಯಾವಾಗಲೂ ಸಂತುಷ್ಟನೋ, ಯೋಗಿಯೋ, ಯತಾತ್ಮನೋ, ದೃಢನಿಶ್ಚಯನೋ,[1] ನನ್ನಲ್ಲಿ ಅರ್ಪಿಸಲ್ಪಟ್ಟ ಮನೋಬುದ್ಧಿಗಳುಳ್ಳವನೋ, ನನ್ನ ಭಕ್ತನೋ—ಅವನು ನನಗೆ ಪ್ರಿಯನು.

[1] ಆತ್ಮತತ್ತ್ವದ ವಿಷಯದಲ್ಲಿ ದೃಢವಾದ ನಿಶ್ಚಯವುಳ್ಳವನು (ಶ್ರೀಶಂಕರ).

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ**
**ಪ್ರಿಯಃ ॥ ೧೫ ॥**

ಯಸ್ಮಾತ್ (ಯಾವನಿಂದ) ಲೋಕಃ (ಜನವು) ನ ಉದ್ವಿಜತೇ (ಉದ್ವೇಗವನ್ನು ಹೊಂದುವುದಿಲ್ಲವೋ) ಯಃ ಚ (ಮತ್ತು ಯಾವನು) ಲೋಕಾತ್ (ಲೋಕದಿಂದ) ನ ಉದ್ವಿಜತೇ (ಉದ್ವೇಗವನ್ನು ಹೊಂದುವುದಿಲ್ಲವೋ) ಯಃ ಚ (ಮತ್ತು ಯಾವನು) ಹರ್ಷಾಮರ್ಷಭಯೋದ್ವೇಗೈಃ (ಹರ್ಷ ಅಸಹನೆ ಭಯ ಮತ್ತು ಉದ್ವೇಗ—ಇವುಗಳಿಂದ) ಮುಕ್ತಃ (ಬಿಡಲ್ಪಟ್ಟಿರುವನೋ) ಸಃ (ಅವನು) ಮೇ (ನನಗೆ) ಪ್ರಿಯಃ (ಪ್ರಿಯನು).

೧೫. ಯಾವನಿಂದ ಜನರು ಉದ್ವೇಗವನ್ನು ಹೊಂದುವುದಿಲ್ಲವೋ, ಯಾವನು ಜನರಿಂದ ಉದ್ವೇಗವನ್ನು ಹೊಂದುವುದಿಲ್ಲವೋ ಮತ್ತು ಯಾವನಿಗೆ ಹರ್ಷ ಅಸಹನೆ ಭಯ ಉದ್ವೇಗ — ಇವುಗಳು ಇಲ್ಲವೋ ಅವನು ನನಗೆ ಪ್ರಿಯನು.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥ ೧೬ ॥**

ಯಃ (ಯಾವ) ಮದ್ಭಕ್ತಃ (ನನ್ನ ಭಕ್ತನು) ಅನಪೇಕ್ಷಃ (ಅಪೇಕ್ಷಾಶೂನ್ಯನೋ) ಶುಚಿಃ (ಶುಚಿಯೋ) ದಕ್ಷಃ (ಸಮರ್ಥನೋ) ಉದಾಸೀನಃ (ಉದಾಸೀನನೋ) ಗತವ್ಯಥಃ (ವ್ಯಥೆಯಿಲ್ಲದಿರುವನೋ) ಸರ್ವಾರಂಭಪರಿತ್ಯಾಗೀ (ಸಮಸ್ತಕರ್ಮಗಳನ್ನು ತ್ಯಾಗಮಾಡಿರುವವನೋ) ಸಃ (ಅವನು) ಮೇ (ನನಗೆ) ಪ್ರಿಯಃ (ಪ್ರಿಯನು).

೧೬. ಯಾವ ನನ್ನ ಭಕ್ತನು ಅಪೇಕ್ಷಾಶೂನ್ಯನೋ[1] ಶುಚಿಯೋ[2] ಸಮರ್ಥನೋ[3] ಉದಾಸೀನನೋ[4] ವ್ಯಥೆಯಿಲ್ಲದವನೋ[5] ಸರ್ವಕರ್ಮಪರಿತ್ಯಾಗಿಯೋ[6] ಅವನು ನನಗೆ ಪ್ರಿಯನು.

[1] ದೇಹ ಇಂದ್ರಿಯ ವಿಷಯ ಮೊದಲಾದುವುಗಳ ಸಂಬಂಧದಲ್ಲಿ ಸ್ಪೃಹೆಯಿಲ್ಲದವನು (ಶ್ರೀಶಂಕರ). ಆತ್ಮವ್ಯತಿರಿಕ್ತವಾದ ವಸ್ತುಗಳಲ್ಲಿ ಅಪೇಕ್ಷೆಯಿಲ್ಲದವನು (ಶ್ರೀರಾಮಾನುಜ).

[2] ಹೊರಗಿನ ಮತ್ತು ಒಳಗಿನ ಶೌಚದಿಂದ ಕೂಡಿರುವವನು (ಶ್ರೀಶಂಕರ). ಶಾಸ್ತ್ರವಿಹಿತವಾದ ದಾರಿಯಿಂದ ಸಂಪಾದಿಸಿದ ಹಣದ ಮೂಲಕ ವೃದ್ಧಿಹೊಂದಿದ ಶರೀರವುಳ್ಳವನು (ಶ್ರೀರಾಮಾನುಜ).

[3] ಶಾಸ್ತ್ರೀಯಕರ್ಮಗಳಲ್ಲಿ ಸಮರ್ಥನಾದವನು (ಶ್ರೀರಾಮಾನುಜ).

[4] ಮಿತ್ರಾದಿಗಳ ಪಕ್ಷವನ್ನು ಸೇರದೇ ಇರುವವನು (ಶ್ರೀಶಂಕರ). ಇತರ ಕ್ರಿಯೆಗಳಲ್ಲಿ ಉದಾಸೀನನಾಗಿರುವವನು (ಶ್ರೀರಾಮಾನುಜ).

[5] ಭಯವಿಲ್ಲದವನು (ಶ್ರೀಶಂಕರ). ಶಾಸ್ತ್ರೀಯ ಕರ್ಮಗಳ ಅನುಷ್ಠಾನದಲ್ಲಿ ಶೀತೋಷ್ಣಾದಿಗಳ ಮೂಲಕ ಉಂಟಾಗುವ ವ್ಯಥೆಯಿಲ್ಲದವನು (ಶ್ರೀರಾಮಾನುಜ).

[6] ಇಲ್ಲಿ ಮತ್ತು ಪರಲೋಕದಲ್ಲಿ ಫಲವನ್ನು ಅನುಭವಿಸುವುದಕ್ಕೆ ಕಾಮದಿಂದ ಮಾಡುವ ಕರ್ಮಗಳನ್ನು ಬಿಟ್ಟಿರುವವನು (ಶ್ರೀಶಂಕರ). ಶಾಸ್ತ್ರೀಯವ್ಯತಿರಿಕ್ತವಾದ ಸರ್ವಕರ್ಮಗಳನ್ನೂ ಬಿಟ್ಟಿರುವವನು (ಶ್ರೀರಾಮಾನುಜ).

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥ ೧೭ ॥**

ಯಃ (ಯಾವನು) ನ ಹೃಷ್ಯತಿ (ಹರ್ಷಿಸುವುದಿಲ್ಲವೋ) ನ ದ್ವೇಷ್ಟಿ (ದ್ವೇಷಿಸುದಿಲ್ಲವೋ) ನ ಶೋಚತಿ (ಶೋಕಿಸುವುದಿಲ್ಲವೋ) ನ ಕಾಂಕ್ಷತಿ (ಇಚ್ಛಿಸುವುದಿಲ್ಲವೋ) ಯಃ (ಯಾವನು) ಶುಭಾಶುಭ-ಪರಿತ್ಯಾಗೀ (ಶುಭಾಶುಭಗಳನ್ನು ಪರಿತ್ಯಾಗಮಾಡಿರುತ್ತಾನೆಯೋ) ಭಕ್ತಿಮಾನ್ (ಭಕ್ತಿಯುಳ್ಳವನೋ) ಸಃ (ಅವನು) ಮೇ (ನನಗೆ) ಪ್ರಿಯಃ (ಪ್ರಿಯನು).

೧೭. ಯಾವನು ಹರ್ಷಿಸುವುದಿಲ್ಲವೋ[1] ದ್ವೇಷಿಸುವುದಿಲ್ಲವೋ[2] ಶೋಕಿಸುವುದಿಲ್ಲವೋ[3] ಇಚ್ಛಿಸುವುದಿಲ್ಲವೋ[4] ಶುಭಾಶುಭಗಳನ್ನು[5] ಪರಿತ್ಯಾಗಮಾಡಿರುತ್ತಾನೆಯೋ ಭಕ್ತಿಯುಳ್ಳವನೋ ಅವನು ನನಗೆ ಪ್ರಿಯನು.

1 ಇಷ್ಟವಾದದ್ದು ಬಂದರೆ ಹಿಗ್ಗದೇ ಇರುವುದು.

2 ಅಪ್ರಿಯವಾದದ್ದು ಒದಗಿದಾಗ ದ್ವೇಷಿಸದೇ ಇರುವುದು.

3 ಪ್ರಿಯವಿಯೋಗವುಂಟಾದಾಗ.

4 ಅಪ್ರಾಪ್ತವಾದುದನ್ನು.

5 ಶುಭಾಶುಭಕರ್ಮಗಳು.

ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।
ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ ೧೮ ॥
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥ ೧೯ ॥

ಶತ್ರೌ (ಶತ್ರುವಿನಲ್ಲಿ) ಮಿತ್ರೇ ಚ (ಮತ್ತು ಮಿತ್ರನಲ್ಲಿ) ಸಮಃ (ಸಮನಾಗಿರುವವನೂ) ತಥಾ (ಹಾಗೆಯೇ) ಮಾನಾಪಮಾನಯೋಃ (ಮಾನಾಪಮಾನಗಳಲ್ಲಿ) ಶೀತೋಷ್ಣಸುಖದುಃಖೇಷು ಚ (ಶೀತೋಷ್ಣಸುಖದುಃಖಗಳಲ್ಲಿ) ಸಮಃ (ಸಮನೂ) ಸಂಗವಿವರ್ಜಿತಃ (ಆಸಕ್ತಿಯನ್ನು ಬಿಟ್ಟಿರುವವನೂ) ತುಲ್ಯನಿಂದಾಸ್ತುತಿಃ (ನಿಂದೆ ಮತ್ತು ಸ್ತುತಿಗಳಲ್ಲಿ ಸಮನೂ) ಮೌನೀ (ಮೌನಿಯೂ) ಯೇನ ಕೇನಚಿತ್ (ಯತ್ಕಿಂಚಿತ್ ಲಾಭದಿಂದ) ಸಂತುಷ್ಟಃ (ಸಂತುಷ್ಟನೂ) ಅನಿಕೇತಃ (ನಿರ್ದಿಷ್ಟಸ್ಥಾನವಿಲ್ಲದವನೂ) ಸ್ಥಿರಮತಿಃ (ಸ್ಥಿರಬುದ್ಧಿಯುಳ್ಳವನೂ) ಭಕ್ತಿಮಾನ್ (ಭಕ್ತಿವಂತನೂ) [ಆದ] ನರಃ (ನರನು) ಮೇ (ನನಗೆ) ಪ್ರಿಯಃ (ಪ್ರಿಯನು).

೧೮-೧೯. ಶತ್ರುಮಿತ್ರರಲ್ಲಿ ಸಮಬುದ್ಧಿಯುಳ್ಳವನೂ, ಮಾನಾಪಮಾನಗಳಲ್ಲಿಯೂ ಶೀತೋಷ್ಣಸುಖದುಃಖಗಳಲ್ಲಿಯೂ ಸಮನಾಗಿರುವವನೂ ಆಸಕ್ತಿಯಿಲ್ಲದವನೂ ಸ್ತುತಿನಿಂದೆಗಳಲ್ಲಿ ಸಮಭಾವನೆಯುಳ್ಳವನೂ ಮೌನಿಯೂ ಯತ್ಕಿಂಚಿತ್ ಲಾಭದಲ್ಲಿ ಸಂತುಷ್ಟನೂ ನಿರ್ದಿಷ್ಟಸ್ಥಾನವಿಲ್ಲದವನೂ ಸ್ಥಿರ

ಬುದ್ಧಿಯುಳ್ಳವನೂ[1] ಭಕ್ತಿವಂತನೂ ಆದ ಮನುಷ್ಯನು ನನಗೆ ಪ್ರಿಯನು.

[1] ಪರಮಾರ್ಥವಿಷಯದಲ್ಲಿ (ಶ್ರೀಶಂಕರ).

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥**

ಯೇ ತು (ಯಾವ) ಭಕ್ತಾಃ (ಭಕ್ತರು) ಶ್ರದ್ದಧಾನಾಃ (ಶ್ರದ್ಧೆಯುಳ್ಳವರಾಗಿ) ಮತ್ಪರಮಾಃ (ಮತ್ಪರಾಯಣರಾಗಿ) ಯಥೋಕ್ತಂ (ಮೇಲೆ ಹೇಳಿದ) ಇದಂ (ಈ) ಧರ್ಮ್ಯಾಮೃತಂ (ಧರ್ಮ್ಯಾಮೃತವನ್ನು) ಪರ್ಯುಪಾಸತೇ (ಉಪಾಸನೆ ಮಾಡುತ್ತಾರೆಯೋ) ತೇ (ಅವರು) ಮೇ (ನನಗೆ) ಅತೀವ ಪ್ರಿಯಾಃ (ಅತ್ಯಂತ ಪ್ರಿಯರು).

೨೦. ಯಾವ ಭಕ್ತರು ಶ್ರದ್ಧೆಯುಳ್ಳವರಾಗಿ ಮತ್ಪರಾಯಣರಾಗಿ ಈ ಮೇಲೆ ಹೇಳಿದ[1] ಧರ್ಮ್ಯಾಮೃತವನ್ನು[2] ಉಪಾಸನೆಮಾಡುತ್ತಾರೆಯೋ ಅವರು ನನಗೆ ಅತ್ಯಂತ ಪ್ರಿಯರು.

[1] 'ಅದ್ವೇಷ್ಟಾ ಸರ್ವಭೂತಾನಾಂ' ಎಂಬ ಶ್ಲೋಕದಿಂದ (ಶ್ರೀಶಂಕರ).

[2] ಧರ್ಮವನ್ನು ಬಿಟ್ಟುಹೋಗದಿರುವುದು ಮತ್ತು ಅಮೃತತ್ವಕ್ಕೆ ಕಾರಣವಾದದ್ದು (ಶ್ರೀಶಂಕರ).

**ಇತಿ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ ।**

ಭಕ್ತಿಯೋಗವೆಂಬ ಹನ್ನೆರಡನೆಯ ಅಧ್ಯಾಯವು ಮುಗಿಯಿತು.

# ಹದಿಮೂರನೆಯ ಅಧ್ಯಾಯ

## ಕ್ಷೇತ್ರಕ್ಷೇತ್ರಜ್ಞಯೋಗ

ಶ್ರೀಭಗವಾನ್ ಉವಾಚ

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೧ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಕೌಂತೇಯ (ಎಲೈ ಅರ್ಜುನನೆ) ಇದಂ (ಈ) ಶರೀರಂ (ಶರೀರವು) ಕ್ಷೇತ್ರಂ ಇತಿ (ಕ್ಷೇತ್ರವು ಎಂದು) ಅಭಿಧೀಯತೇ (ಹೇಳಲ್ಪಡುತ್ತದೆ) ಯಃ (ಯಾವನು) ಏತತ್ (ಇದನ್ನು) ವೇತ್ತಿ (ತಿಳಿಯುತ್ತಾನೆಯೋ) ತಂ (ಅವನನ್ನು) ಕ್ಷೇತ್ರಜ್ಞಃ ಇತಿ (ಕ್ಷೇತ್ರಜ್ಞನು ಎಂದು) ತದ್ವಿದಃ (ಸ್ವರೂಪವನ್ನು ತಿಳಿದವರು) ಪ್ರಾಹುಃ (ಹೇಳುತ್ತಾರೆ).

ಶ್ರೀಕೃಷ್ಣನು ಹೇಳಿದನು

೧. ಎಲೈ ಅರ್ಜುನ, ಈ ಶರೀರವು ಕ್ಷೇತ್ರವೆಂದು[1] ಹೇಳಲ್ಪಡುತ್ತದೆ; ಇದನ್ನು ಯಾವನು ತಿಳಿಯುತ್ತಾನೆಯೋ ಅವನನ್ನು ಕ್ಷೇತ್ರಜ್ಞನೆಂದು (ಕ್ಷೇತ್ರ ಕ್ಷೇತ್ರಜ್ಞರ) ಸ್ವರೂಪವನ್ನು ತಿಳಿದವರು ಹೇಳುತ್ತಾರೆ.

[1] ಕ್ಷೇತ್ರವೆಂದರೆ ಹೊಲ ಅಥವಾ ಗದ್ದೆ. ಹೊಲಗದ್ದೆಗಳಲ್ಲಿ ಧಾನ್ಯಾದಿಗಳು ಬೆಳೆಯುವಂತೆ ಶರೀರದಲ್ಲಿಯೂ ಕರ್ಮಫಲ ಉಂಟಾಗುವುದರಿಂದ ಅದಕ್ಕೂ ಕ್ಷೇತ್ರವೆಂದು ಹೆಸರು.

[ತ್ರಿಗುಣಾತ್ಮಕವಾದ ಪ್ರಕೃತಿ ಸರ್ವಕಾರ್ಯಕರಣಗಳ ಮತ್ತು ವಿಷಯಗಳ ಆಕಾರದಿಂದ ಪರಿಣಾಮವನ್ನು ಹೊಂದಿ ಮನುಷ್ಯನಿಗೆ ಭೋಗಾಪವರ್ಗಗಳನ್ನು ಉಂಟುಮಾಡಲು ದೇಹೇಂದ್ರಿಯಗಳು ಮೊದಲಾದ ಆಕಾರದಿಂದ ಒಟ್ಟುಗೂಡಿದೆ. ಈ ತರದ ಸಂಘಾತವೇ ಶರೀರ—ಶ್ರೀಶಂಕರ.]

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥ ೨ ॥**

ಚ (ಮತ್ತು) ಭಾರತ (ಎಲೈ ಅರ್ಜುನನೆ) ಸರ್ವಕ್ಷೇತ್ರೇಷು (ಸಮಸ್ತಕ್ಷೇತ್ರಗಳಲ್ಲಿಯೂ) ಕ್ಷೇತ್ರಜ್ಞಂ (ಕ್ಷೇತ್ರಜ್ಞನು ಎಂದೂ) ಅಪಿ (ಕೂಡ) ಮಾಂ (ನನ್ನನ್ನು) ವಿದ್ಧಿ (ತಿಳಿ) ಕ್ಷೇತ್ರ-ಕ್ಷೇತ್ರಜ್ಞಯೋಃ (ಕ್ಷೇತ್ರ ಮತ್ತು ಕ್ಷೇತ್ರಜ್ಞರ) ಯತ್ ಜ್ಞಾನಂ (ಯಾವ ಜ್ಞಾನವುಂಟೋ) ತತ್ (ಅದು) ಜ್ಞಾನಂ (ಜ್ಞಾನವು ಎಂದು) ಮಮ (ನನ್ನ) ಮತಂ (ಮತವು).

೨. ಎಲೈ ಅರ್ಜುನ, ಸರ್ವಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನು ನಾನು ಎಂದು ತಿಳಿ. ಕ್ಷೇತ್ರ-ಕ್ಷೇತ್ರಜ್ಞರ ಯಾವ ಜ್ಞಾನವುಂಟೋ ಅದೇ ಜ್ಞಾನವೆಂದು[1] ನನ್ನ ಮತ.

[1] ಕ್ಷೇತ್ರ, ಕ್ಷೇತ್ರಜ್ಞನಂತೆ ತೋರುವ ಈಶ್ವರ—ಇವರ ಯಾಥಾತ್ಮ್ಯವನ್ನು ಬಿಟ್ಟರೆ ಜ್ಞಾನಕ್ಕೆ ವಿಷಯವಾದದ್ದು ಬೇರೊಂದು ಉಳಿಯುವುದಿಲ್ಲ.

**ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩ ॥**

ತತ್ (ಆ) ಕ್ಷೇತ್ರಂ (ಕ್ಷೇತ್ರವು) ಯತ್ ಚ (ಯಾವುದು) ಯಾದೃಕ್ ಚ (ಎಂತಹ ಪ್ರಕಾರವುಳ್ಳದ್ದು) ಯತ್ ವಿಕಾರಿ (ಯಾವ ವಿಕಾರವುಳ್ಳದ್ದು) ಯತಃ ಚ (ಯಾವುದರಿಂದ) ಯತ್ (ಯಾವುದು ಉಂಟಾಯಿತು) ಸಃ ಚ (ಮತ್ತು ಅವನು) ಯತ್ಪ್ರಭಾವಃ ಚ (ಎಂತಹ ಪ್ರಭಾವವುಳ್ಳವನು) ತತ್ (ಅದೆಲ್ಲವನ್ನೂ) ಸಮಾಸೇನ (ಸಂಕ್ಷೇಪವಾಗಿ) ಮೇ (ನನ್ನ ವಾಕ್ಯದಿಂದ) ಶೃಣು (ಕೇಳು).

೩. ಆ ಕ್ಷೇತ್ರವು ಯಾವುದು ಮತ್ತು ಎಂತಹ ಪ್ರಕಾರವುಳ್ಳದ್ದು? ಯಾವ ವಿಕಾರವುಳ್ಳದ್ದು? ಯಾವುದರಿಂದ ಯಾವುದು ಆಗುತ್ತದೆ? ಮತ್ತು ಅವನು[1] ಯಾವನು? ಎಂತಹ ಸ್ವಭಾವವುಳ್ಳವನು? ಅದೆಲ್ಲವನ್ನೂ ಸಂಕ್ಷೇಪವಾಗಿ ನನ್ನಿಂದ ಕೇಳು.

[1] ಕ್ಷೇತ್ರಜ್ಞನು.

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪ ॥**

[ಕ್ಷೇತ್ರಕ್ಷೇತ್ರಜ್ಞರ ಸ್ವರೂಪವು] ಋಷಿಭಿಃ (ಋಷಿಗಳಿಂದ) ಬಹುಧಾ (ಬಹುಪ್ರಕಾರವಾಗಿ) ಗೀತಂ (ಹಾಡಲ್ಪಟ್ಟಿದೆ) ವಿವಿಧೈಃ (ವಿವಿಧವಾದ) ಛಂದೋಭಿಃ (ಛಂದಸ್ಸುಗಳಿಂದ) ಪೃಥಕ್ (ಬೇರೆಬೇರೆಯಾಗಿ) [ಗೀತಂ (ಹಾಡಲ್ಪಟ್ಟಿದೆ)] ಚ (ಮತ್ತು) ಹೇತುಮದ್ಭಿಃ (ಹೇತುಗಳಿಂದ ಕೂಡಿದ) ವಿನಿಶ್ಚಿತೈಃ (ನಿಶ್ಚಯರೂಪವಾಗಿರುವ) ಬ್ರಹ್ಮಸೂತ್ರಪದೈಃ ಏವ (ಬ್ರಹ್ಮಸೂತ್ರಗಳ ಪದಗಳಿಂದಲೂ) [ಗೀತಂ (ಹೇಳಲ್ಪಟ್ಟಿದೆ)].

೪. (ಕ್ಷೇತ್ರಕ್ಷೇತ್ರಜ್ಞರ ಸ್ವರೂಪವನ್ನು) ಋಷಿಗಳು[1] ಬಹುಪ್ರಕಾರವಾಗಿ ಹಾಡಿದ್ದಾರೆ, ವಿವಿಧವಾದ ಛಂದಸ್ಸುಗಳು[2] ಬೇರೆಬೇರೆಯಾಗಿ ಹಾಡಿವೆ,

ಹೇತುಗಳಿಂದ ಕೂಡಿದ ಮತ್ತು ನಿಶ್ಚಯರೂಪವಾಗಿರುವ ಬ್ರಹ್ಮಸೂತ್ರಪದಗಳು[3] ಹೇಳಿವೆ.

[1] ವಸಿಷ್ಠಪರಾಶರಾದಿಗಳು.

[2] ಋಗಾದಿ ವೇದಗಳು.

[3] ಬ್ರಹ್ಮವನ್ನು ಸೂಚಿಸುವ ವಾಕ್ಯಗಳು ಬ್ರಹ್ಮಸೂತ್ರಗಳು; ಅವುಗಳಿಂದ ಬ್ರಹ್ಮವು ಪಡೆಯಲ್ಪಡುತ್ತದೆ, ತಿಳಿಯಲ್ಪಡುತ್ತದೆ; ಆದುದರಿಂದ ಅವು ಪದಗಳು (ಶ್ರೀಶಂಕರ). ಬ್ರಹ್ಮವನ್ನು ಪ್ರತಿಪಾದಿಸುವ ಸೂತ್ರರೂಪದಲ್ಲಿರುವ ಪದಗಳು ಎಂದರೆ ಶಾರೀರಿಕ ಸೂತ್ರಗಳು (ಶ್ರೀರಾಮಾನುಜ).

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯಗೋಚರಾಃ ॥ ೫ ॥**
**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೬ ॥**

ಮಹಾಭೂತಾನಿ (ಪಂಚಮಹಾಭೂತಗಳು) ಅಹಂಕಾರಃ (ಅಹಂಕಾರ) ಬುದ್ಧಿಃ (ಬುದ್ಧಿ) ಅವ್ಯಕ್ತಂ ಏವ ಚ (ಮತ್ತು ಅವ್ಯಕ್ತ) ದಶ ಇಂದ್ರಿಯಾಣಿ (ಹತ್ತು ಇಂದ್ರಿಯಗಳು) ಏಕಂ ಚ (ಮತ್ತು ಒಂದು, ಮನಸ್ಸು) ಪಂಚ ಇಂದ್ರಿಯಗೋಚರಾಃ ಚ (ಪಂಚೇಂದ್ರಿಯಗಳ ವಿಷಯಗಳು) ಇಚ್ಛಾ (ಇಚ್ಛೆ) ದ್ವೇಷಃ (ದ್ವೇಷ) ಸುಖಂ (ಸುಖ) ದುಃಖಂ (ದುಃಖ) ಸಂಘಾತಃ (ಸಂಘಾತ) ಚೇತನಾ (ಚೇತನ) ಧೃತಿಃ (ಧೃತಿ) ಏತತ್ (ಈ) ಸವಿಕಾರಂ (ವಿಕಾರದಿಂದ ಕೂಡಿದ) ಕ್ಷೇತ್ರಂ (ಕ್ಷೇತ್ರವು) ಸಮಾಸೇನ (ಸಂಕ್ಷೇಪದಿಂದ) ಉದಾಹೃತಂ (ಹೇಳಲ್ಪಟ್ಟಿತು).

೫-೬. ಪಂಚಮಹಾಭೂತಗಳು[1] ಅಹಂಕಾರ[2] ಬುದ್ಧಿ[3] ಅವ್ಯಕ್ತ[4] ಹತ್ತು ಇಂದ್ರಿಯಗಳು[5] ಮತ್ತು ಮನಸ್ಸು, ಐದು ಇಂದ್ರಿಯವಿಷಯಗಳು[6] ಇಚ್ಛೆ ದ್ವೇಷ ಸುಖ ದುಃಖ ಸಂಘಾತ[7] ಚೇತನ[8] ಧೃತಿ[8]—ಇದು ಕ್ಷೇತ್ರ. ವಿಕಾರದಿಂದ[9] ಕೂಡಿದ (ಇದು) ಸಂಕ್ಷೇಪವಾಗಿ (ನನ್ನಿಂದ) ಹೇಳಲ್ಪಟ್ಟಿತು.

[1] ಸರ್ವವಿಕಾರಗಳನ್ನು ವ್ಯಾಪಿಸಿಕೊಂಡಿರುವ (ಪೃಥಿವ್ಯಾದಿ) ಸೂಕ್ಷ್ಮಭೂತಗಳು (ಶ್ರೀಶಂಕರ).

[2] ಮಹಾಭೂತಗಳಿಗೆ ಕಾರಣವಾದದ್ದು, ನಾನು ಎಂಬ ಪ್ರತ್ಯಯದಿಂದ ಗೋಚರಿಸತಕ್ಕದ್ದು (ಶ್ರೀಶಂಕರ).

[3] ಅಹಂಕಾರಕ್ಕೆ ಕಾರಣವಾದ ಮತ್ತು ಅಧ್ಯವಸಾಯಲಕ್ಷಣವುಳ್ಳ ತತ್ತ್ವ (ಶ್ರೀಶಂಕರ). ಮಹತ್ತತ್ತ್ವ (ಶ್ರೀರಾಮಾನುಜ).

4 ಬುದ್ಧಿಗೆ ಕಾರಣವಾದದ್ದು; ಅವ್ಯಾಕೃತವೆಂಬ ಈಶ್ವರಶಕ್ತಿ (ಶ್ರೀಶಂಕರ). ಪ್ರಕೃತಿ (ಶ್ರೀರಾಮಾನುಜ).

5 ಪಂಚಜ್ಞಾನೇಂದ್ರಿಯಗಳು ಮತ್ತು ಪಂಚಕರ್ಮೇಂದ್ರಿಯಗಳು.

6 ಶಬ್ದಾದಿ ವಿಷಯಗಳು.

7 ದೇಹೇಂದ್ರಿಯಗಳ ಗುಂಪು (ಶ್ರೀಶಂಕರ).

8 ದೇಹೇಂದ್ರಿಯಗಳ ಗುಂಪಿನಲ್ಲಿ ವ್ಯಕ್ತವಾಗುವ ಅಂತಃಕರಣವೃತ್ತಿ ಕಾದ ಕಬ್ಬಿಣದಲ್ಲಿ ಅಗ್ನಿಯು ಕಾಣುವಂತೆ ಆತ್ಮಚೈತನ್ಯದ ರಸದಿಂದ ವ್ಯಾಪ್ತವಾಗಿರುವ ಅಂತಃಕರಣ ವೃತ್ತಿಯು ಚೇತನ.....ಶಿಥಿಲವಾಗುತ್ತಿರುವ ದೇಹೇಂದ್ರಿಯಗಳನ್ನು ಯಾವುದು ಎತ್ತಿ ಹಿಡಿಯುವುದೋ ಅದು ಧೃತಿ (ಶ್ರೀಶಂಕರ).

ಶ್ರೀರಾಮಾನುಜಾಚಾರ್ಯರು 'ಚೇತನಾ ಧೃತಿಃ' ಎಂಬುದನ್ನು 'ಚೇತನಾಧೃತಿಃ' ಎಂಬ ಸಮಾಸಪದವಾಗಿ ಭಾವಿಸಿರುತ್ತಾರೆ. ಆಧೃತಿ ಎಂದರೆ ಆಧಾರ; 'ಜೀವಾತ್ಮನಿಗೆ ಈ ಸಂಘಾತವು ಆಧಾರ' ಎಂದು ಅರ್ಥವಾಗುತ್ತದೆ.

9 ಮಹದಾದಿ ವಿಕಾರಗಳಿಂದ (ಶ್ರೀಶಂಕರ)

[ಇಚ್ಛೆಯಿಂದ ಧೃತಿಯ ವರೆಗೆ ಈ ಗುಣಗಳೆಲ್ಲಾ ಕ್ಷೇತ್ರಧರ್ಮಗಳು, ಕ್ಷೇತ್ರಜ್ಞನ ಧರ್ಮಗಳಲ್ಲ ವೆಂದು ಶ್ರೀಶಂಕರಾಚಾರ್ಯರು ಹೇಳಿರುತ್ತಾರೆ. ಶ್ರೀರಾಮಾನುಜಾಚಾರ್ಯರು ಇಚ್ಛಾದ್ವೇಷಸುಖದುಃಖಗಳು ಆತ್ಮನಿಗೆ ಕ್ಷೇತ್ರಸಂಬಂಧದ ಮೂಲಕ ಉಂಟಾಗುತ್ತವೆ ಎಂದು ಹೇಳಿರುತ್ತಾರೆ.]

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ 2 ॥**

ಅಮಾನಿತ್ವಂ (ಅಮಾನಿತ್ವ) ಅದಂಭಿತ್ವಂ (ಅದಂಭಿತ್ವ) ಅಹಿಂಸಾ (ಅಹಿಂಸೆ) ಕ್ಷಾಂತಿಃ (ಕ್ಷಾಂತಿ) ಆರ್ಜವಂ (ಆರ್ಜವ) ಆಚಾರ್ಯೋಪಾಸನಂ (ಆಚಾರ್ಯರ ಉಪಾಸನೆ) ಶೌಚಂ (ಶೌಚ) ಸ್ಥೈರ್ಯಂ (ಸ್ಥೈರ್ಯ) ಆತ್ಮವಿನಿಗ್ರಹಃ (ಆತ್ಮ ನಿಗ್ರಹ)—

**2. ಅಮಾನಿತ್ವ[1] ಅದಂಭಿತ್ವ[2] ಅಹಿಂಸೆ ಕ್ಷಾಂತಿ[3] ಆರ್ಜವ[4] ಆಚಾರ್ಯೋಪಾಸನೆ[5] ಶೌಚ[6] ಸ್ಥೈರ್ಯ[7] ಆತ್ಮನಿಗ್ರಹ[8]—**

1 ಆತ್ಮಶ್ಲಾಘನೆಯನ್ನು ಮಾಡದಿರುವುದು (ಶ್ರೀಶಂಕರ). ಉತ್ಕೃಷ್ಟಜನರನ್ನು ಅವಮರ್ಯಾದೆಯಿಂದ ನೋಡದೆ ಇರುವುದು (ಶ್ರೀರಾಮಾನುಜ).

2 ಸ್ವಧರ್ಮವನ್ನು ಪ್ರಕಟಮಾಡದೆ ಇರುವುದು (ಶ್ರೀಶಂಕರ). ಧಾರ್ಮಿಕತೆ— ಎಂದರೆ, ಯಶಸ್ಸಿಗಾಗಿ ಧರ್ಮಾನುಷ್ಠಾನವನ್ನು ಮಾಡದಿರುವುದು (ಶ್ರೀರಾಮಾನುಜ).

3 ಇತರರು ಅಪರಾಧಮಾಡಿದರೂ ಮನೋವಿಕಾರವನ್ನು ಹೊಂದದೆ ಇರುವುದು.

4 ವಾಙ್ಮನಃಕಾಯಗಳ ಪ್ರವೃತ್ತಿಗಳಲ್ಲಿ ಒಂದೇ ರೀತಿಯಾಗಿರುವುದು.

5 ಮೋಕ್ಷಸಾಧನವನ್ನು ಉಪದೇಶಿಸುವ ಆಚಾರ್ಯನ ಶುಶ್ರೂಷೆ.

6 ಶರೀರದ ಮತ್ತು ಮನಸ್ಸಿನ ಶುದ್ಧತೆ.

7 ಮೋಕ್ಷಮಾರ್ಗದಲ್ಲಿ ಸ್ಥಿರವಾಗಿರುವ ಸ್ವಭಾವ.

8 ಇಂದ್ರಿಯಗಳ ಮತ್ತು ಮನಸ್ಸಿನ ನಿಗ್ರಹ.

[ಈ ಶ್ಲೋಕದಿಂದ ಪ್ರಾರಂಭಿಸಿ ಹನ್ನೊಂದನೆಯ ಶ್ಲೋಕದ ವರೆಗೆ ಜ್ಞಾನದ ಸಾಧನಗಳು ಹೇಳಲ್ಪಟ್ಟಿವೆ.]

**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ ೮ ॥**

ಇಂದ್ರಿಯಾರ್ಥೇಷು (ಇಂದ್ರಿಯಗಳ ವಿಷಯಗಳಲ್ಲಿ) ವೈರಾಗ್ಯಂ (ವೈರಾಗ್ಯ) ಅನಹಂಕಾರಃ ಏವ ಚ (ಮತ್ತು ಅನಹಂಕಾರ) ಜನ್ಮ-ಮೃತ್ಯು-ಜರಾ-ವ್ಯಾಧಿ-ದುಃಖ-ದೋಷಾನುದರ್ಶನಂ (ಜನ್ಮ ಮೃತ್ಯು ಜರೆ ವ್ಯಾಧಿ ದುಃಖ — ಇವುಗಳಲ್ಲಿ ದೋಷವನ್ನು ನೋಡುವುದು).

೮. ಇಂದ್ರಿಯಗಳ ವಿಷಯಗಳಲ್ಲಿ ವೈರಾಗ್ಯ, ಅಹಂಕಾರವಿಲ್ಲದಿರುವುದು ಮತ್ತು ಜನ್ಮ ಮೃತ್ಯು ಜರೆ ವ್ಯಾಧಿ ದುಃಖ[1] — ಇವುಗಳಲ್ಲಿ ದೋಷವನ್ನು ನೋಡುವುದು—

1 ಅಧ್ಯಾತ್ಮ ಅಧಿಭೂತ ಅಧಿದೈವ — ಇವುಗಳಿಂದ ಉಂಟಾಗುವ ದುಃಖಗಳು (ಶ್ರೀಶಂಕರ).

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೯ ॥**

ಪುತ್ರ-ದಾರ-ಗೃಹಾದಿಷು (ಮಗ ಹೆಂಡತಿ ಮನೆ ಮೊದಲಾದುವುಗಳಲ್ಲಿ) ಅಸಕ್ತಿಃ (ಅಸಕ್ತಿ) ಅನಭಿಷ್ವಂಗಃ (ತನ್ಮಯತೆ ಇಲ್ಲದಿರುವುದು) ಇಷ್ಟಾನಿಷ್ಟೋಪಪತ್ತಿಷು (ಇಷ್ಟಾನಿಷ್ಟಗಳು ಬಂದಾಗ) ನಿತ್ಯಂ (ಯಾವಾಗಲೂ) ಸಮಚಿತ್ತತ್ವಂ ಚ (ಸಮಚಿತ್ತತೆ).

೯. ಹೆಂಡತಿ ಮನೆ ಮಕ್ಕಳು ಮೊದಲಾದುವುಗಳಲ್ಲಿ ಆಸಕ್ತಿ ಮತ್ತು ತನ್ಮಯತೆ[1] ಇಲ್ಲದಿರುವುದು; ಇಷ್ಟಾನಿಷ್ಟಗಳು ಪ್ರಾಪ್ತವಾದಾಗ ಯಾವಾಗಲೂ ಸಮಚಿತ್ತತೆ—

1 ಅಭಿಷ್ವಂಗವೆಂದರೆ ಅನನ್ಯಾತ್ಮಭಾವನಾಲಕ್ಷಣವುಳ್ಳ ಆಸಕ್ತಿವಿಶೇಷ; ಹೇಗೆಂದರೆ ಇನ್ನೊಬ್ಬನು ಸುಖಿಯಾಗಿದ್ದರೆ ಅಥವಾ ದುಃಖಿಯಾಗಿದ್ದರೆ 'ನಾನೇ ಸುಖಿ', 'ನಾನೇ ದುಃಖಿ' ಎಂದು ತಿಳಿದುಕೊಳ್ಳುವುದು (ಶ್ರೀಶಂಕರ).

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೦ ॥**

ಮಯಿ ಚ (ನನ್ನಲ್ಲಿ) ಅನನ್ಯಯೋಗೇನ (ಅನನ್ಯಯೋಗದಿಂದ) ಅವ್ಯಭಿಚಾರಿಣೀ (ಅವ್ಯಭಿಚಾರಿಯಾಗಿರುವ) ಭಕ್ತಿಃ (ಭಕ್ತಿ) ವಿವಿಕ್ತ-ದೇಶ-ಸೇವಿತ್ವಂ (ನಿರ್ಜನಪ್ರದೇಶವನ್ನುಸೇವಿಸುವಿಕೆ) ಜನಸಂಸದಿ (ಜನಸಮೂಹದಲ್ಲಿ) ಅರತಿಃ (ಪ್ರೀತಿಯಿಲ್ಲದಿರುವಿಕೆ).

೧೦. ಮತ್ತು ನನ್ನಲ್ಲಿ ಅನನ್ಯಯೋಗದ[1] ಮೂಲಕ ಅವ್ಯಭಿಚಾರಿಯಾದ ಭಕ್ತಿ, ನಿರ್ಜನಪ್ರದೇಶವನ್ನು ಸೇವಿಸುವಿಕೆ ಮತ್ತು ಜನಸಮೂಹದಲ್ಲಿ[2] ಪ್ರೀತಿಯಿಲ್ಲದಿರುವಿಕೆ—

1 ಏಕಾಂತಸಮಾಧಿಯ ಮೂಲಕ (ಅಪೃಥಕ್ಸಮಾಧಿನಾ) 'ಭಗವಂತನಾದ ವಾಸುದೇವನಿಗಿಂತ ಹೆಚ್ಚಿನವನು ಯಾರೂ ಇಲ್ಲ, ಆದುದರಿಂದ ಅವನೇ ನಮಗೆ ಗತಿ' ಎಂದು ನಿಶ್ಚಯಿಸಿರುವ ಅವ್ಯಭಿಚಾರಿಯಾದ ಬುದ್ಧಿ ಅನನ್ಯಯೋಗ (ಶ್ರೀಶಂಕರ).

2 ಸಂಸ್ಕಾರಶೂನ್ಯರೂ ಅವಿನೀತರೂ ಆದ ಪ್ರಾಕೃತ ಜನರ ಗುಂಪಿನಲ್ಲಿ (ಶ್ರೀಶಂಕರ).

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೧ ॥**

ಅಧ್ಯಾತ್ಮ-ಜ್ಞಾನ-ನಿತ್ಯತ್ವಂ (ಅಧ್ಯಾತ್ಮಜ್ಞಾನನಿಷ್ಠತೆ) ತತ್ತ್ವ-ಜ್ಞಾನಾರ್ಥ-ದರ್ಶನಂ (ತತ್ತ್ವಜ್ಞಾನದ ಅರ್ಥದ ಆಲೋಚನೆ) ಏತತ್ (ಇದು) ಜ್ಞಾನಂ ಇತಿ (ಜ್ಞಾನವೆಂದು) ಪ್ರೋಕ್ತಂ (ಹೇಳಲ್ಪಟ್ಟಿದೆ) ಯತ್ (ಯಾವುದು) ಅತಃ (ಇದಕ್ಕಿಂತ) ಅನ್ಯಥಾ (ಭಿನ್ನವಾಗಿರುವುದೋ) [ತತ್ (ಅದು)] ಅಜ್ಞಾನಂ (ಅಜ್ಞಾನ).

೧೧. ಅಧ್ಯಾತ್ಮಜ್ಞಾನದಲ್ಲಿ[1] ನಿಷ್ಠತೆ, ತತ್ತ್ವಜ್ಞಾನಾರ್ಥದ[2] ಆಲೋಚನೆ —ಇದು ಜ್ಞಾನವೆಂದು[3] ಹೇಳಲ್ಪಟ್ಟಿದೆ. ಯಾವುದು ಇದಕ್ಕಿಂತ ಭಿನ್ನವಾಗಿರುವುದೋ[4] ಅದು ಅಜ್ಞಾನ.

1 ಆತ್ಮಾದಿ ವಿಷಯಗಳಲ್ಲಿ.

2 ಅಮಾನಿತ್ವಾದಿ ಜ್ಞಾನಸಾಧನಗಳ ಭಾವನೆಯು ಪಕ್ವವಾಗುವುದರಿಂದ ತತ್ತ್ವಜ್ಞಾನ ಉಂಟಾಗುವುದು. ಅದರ ಅರ್ಥವು ಎಂದರೆ ಸಂಸಾರದ ನಾಶ ಅಥವಾ ಮೋಕ್ಷ (ಶ್ರೀಶಂಕರ).

3 ಅಮಾನಿತ್ವದಿಂದ ತತ್ತ್ವಜ್ಞಾನಾರ್ಥದರ್ಶನದ ವರೆಗೆ ಹೇಳಿರುವುದು ಜ್ಞಾನಕ್ಕೆ ಕಾರಣವಾಗಿರುವುದರಿಂದ ಜ್ಞಾನವೆಂದು ಹೇಳಲ್ಪಟ್ಟಿದೆ (ಶ್ರೀಶಂಕರ).

4 ಮಾನಿತ್ವ ದಂಭಿತ್ವ ಹಿಂಸೆ ಅಕ್ಷಾಂತಿ ಅನಾರ್ಜವ ಮೊದಲಾದುವು ಸಂಸಾರ ಪ್ರವೃತ್ತಿಗೆ ಕಾರಣವಾದುದರಿಂದ ಅಜ್ಞಾನವು ಎಂದು ಅದನ್ನು ಬಿಟ್ಟುಬಿಡಲು ತಿಳಿದುಕೊಳ್ಳಬೇಕು (ಶ್ರೀಶಂಕರ).

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೨ ॥**

ಯತ್ (ಯಾವುದು) ಜ್ಞೇಯಂ (ಜ್ಞೇಯವೋ) ಯತ್ (ಯಾವುದನ್ನು) ಜ್ಞಾತ್ವಾ (ತಿಳಿದುಕೊಂಡು) ಅಮೃತಂ (ಅಮೃತತ್ವವನ್ನು) ಅಶ್ನುತೇ (ಹೊಂದುತ್ತಾನೆಯೋ) ತತ್ (ಅದನ್ನು) ಪ್ರವಕ್ಷ್ಯಾಮಿ (ಹೇಳುತ್ತೇನೆ) ತತ್ (ಅದು) ಅನಾದಿಮತ್ (ಆದಿಯಿಲ್ಲದ್ದು) ಪರಂ ಬ್ರಹ್ಮ (ಪರಬ್ರಹ್ಮ) ನ ಸತ್ (ಸತ್ ಅಲ್ಲ) ನ ಅಸತ್ (ಅಸತ್ ಅಲ್ಲ) [ಎಂದು] ಉಚ್ಯತೇ (ಹೇಳಲ್ಪಟ್ಟಿದೆ).

೧೨. ಯಾವುದು ಜ್ಞೇಯವೋ,[1] ಯಾವುದನ್ನು ತಿಳಿದುಕೊಂಡು (ಮನುಷ್ಯನು) ಅಮೃತತ್ವವನ್ನು ಹೊಂದುತ್ತಾನೆಯೋ, ಅದನ್ನು ಹೇಳುತ್ತೇನೆ. ಅದು ಅನಾದಿ ಪರಬ್ರಹ್ಮ. ಅದು ಸತ್ ಅಲ್ಲ, ಅಸತ್ ಅಲ್ಲ ಎಂದು ಹೇಳಲ್ಪಟ್ಟಿದೆ.[2]

1 ಅರಿಯತಕ್ಕ ವಸ್ತು.

2 ಪರಬ್ರಹ್ಮವು ಅತೀಂದ್ರಿಯವಸ್ತುವಾದುದರಿಂದ 'ಇದೆ' ಎಂಬ ಬುದ್ಧಿಯಿಂದ ಕೂಡಿದ ಅರಿವಿಗೂ ವಿಷಯವಲ್ಲ, 'ಇಲ್ಲ' ಎಂಬ ಬುದ್ಧಿಯಿಂದ ಕೂಡಿದ ಅರಿವಿಗೂ ವಿಷಯವಲ್ಲ. ಇದು ಶಬ್ದಪ್ರಮಾಣದಿಂದ ಮಾತ್ರ ತಿಳಿಯತಕ್ಕ ವಸ್ತು.

[ಹನ್ನೆರಡನೆಯ ಶ್ಲೋಕದಿಂದ ಹದಿನೇಳನೆಯ ಶ್ಲೋಕದ ವರೆಗೆ ಜ್ಞೇಯವಸ್ತುವಿನ ಲಕ್ಷಣಗಳನ್ನು ಹೇಳಿದೆ.]

**ಸರ್ವತಃಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಶ್ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩ ॥**

ತತ್ (ಅದು) ಸರ್ವತಃಪಾಣಿಪಾದಂ (ಎಲ್ಲೆಲ್ಲಿಯೂ ಕೈಕಾಲುಗಳುಳ್ಳದ್ದು) ಸರ್ವತೋಽಕ್ಷಿಶಿರೋಮುಖಂ (ಎಲ್ಲೆಲ್ಲಿಯೂ ಕಣ್ಣುತಲೆಬಾಯಿಗಳುಳ್ಳದ್ದು) ಸರ್ವತಶ್ಶ್ರುತಿಮತ್ (ಎಲ್ಲೆಲ್ಲಿಯೂ ಕಿವಿಗಳುಳ್ಳದ್ದು) ಲೋಕೇ (ಲೋಕದಲ್ಲಿ) ಸರ್ವಂ (ಎಲ್ಲವನ್ನೂ) ಆವೃತ್ಯ (ಆವರಿಸಿಕೊಂಡು) ತಿಷ್ಠತಿ (ಇರುತ್ತದೆ).

೧೩. ಅದು ಎಲ್ಲೆಲ್ಲಿಯೂ ಕೈಕಾಲುಗಳುಳ್ಳದ್ದು, ಎಲ್ಲೆಲ್ಲಿಯೂ ಕಣ್ಣು ತಲೆಬಾಯಿಗಳುಳ್ಳದ್ದು, ಎಲ್ಲೆಲ್ಲಿಯೂ ಕಿವಿಗಳುಳ್ಳದ್ದು; ಲೋಕದಲ್ಲಿ ಎಲ್ಲವನ್ನೂ ಆವರಿಸಿಕೊಂಡು ಇರುತ್ತದೆ.

[ಜ್ಞೇಯವಾದ ಬ್ರಹ್ಮವಸ್ತುವು ಸಚ್ಛಬ್ದಕ್ಕೂ ಅರಿವಿಗೂ ವಿಷಯವಲ್ಲದಿದ್ದರೂ ಸಕಲಪ್ರಾಣಿಗಳ ಕರಣಗಳೆಂಬ ಉಪಾಧಿಗಳಿಂದ ಅದರ ಇರುವಿಕೆಯು ತಿಳಿದು ಬರುತ್ತದೆ—ಶ್ರೀಶಂಕರ.]

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೪ ॥**

ಸರ್ವೇಂದ್ರಿಯ-ಗುಣಾಭಾಸಂ (ಎಲ್ಲಾ ಇಂದ್ರಿಯಗಳ ಗುಣಗಳಿಂದ ಬೆಳಗುತ್ತಿರುವುದು) ಸರ್ವೇಂದ್ರಿಯ-ವಿವರ್ಜಿತಂ (ಸರ್ವೇಂದ್ರಿಯರಹಿತವಾದದ್ದು) ಅಸಕ್ತಂ (ಅಸಕ್ತ) ಸರ್ವಭೃತ್ (ಎಲ್ಲಕ್ಕೂ ಆಸ್ಪದ) ನಿರ್ಗುಣಂ ಚ ಏವ (ನಿರ್ಗುಣ) ಗುಣಭೋಕ್ತೃ ಚ (ಗುಣಗಳ ಭೋಕ್ತೃ).

೧೪. (ಆ ಜ್ಞೇಯವು) ಎಲ್ಲಾ ಇಂದ್ರಿಯಗಳ[1] ಗುಣಗಳಿಂದ[2] ಬೆಳಗುತ್ತಿದೆ, ಸರ್ವೇಂದ್ರಿಯರಹಿತವಾದದ್ದು,[3] ಅಸಕ್ತವು,[4] ಎಲ್ಲಕ್ಕೂ ಆಸ್ಪದ,[5] ನಿರ್ಗುಣವು[6] ಮತ್ತು ಗುಣಗಳ ಭೋಕ್ತೃ [7]

1 ಬುದ್ಧೀಂದ್ರಿಯ ಕರ್ಮೇಂದ್ರಿಯ ಮುಂತಾದ ಹೊರಗಿನ ಕರಣಗಳ ಮತ್ತು ಅಂತಃಕರಣಗಳಾದ ಬುದ್ಧಿಮನಸ್ಸುಗಳ (ಶ್ರೀಶಂಕರ).

2 ಅಧ್ಯವಸಾಯ ಸಂಕಲ್ಪ ಶ್ರವಣ ವಚನ ಮೊದಲಾದ ವ್ಯಾಪಾರಗಳಿಂದ (ಶ್ರೀಶಂಕರ).

3 ಅದು ಸಕಲೇಂದ್ರಿಯಗಳೆಂಬ ಉಪಾಧಿಗುಣಗಳಿಗೆ ಅನುಗುಣವಾಗಿರುವಿಕೆಯನ್ನು ಹೊಂದಬಲ್ಲ ಶಕ್ತಿಯುಳ್ಳದ್ದು (ಶ್ರೀಶಂಕರ)

4 ಅದಕ್ಕೆ ಯಾವ ಕರಣವೂ ಇಲ್ಲದಿದ್ದುದರಿಂದ ಅಸಕ್ತವು (ಶ್ರೀಶಂಕರ).

5 ಹೀಗಿದ್ದರೂ ಸದ್ವಸ್ತುವೇ ಪ್ರತಿಯೊಂದಕ್ಕೂ ಆಸ್ಪದವಾಗಿರುತ್ತದೆ (ಶ್ರೀಶಂಕರ).

6 ಸತ್ತ್ವರಜಸ್ತಮೋಗುಣಗಳಿಲ್ಲದ್ದು (ಶ್ರೀಶಂಕರ).

7 ಶಬ್ದವೇ ಮೊದಲಾದುವುಗಳ ಮೂಲಕ ಸುಖದುಃಖಮೋಹಗಳ ಆಕಾರವನ್ನು ಹೊಂದಿರುವ ಸತ್ತ್ವರಜಸ್ತಮಸ್ಸುಗಳನ್ನು ಭೋಗಿಸುವುದು ಎಂದರೆ ಅರಿತುಕೊಳ್ಳುವುದು (ಶ್ರೀಶಂಕರ).

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ ೧೫ ॥**

ತತ್ ಚ (ಅದು) ಭೂತಾನಾಂ (ಪ್ರಾಣಿಗಳ) ಬಹಿಃ ಅಂತಃ ಚ (ಹೊರಗೂ ಒಳಗೂ) [ಇರುವುದು] ಅಚರಂ (ಅಚರವು) ಚರಂ ಏವ ಚ (ಚರವು) [ಆಗಿರುವುದು] ತತ್ (ಅದು) ಸೂಕ್ಷ್ಮತ್ವಾತ್ (ಸೂಕ್ಷ್ಮವಾಗಿರುವುದರಿಂದ) ಅವಿಜ್ಞೇಯಂ (ಅರಿಯಲಸಾಧ್ಯವಾಗಿರುವುದು) ತತ್ ಚ (ಅದು) ದೂರಸ್ಥಂ (ದೂರದಲ್ಲಿರುವುದು) ಚ ಅಂತಿಕೇ (ಸಮೀಪದಲ್ಲೂ ಇರುವುದು).

೧೫. ಅದು (ಸಮಸ್ತ) ಪ್ರಾಣಿಗಳ ಒಳಗೂ ಹೊರಗೂ ಇರುವುದು, ಚರಾಚರಸ್ವರೂಪವಾಗಿರುವುದು; ಸೂಕ್ಷ್ಮರೂಪವಾಗಿರುವುದರಿಂದ ಅದು ಅರಿಯಲಸಾಧ್ಯವಾಗಿರುವುದು. ಅದು ದೂರದಲ್ಲಿರುವುದು,[1] ಸಮೀಪದಲ್ಲೂ[2] ಇರುವುದು.

[1] ಅಜ್ಞಾನಿಗಳಿಗೆ.
[2] ಜ್ಞಾನಿಗಳಿಗೆ.

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೬ ॥**

ಅವಿಭಕ್ತಂ ಚ (ವಿಭಾಗವಿಲ್ಲದೆ ಇರುವುದು) ಭೂತೇಷು (ಪ್ರಾಣಿಗಳಲ್ಲಿ) ವಿಭಕ್ತಂ ಇವ ಚ (ವಿಭಾಗವಾಗಿರುವಂತೆ ಕಾಣುತ್ತಿರುವುದು) ತತ್ (ಆ) ಜ್ಞೇಯಂ (ಜ್ಞೇಯವು, ಬ್ರಹ್ಮವು) ಭೂತ-ಭರ್ತೃ (ಭೂತಗಳ ಪಾಲಕ) ಗ್ರಸಿಷ್ಣು (ಸಂಹಾರಕರ್ತೃ) ಪ್ರಭವಿಷ್ಣು ಚ (ಸೃಷ್ಟಿಕರ್ತೃ).

೧೬. ಅದು ವಿಭಾಗವಿಲ್ಲದೆ ಇರುವುದು, ಪ್ರಾಣಿಗಳಲ್ಲಿ ವಿಭಾಗವಾಗಿರುವಂತೆ ಕಾಣುತ್ತಿರುವುದು; ಆ ಜ್ಞೇಯವು ಸಮಸ್ತಭೂತಗಳ ಪಾಲಕ,[1] ಸಂಹಾರಕರ್ತೃ[2] ಮತ್ತು ಸೃಷ್ಟಿಕರ್ತೃ.[3]

[1] ಸ್ಥಿತಿಕಾಲದಲ್ಲಿ.
[2] ಪ್ರಳಯಕಾಲದಲ್ಲಿ.
[3] ಉತ್ಪತ್ತಿಕಾಲದಲ್ಲಿ.

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ॥ ೧೭ ॥**

ತತ್ (ಅದು) ಜ್ಯೋತಿಷಾಂ ಅಪಿ (ಜ್ಯೋತಿಗಳ) ಜ್ಯೋತಿಃ (ಜ್ಯೋತಿ) ತಮಸಃ ಪರಂ (ತಮಸ್ಸಿನ ಆಚೆ) [ಇರುವುದೆಂದು] ಉಚ್ಯತೇ (ಹೇಳಲ್ಪಟ್ಟಿದೆ) ಜ್ಞಾನಂ (ಜ್ಞಾನ) ಜ್ಞೇಯಂ (ಜ್ಞೇಯ) ಜ್ಞಾನಗಮ್ಯಂ (ಜ್ಞಾನದಿಂದ ಹೊಂದಲ್ಪಡ

ತಕ್ಕ ವಸ್ತು) ಸರ್ವಸ್ಯ (ಸರ್ವಪ್ರಾಣಿಗಳ) ಹೃದಿ (ಹೃದಯದಲ್ಲಿ) ವಿಷ್ಠಿತಂ (ನೆಲೆಸಿರುತ್ತದೆ).

೧೭. ಅದು ಜ್ಯೋತಿಗಳಿಗೂ ಜ್ಯೋತಿ,[1] ತಮಸ್ಸಿನ[2] ಆಚೆ ಇರುವುದು ಎಂದು ಹೇಳಲ್ಪಟ್ಟಿದೆ; (ಅದು) ಜ್ಞಾನ[3] ಜ್ಞೇಯ[4] ಜ್ಞಾನಗಮ್ಯ[5] ಮತ್ತು ಎಲ್ಲರ ಹೃದಯಗಳಲ್ಲಿಯೂ ನೆಲೆಸಿರುತ್ತದೆ.

1 ಆತ್ಮಚೈತನ್ಯದ ಜ್ಯೋತಿಯಿಂದ ಆದಿತ್ಯನೇ ಮೊದಲಾದ ಜ್ಯೋತಿಗಳು ಪ್ರಕಾಶಿಸುತ್ತಿರುವುವು (ಶ್ರೀಶಂಕರ).

2 ಅಜ್ಞಾನದ (ಶ್ರೀಶಂಕರ).

3 ಅಮಾನಿತ್ವ ಮೊದಲಾದುವು (ಶ್ರೀಶಂಕರ).

4 'ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ' (೧೩, ೧೨) ಎಂದು ಹೇಳಿದ ಬ್ರಹ್ಮ (ಶ್ರೀಶಂಕರ).

5 ಜ್ಞೇಯವು ತಿಳಿಯಲ್ಪಟ್ಟದ್ದಾದರೆ ಜ್ಞಾನಫಲವಾಗುವುದರಿಂದ ಜ್ಞಾನಗಮ್ಯ ಎಂದು ಹೇಳಲ್ಪಡುತ್ತದೆ (ಶ್ರೀಶಂಕರ).

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮ ॥**

ಇತಿ (ಹೀಗೆ) ಕ್ಷೇತ್ರಂ (ಕ್ಷೇತ್ರ) ತಥಾ (ಹಾಗೆಯೇ) ಜ್ಞಾನಂ (ಜ್ಞಾನ) ಜ್ಞೇಯಂ ಚ (ಮತ್ತು ಜ್ಞೇಯ) [ಇವುಗಳು] ಸಮಾಸತಃ (ಸಂಕ್ಷೇಪವಾಗಿ) ಉಕ್ತಂ (ಹೇಳಲ್ಪಟ್ಟಿವೆ) ಮದ್ಭಕ್ತಃ (ನನ್ನ ಭಕ್ತನು) ಏತತ್ (ಇದನ್ನು) ವಿಜ್ಞಾಯ (ತಿಳಿದುಕೊಂಡು) ಮದ್ಭಾವಾಯ (ನನ್ನ ಭಾವವನ್ನು ಹೊಂದಲು) ಉಪಪದ್ಯತೇ (ಸಮರ್ಥನಾಗುತ್ತಾನೆ).

೧೮. ಹೀಗೆ ಕ್ಷೇತ್ರ ಜ್ಞಾನ ಮತ್ತು ಜ್ಞೇಯ— ಇವುಗಳನ್ನು ಸಂಕ್ಷೇಪವಾಗಿ ಹೇಳಿದ್ದಾಯಿತು. ನನ್ನ ಭಕ್ತನು ಇದನ್ನು ತಿಳಿದುಕೊಂಡು ನನ್ನ ಭಾವವನ್ನು ಹೊಂದಲು ಅರ್ಹನಾಗುತ್ತಾನೆ.[1]

1 ಮೋಕ್ಷವನ್ನು ಹೊಂದುತ್ತಾನೆ (ಶ್ರೀಶಂಕರ).

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೧೯ ॥**

ಪ್ರಕೃತಿಂ (ಪ್ರಕೃತಿಯನ್ನೂ) ಪುರುಷಂ ಏವ ಚ (ಪುರುಷನನ್ನೂ) ಉಭೌ ಅಪಿ (ಈ ಎರಡನ್ನೂ) ಅನಾದೀ (ಅನಾದಿಗಳೆಂದು) ವಿದ್ಧಿ (ತಿಳಿ) ವಿಕಾರಾನ್ ಚ

(ವಿಕಾರಗಳನ್ನು) ಗುಣಾನ್ ಏವ ಚ (ಗುಣಗಳನ್ನು) ಪ್ರಕೃತಿಸಂಭವಾನ್ (ಪ್ರಕೃತಿಯಿಂದ ಹುಟ್ಟಿದವುಗಳೆಂದು) ವಿದ್ಧಿ (ತಿಳಿ).

೧೯. ಪ್ರಕೃತಿ ಪುರುಷ ಇವೆರಡೂ ಅನಾದಿಗಳೆಂದು[1] ತಿಳಿ. ವಿಕಾರಗಳು[2] ಮತ್ತು ಗುಣಗಳು[3] ಪ್ರಕೃತಿಯಿಂದ[4] ಹುಟ್ಟಿದವುಗಳೆಂದು ತಿಳಿ.

[1] ಪ್ರಕೃತಿಪುರುಷರ ಮೂಲಕ ಈಶ್ವರನಿಗೆ ಈಶ್ವರತ್ವ ಉಂಟಾಗಿದೆ. ಈಶ್ವರನು ನಿತ್ಯನಾಗಿರುವುದರಿಂದ ಈ ಎರಡು ಪ್ರಕೃತಿಗಳೂ ನಿತ್ಯವಾಗಿರುವುವು.

[2] ಬುದ್ಧಿಯಿಂದ ಪ್ರಾರಂಭಿಸಿ ದೇಹೇಂದ್ರಿಯಗಳ ವರೆಗಿನ (ಶ್ರೀಶಂಕರ).

[3] ಸುಖದುಃಖಮೋಹಗಳೆಂಬ ಪ್ರತ್ಯಯಗಳ ಆಕಾರದಿಂದ ಪರಿಣಾಮವಾಗಿರುವುವು (ಶ್ರೀಶಂಕರ).

[4] ತ್ರಿಗುಣಾತ್ಮಿಕವಾದ ಮಾಯೆ (ಶ್ರೀಶಂಕರ).

**ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥ ೨೦ ॥**

ಕಾರ್ಯ-ಕರಣ-ಕರ್ತೃತ್ವೇ (ಕಾರ್ಯಕರಣಗಳ ಉತ್ಪತ್ತಿಗೆ) ಪ್ರಕೃತಿಃ (ಪ್ರಕೃತಿಯು) ಹೇತುಃ (ಕಾರಣವು) [ಎಂದು] ಉಚ್ಯತೇ (ಹೇಳಲ್ಪಡುತ್ತದೆ) ಪುರುಷಃ (ಪುರುಷನು) ಸುಖದುಃಖಾನಾಂ (ಸುಖದುಃಖಗಳ) ಭೋಕ್ತೃತ್ವೇ (ಅನುಭವಕ್ಕೆ) ಹೇತುಃ (ಕಾರಣನು) [ಎಂದು] ಉಚ್ಯತೇ (ಹೇಳಲ್ಪಡುತ್ತಾನೆ).

೨೦. ಪ್ರಕೃತಿಯು ಕಾರ್ಯಕರಣಗಳ[1] ಉತ್ಪತ್ತಿಗೆ ಕಾರಣವೆನಿಸಿರುವುದು; ಪುರುಷನು ಸುಖದುಃಖಗಳ ಅನುಭವಕ್ಕೆ ಕಾರಣನೆನಿಸಿರುವನು.

[1] ಕಾರ್ಯವೆಂದರೆ ಶರೀರ, ಕರಣಗಳೆಂದರೆ ಹತ್ತು ಇಂದ್ರಿಯಗಳು ಮತ್ತು ಮನಸ್ಸು.

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೧ ॥**

ಪುರುಷಃ (ಪುರುಷನು) ಪ್ರಕೃತಿಸ್ಥಃ ಹಿ (ಪ್ರಕೃತಿಯಲ್ಲಿದ್ದುಕೊಂಡೇ) ಪ್ರಕೃತಿಜಾನ್ (ಪ್ರಕೃತಿಯಿಂದ ಹುಟ್ಟಿದ) ಗುಣಾನ್ (ಗುಣಗಳನ್ನು) ಭುಂಕ್ತೇ (ಅನುಭವಿಸುತ್ತಿರುವನು) ಅಸ್ಯ (ಇವನಿಗೆ) ಸದಸದ್ಯೋನಿ-ಜನ್ಮಸು (ಒಳ್ಳೆಯ ಮತ್ತು ಕೆಟ್ಟ ಯೋನಿಗಳಲ್ಲಿ ಹುಟ್ಟುವುದಕ್ಕೆ) ಗುಣಸಂಗಃ (ಗುಣಸಂಗವು) ಕಾರಣಂ (ಕಾರಣವು).

೨೧. ಪುರುಷನು ಪ್ರಕೃತಿಯಲ್ಲಿದ್ದುಕೊಂಡೇ ಪ್ರಕೃತಿಯಿಂದ ಹುಟ್ಟಿದ ಗುಣಗಳನ್ನು[1] ಅನುಭವಿಸುತ್ತಿರುವನು; ಇವನು ಒಳ್ಳೆಯ ಮತ್ತು ಕೆಟ್ಟ ಯೋನಿಗಳಲ್ಲಿ ಹುಟ್ಟುವುದಕ್ಕೆ ಗುಣಸಂಗವು[2] ಕಾರಣ.

1 ಸುಖದುಃಖಮೋಹಾಕಾರದಿಂದ ಕಾಣಿಸಿಕೊಳ್ಳುತ್ತಿರುವ ಗುಣಗಳನ್ನು.

2 ಅವಿದ್ಯೆಯಿದ್ದರೂ ಸುಖದುಃಖಮೋಹಗಳೆಂಬ ಗುಣಗಳನ್ನು ಅನುಭವಿಸುವಾಗ ಸಂಗ ಅಥವಾ ಆತ್ಮಭಾವ (ತಾನೇ ಅವು ಎಂಬ ಭಾವ) ಜನ್ಮಕ್ಕೆ ಪ್ರಧಾನಕಾರಣ (ಶ್ರೀಶಂಕರ).

**ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥ ೨೨ ॥**

ಅಸ್ಮಿನ್ (ಈ) ದೇಹೇ (ಶರೀರದಲ್ಲಿ) ಪರಃ ಪುರುಷಃ (ಪರಮ ಪುರುಷನು) ಉಪದ್ರಷ್ಟಾ (ಸಾಕ್ಷಿ) ಅನುಮಂತಾ (ಅನುಮೋದಿಸುವವನು) ಭರ್ತಾ ಚ (ಭರ್ತೃ) ಭೋಕ್ತಾ (ಭೋಕ್ತೃ) ಮಹೇಶ್ವರಃ (ಮಹೇಶ್ವರ) ಪರಮಾತ್ಮಾ ಚ (ಮತ್ತು ಪರಮಾತ್ಮ) ಇತಿ ಅಪಿ (ಎಂದು) ಉಕ್ತಃ (ಹೇಳಲ್ಪಟ್ಟಿದ್ದಾನೆ).

**೨೨.** ಈ ದೇಹದಲ್ಲಿರುವ ಪರಮಪುರುಷನು ಸಾಕ್ಷಿ[1] ಅನುಮೋದಿಸುವವನು ಭರ್ತೃ[2] ಭೋಕ್ತೃ[3] ಮಹೇಶ್ವರ[4] ಮತ್ತು ಪರಮಾತ್ಮ ಎಂದು ಹೇಳಲ್ಪಟ್ಟಿರುತ್ತಾನೆ.

1 ಕಾರ್ಯಕರಣಗಳಲ್ಲಿರುವ ವ್ಯಾಪಾರಗಳಲ್ಲಿ ತೊಡಗದೆ ಅವುಗಳನ್ನು ನೋಡುತ್ತಿರುವ ಸಾಕ್ಷಿ.

2 ದೇಹೇಂದ್ರಿಯಮನೋಬುದ್ಧಿಗಳು ಚೈತನ್ಯದಿಂದಲೇ ಆಗಿರುವುದರಿಂದ ಆತ್ಮನು ಭರ್ತೃವೆನಿಸುವನು.

3 ಸುಖದುಃಖಮೋಹರೂಪವಾದ ಬುದ್ಧಿಯ ಪ್ರತ್ಯಯಗಳನ್ನು ಅರಿಯುವುದರಿಂದ ಆತ್ಮನು ಭೋಕ್ತೃವೆನಿಸಿರುವನು.

4 ಸರ್ವಾತ್ಮನೂ ಸ್ವತಂತ್ರನೂ ಆಗಿರುವುದರಿಂದ.

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥ ೨೩ ॥**

ಯಃ (ಯಾವನು) ಏವಂ (ಹೀಗೆ) ಪುರುಷಂ (ಪುರುಷನನ್ನೂ) ಗುಣೈಃ ಸಹ ಪ್ರಕೃತಿಂ ಚ (ಗುಣಗಳೊಂದಿಗೆ ಪ್ರಕೃತಿಯನ್ನೂ) ವೇತ್ತಿ (ತಿಳಿಯುತ್ತಾನೆಯೋ) ಸಃ (ಅವನು) ಸರ್ವಥಾ ವರ್ತಮಾನಃ ಅಪಿ (ಹೇಗೆ ಇದ್ದರೂ) ಭೂಯಃ (ಪುನಃ) ನ ಅಭಿಜಾಯತೇ (ಹುಟ್ಟುವುದಿಲ್ಲ).

**೨೩.** ಯಾವನು ಹೀಗೆ ಪುರುಷನನ್ನೂ ಗುಣಗಳೊಂದಿಗೆ ಪ್ರಕೃತಿಯನ್ನೂ ಅರಿತುಕೊಳ್ಳುವನೋ ಅವನು ಹೇಗೆ ಇದ್ದರೂ[1] ಪುನಃ ಹುಟ್ಟುವುದಿಲ್ಲ.

1 ಯಾವ ಪ್ರಕಾರದಿಂದ ಇದ್ದರೂ (ಶ್ರೀಶಂಕರ). ದೇವಮನುಷ್ಯಾದಿಶರೀರಗಳಲ್ಲಿ ಅತ್ಯಂತ ಕ್ಲೇಶದಿಂದ ಇದ್ದರೂ (ಶ್ರೀರಾಮಾನುಜ).

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ ೨೪ ॥**

ಕೇಚಿತ್ (ಕೆಲವರು) ಧ್ಯಾನೇನ (ಧ್ಯಾನದಿಂದ) ಆತ್ಮನಿ (ಬುದ್ಧಿಯಲ್ಲಿ) ಆತ್ಮನಾ (ಮನಸ್ಸಿನಿಂದ) ಆತ್ಮಾನಂ (ಆತ್ಮನನ್ನು) ಪಶ್ಯಂತಿ (ನೋಡುತ್ತಾರೆ) ಅನ್ಯೇ (ಇನ್ನು ಕೆಲವರು) ಸಾಂಖ್ಯೇನ ಯೋಗೇನ (ಜ್ಞಾನಯೋಗದಿಂದ) ಅಪರೇ ಚ (ಮತ್ತೆ ಕೆಲವರು) ಕರ್ಮಯೋಗೇನ (ಕರ್ಮಯೋಗದಿಂದ) [ನೋಡುತ್ತಾರೆ].

**೨೪.** ಕೆಲವರು[1] ಧ್ಯಾನದ ಮೂಲಕ ಬುದ್ಧಿಯಲ್ಲಿ ಆತ್ಮನನ್ನು (ಶುದ್ಧವಾದ) ಮನಸ್ಸಿನಿಂದ ನೋಡುತ್ತಾರೆ; ಇನ್ನು ಕೆಲವರು ಜ್ಞಾನಯೋಗದಿಂದಲೂ ಮತ್ತೆ ಕೆಲವರು ಕರ್ಮಯೋಗದಿಂದಲೂ (ಆತ್ಮನನ್ನು ನೋಡುತ್ತಾರೆ).

1 ಯೋಗಿಗಳು (ಶ್ರೀಶಂಕರ). ನಿಷ್ಪನ್ನವಾದ ಯೋಗನಿಷ್ಠೆಯುಳ್ಳವರು ಎಂದರೆ ಭಕ್ತಿಯೋಗನಿಷ್ಠರು (ಶ್ರೀರಾಮಾನುಜ).

**ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೫ ॥**

ಅನ್ಯೇ ತು (ಆದರೆ ಇನ್ನು ಕೆಲವರು) ಏವಂ (ಹೀಗೆ) ಅಜಾನಂತಃ (ಅರಿಯದವರಾಗಿ) ಅನ್ಯೇಭ್ಯಃ (ಇತರರಿಂದ) ಶ್ರುತ್ವಾ (ಕೇಳಿ) ಉಪಾಸತೇ (ಉಪಾಸನೆ ಮಾಡುತ್ತಾರೆ) ತೇ ಶ್ರುತಿಪರಾಯಣಾಃ ಅಪಿ ಚ (ಅಂತಹ ಶ್ರುತಿಪರಾಯಣರೂ ಸಹ) ಮೃತ್ಯುಂ (ಮೃತ್ಯುವನ್ನು) ಅತಿತರಂತಿ ಏವ (ದಾಟುತ್ತಾರೆ).

**೨೫.** ಆದರೆ ಇನ್ನು ಕೆಲವರು ಹೀಗೆ ಅರಿತುಕೊಳ್ಳದೆ ಇತರರಿಂದ[1] ಕೇಳಿ ಉಪಾಸನೆಮಾಡುತ್ತಾರೆ; ಅಂತಹ ಶ್ರುತಿಪರಾಯಣರೂ[2] ಸಹ ಮೃತ್ಯುವನ್ನು[3] ಖಂಡಿತವಾಗಿ ದಾಟುತ್ತಾರೆ.

1 ತತ್ತ್ವದರ್ಶಿಗಳಾದ ಆಚಾರ್ಯರಿಂದ.
2 ಆಚಾರ್ಯರ ಉಪದೇಶವನ್ನು ಕೇಳುವುದರಲ್ಲಿ ನಿಷ್ಠೆಯುಳ್ಳವರು.
3 ಮೃತ್ಯುಯುಕ್ತವಾದ ಸಂಸಾರವನ್ನು.

**ಯಾವತ್ ಸಂಜಾಯತೇ ಕಿಂಚಿತ್ ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ ತದ್ವಿದ್ಧಿ ಭರತರ್ಷಭ ॥ ೨೬ ॥**

ಭರತರ್ಷಭ (ಎಲೈ ಅರ್ಜುನನೆ) ಸ್ಥಾವರ-ಜಂಗಮಂ (ಸ್ಥಾವರಜಂಗಮರೂಪವಾದ) ಯಾವತ್ ಕಿಂಚಿತ್ (ಯಾವುದೊಂದು) ಸತ್ತ್ವಂ (ವಸ್ತು) ಸಂಜಾಯತೇ (ಉತ್ಪನ್ನವಾಗುವುದೋ) ತತ್ (ಅದು) ಕ್ಷೇತ್ರ-ಕ್ಷೇತ್ರಜ್ಞ-ಸಂಯೋಗಾತ್ (ಕ್ಷೇತ್ರ ಕ್ಷೇತ್ರಜ್ಞರ ಸಂಯೋಗದಿಂದ) [ಉತ್ಪನ್ನವಾಗಿದೆಯೆಂದು] ವಿದ್ಧಿ (ತಿಳಿ).

೨೬. ಎಲೈ ಅರ್ಜುನ, ಸ್ಥಾವರಜಂಗಮರೂಪವಾದ ಯಾವುದೊಂದು ವಸ್ತು ಉತ್ಪನ್ನವಾಗುವುದೋ ಅದು ಕ್ಷೇತ್ರಕ್ಷೇತ್ರಜ್ಞರ ಸಂಯೋಗದಿಂದ (ಉತ್ಪನ್ನವಾಗಿದೆಯೆಂದು) ತಿಳಿ.

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೭ ॥**

ಯಃ (ಯಾವನು) ಸರ್ವೇಷು ಭೂತೇಷು (ಎಲ್ಲಾ ಪ್ರಾಣಿಗಳಲ್ಲಿಯೂ) ಸಮಂ ತಿಷ್ಠಂತಂ (ಸಮನಾಗಿರುವವನನ್ನು) ವಿನಶ್ಯತ್ಸು (ನಶ್ವರ ವಸ್ತುಗಳಲ್ಲಿ) ಅವಿನಶ್ಯಂತಂ (ಅವಿನಾಶಿಯಾದವನನ್ನು) ಪರಮೇಶ್ವರಂ (ಪರಮೇಶ್ವರನನ್ನು) ಪಶ್ಯತಿ (ನೋಡುತ್ತಾನೆಯೋ) ಸಃ (ಅವನು) ಪಶ್ಯತಿ (ನೋಡುತ್ತಾನೆ).

೨೭. ಸಮಸ್ತಪ್ರಾಣಿಗಳಲ್ಲಿಯೂ ಸಮನಾಗಿರುವವನೂ, ಆ ನಶ್ವರ ವಸ್ತುಗಳಲ್ಲಿ ಅವಿನಾಶಿಯಾಗಿರುವವನೂ ಆದ ಪರಮೇಶ್ವರನನ್ನು ಯಾವನು ನೋಡುತ್ತಾನೆಯೋ ಅವನೇ ನೋಡುತ್ತಾನೆ.

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ॥ ೨೮ ॥**

ಹಿ (ಏಕೆಂದರೆ) ಸರ್ವತ್ರ (ಎಲ್ಲಾ ಕಡೆಯಲ್ಲಿಯೂ) ಸಮವಸ್ಥಿತಂ (ಸಮನಾಗಿರುವ) ಈಶ್ವರಂ (ಈಶ್ವರನನ್ನು) ಸಮಂ ಪಶ್ಯನ್ (ಸಮವಾಗಿ ನೋಡುತ್ತಿರುವವನು) ಆತ್ಮನಾ (ತನ್ನಿಂದ) ಆತ್ಮಾನಂ (ತನ್ನನ್ನು) ನ ಹಿನಸ್ತಿ (ನಾಶವಾಡಿ ಕೊಳ್ಳುವುದಿಲ್ಲ) ತತಃ (ಆ ಕಾರಣದಿಂದ) ಪರಾಂ ಗತಿಂ (ಪರಗತಿಯನ್ನು) ಯಾತಿ (ಹೊಂದುತ್ತಾನೆ).

೨೮. ಏಕೆಂದರೆ ಎಲ್ಲಾ ಕಡೆಯಲ್ಲಿಯೂ[1] ಸಮನಾಗಿರುವ ಈಶ್ವರನನ್ನು ಸಮವಾಗಿ ನೋಡುತ್ತಿರುವವನು ತನ್ನಿಂದ ತನ್ನನ್ನು ನಾಶವಾಡಿಕೊಳ್ಳುವುದಿಲ್ಲ. ಆ ಕಾರಣದಿಂದ ಅವನು ಪರಗತಿಯನ್ನು ಹೊಂದುತ್ತಾನೆ.

1 ಸಮಸ್ತ ಪ್ರಾಣಿಗಳಲ್ಲಿಯೂ.

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥ ೨೯ ॥**

ಚ (ಮತ್ತು) ಯಃ (ಯಾವನು) ಕರ್ಮಾಣಿ (ಕರ್ಮಗಳು) ಪ್ರಕೃತ್ಯಾ ಏವ (ಪ್ರಕೃತಿಯಿಂದಲೇ) ಸರ್ವಶಃ (ಸರ್ವಪ್ರಕಾರದಿಂದಲೂ) ಕ್ರಿಯಮಾಣಾನಿ (ಮಾಡಲ್ಪಡುವುವು) [ಎಂದೂ] ತಥಾ (ಹಾಗೆಯೇ) ಆತ್ಮಾನಂ (ತನ್ನನ್ನು) ಅಕರ್ತಾರಂ (ಅಕರ್ತೃವೆಂದೂ) ಪಶ್ಯತಿ (ನೋಡುತ್ತಾನೆಯೋ) ಸಃ (ಅವನು) ಪಶ್ಯತಿ (ನೋಡುತ್ತಾನೆ).

೨೯. ಸರ್ವಪ್ರಕಾರದಿಂದಲೂ ಪ್ರಕೃತಿಯೇ[1] (ಸಮಸ್ತ) ಕರ್ಮಗಳನ್ನೂ ಮಾಡುವುದು ಮತ್ತು ತಾನು ಅಕರ್ತೃ[2] ಎಂದು ಯಾವನು ನೋಡುತ್ತಾನೆಯೋ ಅವನೇ ನೋಡುತ್ತಾನೆ.

[1] ಭಗವಂತನ ತ್ರಿಗುಣಾತ್ಮಕವಾದ ಮಾಯೆ (ಶ್ರೀಶಂಕರ).
[2] ಕ್ಷೇತ್ರಜ್ಞ, ಯಾವ ಉಪಾಧಿಯೂ ಇಲ್ಲದವನು (ಶ್ರೀಶಂಕರ).

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥**

ಯದಾ (ಯಾವಾಗ) ಭೂತ-ಪೃಥಗ್ಭಾವಂ (ಪ್ರಾಣಿಗಳ ಪೃಥಗ್ಭಾವವನ್ನು) (ಬೇರೆಬೇರೆಯಾಗಿರುವಿಕೆಯನ್ನು) ಏಕಸ್ಥಂ (ಒಂದೇ ಆತ್ಮದಲ್ಲಿರುವುದನ್ನಾಗಿ) ತತಃ ಏವ ಚ (ಮತ್ತು ಅದರಿಂದಲೇ) ವಿಸ್ತಾರಂ (ವಿಕಾಸವನ್ನು) ಅನುಪಶ್ಯತಿ (ನೋಡುತ್ತಾನೆಯೋ) ತದಾ (ಆಗ) ಬ್ರಹ್ಮ (ಬ್ರಹ್ಮವನ್ನು) ಸಂಪದ್ಯತೇ (ಹೊಂದುತ್ತಾನೆ).

೩೦. ಪ್ರಾಣಿಗಳ ಪೃಥಗ್ಭಾವವು ಒಂದೇ ಆತ್ಮದಲ್ಲಿರುವುದೆಂದೂ ಮತ್ತು ಅದರಿಂದಲೇ (ಇವೆಲ್ಲವೂ) ವಿಕಾಸವನ್ನು ಹೊಂದಿವೆಯೆಂದೂ (ಯಾವನು) ಯಾವಾಗ ನೋಡುತ್ತಾನೆಯೋ ಆಗ ಬ್ರಹ್ಮವನ್ನು ಹೊಂದುತ್ತಾನೆ.

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೧ ॥**

ಕೌಂತೇಯ (ಎಲೈ ಅರ್ಜುನನೆ) ಅನಾದಿತ್ವಾತ್ (ಅನಾದಿಯಾಗಿರುವುದರಿಂದಲೂ) ನಿರ್ಗುಣತ್ವಾತ್ (ನಿರ್ಗುಣನಾಗಿರುವುದರಿಂದಲೂ) ಅಯಂ (ಈ) ಅವ್ಯಯಃ (ಅವ್ಯಯನಾದ) ಪರಮಾತ್ಮಾ (ಪರಮಾತ್ಮನು) ಶರೀರಸ್ಥಃ ಅಪಿ (ಶರೀರದಲ್ಲಿದ್ದರೂ) ನ ಕರೋತಿ (ಮಾಡುವುದಿಲ್ಲ) ನ ಲಿಪ್ಯತೇ (ಲಿಪ್ತನಾಗುವುದಿಲ್ಲ).

೩೧. ಎಲೈ ಅರ್ಜುನ, ಅನಾದಿಯಾಗಿರುವುದರಿಂದಲೂ ನಿರ್ಗುಣನಾಗಿರುವುದರಿಂದಲೂ ಈ ಅವ್ಯಯನಾದ ಪರಮಾತ್ಮನು ಶರೀರದಲ್ಲಿದ್ದರೂ (ಯಾವ ಕರ್ಮವನ್ನೂ) ಮಾಡುವುದಿಲ್ಲ, ಲಿಪ್ತನಾಗುವುದಿಲ್ಲ.[1]

[1] ಕರ್ಮಫಲದಿಂದ.

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ॥ ೩೨ ॥**

ಯಥಾ (ಹೇಗೆ) ಸರ್ವಗತಂ (ಸರ್ವವ್ಯಾಪಿಯಾದ) ಆಕಾಶಂ (ಆಕಾಶವು) ಸೌಕ್ಷ್ಮ್ಯಾತ್ (ಸೂಕ್ಷ್ಮವಾಗಿರುವುದರಿಂದ) ನ ಉಪಲಿಪ್ಯತೇ (ಲಿಪ್ತವಾಗುವುದಿಲ್ಲವೋ) ತಥಾ (ಹಾಗೆ) ಸರ್ವತ್ರ (ಎಲ್ಲೆಲ್ಲಿಯೂ, ಎಲ್ಲಾ) ದೇಹೇ ಅವಸ್ಥಿತಃ (ದೇಹದಲ್ಲಿರುವ) ಆತ್ಮಾ (ಆತ್ಮನು) ನ ಉಪಲಿಪ್ಯತೇ (ಲಿಪ್ತನಾಗುವುದಿಲ್ಲ).

೩೨. ಸರ್ವವ್ಯಾಪಿಯಾದ ಆಕಾಶವು ಸೂಕ್ಷ್ಮವಾಗಿರುವ ಕಾರಣ ಹೇಗೆ ಲಿಪ್ತವಾಗುವುದಿಲ್ಲವೋ[1] ಹಾಗೆಯೇ ಎಲ್ಲಾ ದೇಹದಲ್ಲಿರುವ ಆತ್ಮನು ಲಿಪ್ತನಾಗುವುದಿಲ್ಲ.

[1] ಸಂಬಂಧವನ್ನು ಹೊಂದುವುದಿಲ್ಲವೋ.

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩ ॥**

ಭಾರತ (ಎಲೈ ಅರ್ಜುನನೆ) ಯಥಾ (ಹೇಗೆ) ಏಕಃ ರವಿಃ (ಒಬ್ಬನೇ ಆದ ಸೂರ್ಯನು) ಇಮಂ (ಈ) ಕೃತ್ಸ್ನಂ (ಸಮಸ್ತ) ಲೋಕಂ (ಲೋಕವನ್ನು) ಪ್ರಕಾಶಯತಿ (ಪ್ರಕಾಶಗೊಳಿಸುತ್ತಾನೆಯೋ) ತಥಾ (ಹಾಗೆಯೇ) ಕ್ಷೇತ್ರೀ (ಕ್ಷೇತ್ರಜ್ಞನು) ಕೃತ್ಸ್ನಂ (ಸಮಸ್ತ) ಕ್ಷೇತ್ರಂ (ಕ್ಷೇತ್ರವನ್ನು) ಪ್ರಕಾಶಯತಿ (ಪ್ರಕಾಶಗೊಳಿಸುತ್ತಾನೆ).

೩೩. ಎಲೈ ಅರ್ಜುನ, ಒಬ್ಬನೇ ಆದ ಸೂರ್ಯನು ಈ ಲೋಕವನ್ನೆಲ್ಲಾ ಹೇಗೆ ಪ್ರಕಾಶಗೊಳಿಸುತ್ತಾನೆಯೋ ಹಾಗೆಯೇ ಕ್ಷೇತ್ರಜ್ಞನು[1] ಸಮಸ್ತ ಕ್ಷೇತ್ರವನ್ನು[2] ಪ್ರಕಾಶಗೊಳಿಸುತ್ತಾನೆ.

[1] ಪರಮಾತ್ಮ (ಶ್ರೀಶಂಕರ).
[2] ಮಹಾಭೂತಗಳಿಂದ ಧೃತಿಯ ವರೆಗೆ (ಶ್ರೀಶಂಕರ).

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ॥ ೩೪ ॥**

ಯೇ (ಯಾರು) ಏವಂ (ಹೀಗೆ) ಕ್ಷೇತ್ರ-ಕ್ಷೇತ್ರಜ್ಞಯೋಃ (ಕ್ಷೇತ್ರಕ್ಷೇತ್ರಜ್ಞರ) ಅಂತರಂ (ಭೇದವನ್ನು) ಚ (ಮತ್ತು) ಭೂತ-ಪ್ರಕೃತಿ-ಮೋಕ್ಷಂ (ಭೂತಗಳ ಪ್ರಕೃತಿಯ ಮೋಕ್ಷವನ್ನು) ಜ್ಞಾನಚಕ್ಷುಷಾ (ಜ್ಞಾನಚಕ್ಷುವಿನಿಂದ) ವಿದುಃ (ತಿಳಿಯುತ್ತಾರೆಯೋ) ತೇ (ಅವರು) ಪರಂ (ಬ್ರಹ್ಮವನ್ನು) ಯಾಂತಿ (ಹೊಂದುತ್ತಾರೆ).

೩೪. ಹೀಗೆ ಕ್ಷೇತ್ರ-ಕ್ಷೇತ್ರಜ್ಞರ ಭೇದವನ್ನು ಮತ್ತು ಭೂತಗಳ ಪ್ರಕೃತಿಯ ಮೋಕ್ಷವನ್ನು[1] ಯಾರು ಜ್ಞಾನಚಕ್ಷುವಿನಿಂದ[2] ತಿಳಿದುಕೊಳ್ಳುತ್ತಾರೆಯೋ ಅವರು ಬ್ರಹ್ಮವನ್ನು ಹೊಂದುತ್ತಾರೆ.

[1] ಪ್ರಕೃತಿ ಎಂದರೆ ಅವಿದ್ಯಾಲಕ್ಷಣವುಳ್ಳ ಅವ್ಯಕ್ತ; ಅದರ ಮೋಕ್ಷವನ್ನು ಎಂದರೆ ಅಭಾವಹೊಂದುವಿಕೆಯನ್ನು (ಶ್ರೀಶಂಕರ).

[2] ಶಾಸ್ತ್ರಾಚಾರ್ಯರ ಉಪದೇಶದಿಂದ ತನ್ನ ಅನುಭವಕ್ಕೆ ಬಂದಿರುವ ಜ್ಞಾನವೇ ಚಕ್ಷು (ಶ್ರೀಶಂಕರ).

ಇತಿ ಕ್ಷೇತ್ರಕ್ಷೇತ್ರಜ್ಞಯೋಗೋ ನಾಮ
ತ್ರಯೋದಶೋಽಧ್ಯಾಯಃ ।

ಕ್ಷೇತಕ್ಷೇತ್ರಜ್ಞಯೋಗವೆಂಬ ಹದಿಮೂರನೆಯ
ಅಧ್ಯಾಯವು ಮುಗಿಯಿತು.

# ಹದಿನಾಲ್ಕನೆಯ ಅಧ್ಯಾಯ

## ಗುಣತ್ರಯವಿಭಾಗಯೋಗ

### ಶ್ರೀಭಗವಾನ್ ಉವಾಚ

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥ ೧ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಯತ್ (ಯಾವುದನ್ನು) ಜ್ಞಾತ್ವಾ (ಅರಿತುಕೊಂಡು) ಸರ್ವೇ (ಎಲ್ಲಾ) ಮುನಯಃ (ಮುನಿಗಳು) ಇತಃ (ಇಲ್ಲಿಂದ) ಪರಾಂ ಸಿದ್ಧಿಂ (ಪರಮಸಿದ್ಧಿಯನ್ನು) ಗತಾಃ (ಹೊಂದಿದರೋ) [ಅಂತಹ] ಜ್ಞಾನಾನಾಂ (ಜ್ಞಾನಗಳಲ್ಲಿ) ಉತ್ತಮಂ (ಉತ್ತಮವಾದ) ಪರಂ (ಶ್ರೇಷ್ಠವಾದ) ಜ್ಞಾನಂ (ಜ್ಞಾನವನ್ನು) ಭೂಯಃ (ಪುನಃ) ಪ್ರವಕ್ಷ್ಯಾಮಿ (ಹೇಳುತ್ತೇನೆ).

### ಶ್ರೀಕೃಷ್ಣನು ಹೇಳಿದನು

೧. ಯಾವುದನ್ನು ಅರಿತುಕೊಂಡು ಮುನಿಗಳೆಲ್ಲರೂ ಇಲ್ಲಿಂದ[1] ಪರಮಸಿದ್ಧಿಯನ್ನು ಹೊಂದಿದರೋ (ಅಂತಹ) ಜ್ಞಾನಗಳಲ್ಲಿ[2] ಉತ್ತಮವೂ ಶ್ರೇಷ್ಠವೂ ಆದ ಜ್ಞಾನವನ್ನು[3] ಪುನಃ ಹೇಳುತ್ತೇನೆ.

[1] ದೇಹಬಂಧನದಿಂದ (ಶ್ರೀಶಂಕರ). ಸಂಸಾರಮಂಡಲದಿಂದ (ಶ್ರೀರಾಮಾನುಜ).

[2] ಯಜ್ಞವೇ ಮೊದಲಾದ ಜ್ಞೇಯವಸ್ತುವಿಷಯವಾದ ಜ್ಞಾನಗಳಲ್ಲಿ (ಶ್ರೀಶಂಕರ). ಸಮಸ್ತಪ್ರಕೃತಿಪುರುಷರ ವಿಷಯವಾದ ಜ್ಞಾನಗಳಲ್ಲಿ (ಶ್ರೀರಾಮಾನುಜ).

[3] ಪರವಸ್ತುವಿಷಯವಾದ ಜ್ಞಾನವನ್ನು (ಶ್ರೀಶಂಕರ). ಪ್ರಕೃತಿಪುರುಷರಲ್ಲಿ ಅಂತರ್ಗತವಾದ ಸತ್ತ್ವಾದಿ ಗುಣಗಳ ವಿಷಯವಾದ ಜ್ಞಾನವನ್ನು (ಶ್ರೀರಾಮಾನುಜ).

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೨ ॥**

ಇದಂ (ಈ) ಜ್ಞಾನಂ (ಜ್ಞಾನವನ್ನು) ಉಪಾಶ್ರಿತ್ಯ (ಆಶ್ರಯಿಸಿಕೊಂಡು) ಮಮ (ನನ್ನ) ಸಾಧರ್ಮ್ಯಂ (ಸಾಧರ್ಮ್ಯವನ್ನು) ಆಗತಾಃ (ಹೊಂದಿದವರು) ಸರ್ಗೇ ಅಪಿ (ಸೃಷ್ಟಿಕಾಲದಲ್ಲಿಯೂ) ನ ಉಪಜಾಯಂತೇ (ಹುಟ್ಟುವುದಿಲ್ಲ) ಪ್ರಲಯೇ ಚ (ಮತ್ತು ಪ್ರಳಯಕಾಲದಲ್ಲಿ) ನ ವ್ಯಥಂತಿ (ವ್ಯಥೆಪಡುವುದಿಲ್ಲ).

೨. ಈ ಜ್ಞಾನವನ್ನು ಆಶ್ರಯಿಸಿಕೊಂಡು ನನ್ನ ಸಾಧರ್ಮ್ಯವನ್ನು[1] ಹೊಂದಿದವರು ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ; ಪ್ರಳಯಕಾಲದಲ್ಲಿ ವ್ಯಥೆಪಡುವುದಿಲ್ಲ.

1 ಪರಮೇಶ್ವರನ ಸ್ವರೂಪವನ್ನು ಹೊಂದಿದವರು (ಶ್ರೀಶಂಕರ). ಭಗವಂತನೊಂದಿಗೆ ಸಾಮ್ಯವನ್ನು ಹೊಂದಿದವರು (ಶ್ರೀರಾಮಾನುಜ).

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ ೩ ॥**

ಭಾರತ (ಎಲೈ ಅರ್ಜುನನೆ) ಮಹದ್ಬ್ರಹ್ಮ (ಮಹತ್ತಾದ ಪ್ರಕೃತಿಯು) ಮಮ (ನನ್ನ) ಯೋನಿಃ (ಯೋನಿಯು) ತಸ್ಮಿನ್ (ಅದರಲ್ಲಿ) ಅಹಂ (ನಾನು) ಗರ್ಭಂ (ಗರ್ಭವನ್ನು) ದಧಾಮಿ (ಇಡುತ್ತೇನೆ) ತತಃ (ಅದರಿಂದ) ಸರ್ವಭೂತಾನಾಂ (ಸರ್ವಪ್ರಾಣಿಗಳ) ಸಂಭವಃ (ಉತ್ಪತ್ತಿಯು) ಭವತಿ (ಆಗುತ್ತದೆ).

೩. ಎಲೈ ಅರ್ಜುನ, ಮಹತ್ತಾದ ಪ್ರಕೃತಿಯೇ ನನ್ನ ಯೋನಿ. ಅದರಲ್ಲಿ ನಾನು ಗರ್ಭವನ್ನು ಇಡುತ್ತೇನೆ;[1] ಅದರಿಂದ ಸರ್ವಪ್ರಾಣಿಗಳ ಉತ್ಪತ್ತಿಯು ಆಗುತ್ತದೆ.

1 ಕ್ಷೇತ್ರಜ್ಞನನ್ನು ಕ್ಷೇತ್ರಕ್ಕೆ ಕೂಡಿಸುವುದು.

**ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪ ॥**

ಕೌಂತೇಯ (ಎಲೈ ಅರ್ಜುನನೆ) ಸರ್ವಯೋನಿಷು (ಸರ್ವಯೋನಿಗಳಲ್ಲಿ) ಯಾಃ (ಯಾವ) ಮೂರ್ತಯಃ (ಶರೀರಗಳು) ಸಂಭವಂತಿ (ಹುಟ್ಟುತ್ತಿರುವುವೋ) ತಾಸಾಂ (ಅವುಗಳ) ಯೋನಿಃ (ಯೋನಿಯು) ಮಹತ್ ಬ್ರಹ್ಮ (ಮಹತ್ತಾದ ಪ್ರಕೃತಿ) ಅಹಂ (ನಾನು) ಬೀಜಪ್ರದಃ (ಬೀಜಪ್ರದನಾದ) ಪಿತಾ (ತಂದೆ).

೪. ಎಲೈ ಅರ್ಜುನ, ಸರ್ವಯೋನಿಗಳಲ್ಲಿಯೂ ಯಾವ ಶರೀರಗಳು ಹುಟ್ಟುತ್ತಿರುವುವೋ ಅವುಗಳಿಗೆ ಮಹತ್ ಪ್ರಕೃತಿಯು ಯೋನಿಯು, ನಾನು ಬೀಜಪ್ರದನಾದ ತಂದೆ.

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ ೫ ॥**

ಮಹಾಬಾಹೋ (ಎಲೈ ಮಹಾಬಾಹುವೆ) ಸತ್ತ್ವಂ (ಸತ್ತ್ವ) ರಜಃ (ರಜಸ್ಸು) ತಮಃ (ತಮಸ್ಸು) ಇತಿ (ಎಂಬ) ಪ್ರಕೃತಿಸಂಭವಾಃ (ಪ್ರಕೃತಿಯಿಂದ ಉಂಟಾದ) ಗುಣಾಃ (ಗುಣಗಳು) ಅವ್ಯಯಂ (ಅವ್ಯಯನಾದ) ದೇಹಿನಂ (ದೇಹವುಳ್ಳವನನ್ನು) ದೇಹೇ (ದೇಹದಲ್ಲಿ) ನಿಬಧ್ನಂತಿ (ಬಂಧಿಸುತ್ತವೆ).

೫. ಎಲೈ ಮಹಾಬಾಹು, ಸತ್ತ್ವ ರಜಸ್ಸು ತಮಸ್ಸು ಎಂಬ ಪ್ರಕೃತಿಯಿಂದ ಹುಟ್ಟಿದ ಗುಣಗಳು ಅವ್ಯಯನಾದ ಆತ್ಮನನ್ನು ದೇಹದಲ್ಲಿ ಬಂಧಿಸುತ್ತವೆ.

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬ ॥**

ಅನಘ (ಪಾಪರಹಿತನೆ) ತತ್ರ (ಅವುಗಳಲ್ಲಿ) ಸತ್ತ್ವಂ (ಸತ್ತ್ವಗುಣವು) ನಿರ್ಮಲತ್ವಾತ್ (ನಿರ್ಮಲವಾದುದರಿಂದ) ಪ್ರಕಾಶಕಂ (ಪ್ರಕಾಶಕವೂ) ಅನಾಮಯಂ (ಅನಾಮಯವೂ) [ಆಗಿದೆ] ಸುಖಸಂಗೇನ (ಸುಖಸಂಗದಿಂದಲೂ) ಜ್ಞಾನಸಂಗೇನ (ಜ್ಞಾನಸಂಗದಿಂದಲೂ) ಬಧ್ನಾತಿ (ಬಂಧಿಸುತ್ತದೆ).

೬. ಎಲೈ ಪಾಪರಹಿತನೆ, ಅವುಗಳಲ್ಲಿ ಸತ್ತ್ವಗುಣವು ನಿರ್ಮಲವಾದುದರಿಂದ ಪ್ರಕಾಶಕವೂ ಅನಾಮಯವೂ[1] (ಆಗಿದೆ); ಅದು ಸುಖಸಂಗದಿಂದಲೂ ಜ್ಞಾನಸಂಗದಿಂದಲೂ (ಆತ್ಮನನ್ನು) ಬಂಧಿಸುತ್ತದೆ.

[1] ನಿರುಪದ್ರವವೂ.

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ ೭ ॥**

ಕೌಂತೇಯ (ಎಲೈ ಅರ್ಜುನನೆ) ರಜಃ (ರಜೋಗುಣವು) ರಾಗಾತ್ಮಕಂ (ರಾಗಾತ್ಮಕವೆಂದು) ವಿದ್ಧಿ (ತಿಳಿ) ತೃಷ್ಣಾಸಂಗಸಮುದ್ಭವಂ (ಅದು ತೃಷ್ಣೆ ಮತ್ತು ಸಂಗಗಳನ್ನು ಉಂಟುಮಾಡುವುದು) ತತ್ (ಅದು) ಕರ್ಮಸಂಗೇನ (ಕರ್ಮಸಂಗದಿಂದ) ದೇಹಿನಂ (ಆತ್ಮನನ್ನು) ನಿಬಧ್ನಾತಿ (ಬಂಧಿಸುತ್ತದೆ).

೭. ಎಲೈ ಅರ್ಜುನ, ರಜೋಗುಣವು ರಾಗಾತ್ಮಕವೆಂದು[1] ತಿಳಿ. ಅದು ತೃಷ್ಣೆ[2] ಮತ್ತು ಸಂಗ[3] ಇವುಗಳನ್ನು ಉಂಟುಮಾಡುವುದು. ಅದು ಕರ್ಮಸಂಗದಿಂದ[4] ಆತ್ಮನನ್ನು ಬಂಧಿಸುತ್ತದೆ.

[1] ವಿಷಯಾಸಕ್ತಿಯನ್ನು ಉಂಟುಮಾಡಲು ಕಾರಣವಾಗುತ್ತೆ (ಶ್ರೀರಾಮಾನುಜ).
[2] ಅಪ್ರಾಪ್ತ ವಸ್ತುವಿನಲ್ಲಿ ಅಭಿಲಾಷೆ (ಶ್ರೀಶಂಕರ). ಶಬ್ದಾದಿಸರ್ವವಿಷಯಗಳಲ್ಲಿ ಸ್ಪೃಹೆ (ಶ್ರೀರಾಮಾನುಜ).
[3] ಪ್ರಾಪ್ತವಸ್ತುವಿನಲ್ಲಿ ಪ್ರೀತಿರೂಪವಾದ ಸಂಶ್ಲೇಷ (ಶ್ರೀಶಂಕರ). ಪುತ್ರಮಿತ್ರಾದಿಗಳಲ್ಲಿ ಸಂಶ್ಲೇಷ (ಶ್ರೀರಾಮಾನುಜ).
[4] ದೃಷ್ಟಾದೃಷ್ಟಫಲಗಳಿಗಾಗಿ ಮಾಡುವ ಕರ್ಮಗಳಲ್ಲಿ ಆಸಕ್ತನಾಗುವುದು ಮತ್ತು ಅವುಗಳಲ್ಲಿ ತತ್ಪರನಾಗಿರುವುದು ಕರ್ಮಸಂಗ (ಶ್ರೀಶಂಕರ).

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ ೮ ॥**

ಭಾರತ (ಎಲೈ ಅರ್ಜುನನೆ) ತು (ಆದರೆ) ತಮಃ (ತಮೋಗುಣವು) ಅಜ್ಞಾನಜಂ (ಅಜ್ಞಾನದಿಂದ ಹುಟ್ಟಿದುದೆಂದೂ) ಸರ್ವದೇಹಿನಾಂ (ಸಮಸ್ತಪ್ರಾಣಿಗಳನ್ನು) ಮೋಹನಂ (ಮೋಹಪಡಿಸುವುದೆಂದೂ) ವಿದ್ಧಿ (ತಿಳಿ) ತತ್ (ಅದು) ಪ್ರಮಾದಾಲಸ್ಯ-ನಿದ್ರಾಭಿಃ (ಪ್ರಮಾದ ಆಲಸ್ಯ ನಿದ್ರೆ ಇವುಗಳಿಂದ) [ಆತ್ಮನನ್ನು] ನಿಬಧ್ನಾತಿ (ಬಂಧಿಸುವುದು).

೮. ಎಲೈ ಅರ್ಜುನ, ತಮೋಗುಣವು ಅಜ್ಞಾನದಿಂದ ಹುಟ್ಟಿದುದೆಂದೂ,[1] ಸಮಸ್ತಪ್ರಾಣಿಗಳನ್ನು ಮೋಹಪಡಿಸುವುದೆಂದೂ[2] ತಿಳಿ; ಅದು ಪ್ರಮಾದ ಆಲಸ್ಯ ನಿದ್ರೆ ಇವುಗಳಿಂದ (ಆತ್ಮನನ್ನು) ಬಂಧಿಸುತ್ತದೆ.

[1] ಶ್ರೀರಾಮಾನುಜಾಚಾರ್ಯರು 'ಅಜ್ಞಾನಜಂ' ಎಂಬುದಕ್ಕೆ 'ವಸ್ತುವಿನ ಯಾಥಾತ್ಮ್ಯಕ್ಕೆ ವಿಪರೀತವಿಷಯವಾದ ಜ್ಞಾನವನ್ನು ಉಂಟುಮಾಡುವಂತಾದ್ದು' ಎಂದರೆ ಅಜ್ಞಾನಜನಕವಾದುದು ಎಂದು ವ್ಯಾಖ್ಯಾನಮಾಡಿರುತ್ತಾರೆ.
[2] ಅವಿವೇಕವನ್ನು ಉಂಟುಮಾಡುವಂತಾದ್ದು (ಶ್ರೀಶಂಕರ).

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯ ॥**

ಭಾರತ (ಎಲೈ ಅರ್ಜುನನೆ) ಸತ್ತ್ವಂ (ಸತ್ತ್ವಗುಣವು) ಸುಖೇ (ಸುಖದಲ್ಲಿ) ಸಂಜಯತಿ (ಸಂಗವನ್ನುಂಟುಮಾಡುತ್ತದೆ) ಉತ (ಮತ್ತು) ರಜಃ (ರಜೋಗುಣವು) ಕರ್ಮಣಿ (ಕರ್ಮದಲ್ಲಿ) [ಸಂಗವನ್ನುಂಟುಮಾಡುತ್ತದೆ] ತು (ಆದರೆ) ತಮಃ (ತಮೋಗುಣವು) ಜ್ಞಾನಂ (ಜ್ಞಾನವನ್ನು) ಆವೃತ್ಯ (ಆವರಿಸಿಕೊಂಡು) ಪ್ರಮಾದೇ (ಪ್ರಮಾದದಲ್ಲಿ) ಸಂಜಯತಿ (ಸಂಗವನ್ನುಂಟುಮಾಡುತ್ತದೆ).

೯. ಎಲೈ ಅರ್ಜುನ, ಸತ್ತ್ವಗುಣವು ಸುಖದಲ್ಲಿ ಸಂಗವನ್ನುಂಟುಮಾಡುತ್ತದೆ, ರಜೋಗುಣವು ಕರ್ಮದಲ್ಲಿ (ಸಂಗವನ್ನುಂಟುಮಾಡುತ್ತದೆ); ಆದರೆ ತಮೋಗುಣವು ಜ್ಞಾನವನ್ನು ಆವರಿಸಿಕೊಂಡು ಪ್ರಮಾದದಲ್ಲಿ[1] ಸಂಗವನ್ನುಂಟುಮಾಡುತ್ತದೆ.

[1] ಮಾಡಬೇಕಾದ ಕಾರ್ಯವನ್ನು ಮಾಡದೇ ಇರುವುದು ಪ್ರಮಾದ.

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ॥ ೧೦ ॥**

ಭಾರತ (ಎಲೈ ಅರ್ಜುನನೆ) ಸತ್ತ್ವಂ (ಸತ್ತ್ವಗುಣವು) ರಜಃ (ರಜೋಗುಣವನ್ನೂ) ತಮಃ ಚ (ಮತ್ತು ತಮೋಗುಣವನ್ನೂ) ಅಭಿಭೂಯ (ತಿರಸ್ಕರಿಸಿ) ಭವತಿ (ಪ್ರಬಲವಾಗುತ್ತದೆ) ರಜಃ (ರಜೋಗುಣವು) ಸತ್ತ್ವಂ (ಸತ್ತ್ವಗುಣವನ್ನೂ) ತಮಃ ಚ ಏವ (ತಮೋಗುಣವನ್ನೂ) [ತಿರಸ್ಕರಿಸಿ ಪ್ರಬಲವಾಗುತ್ತದೆ] ತಥಾ (ಹಾಗೆಯೇ) ತಮಃ (ತಮೋಗುಣವು) ಸತ್ತ್ವಂ (ಸತ್ತ್ವಗುಣವನ್ನೂ) ರಜಃ (ರಜೋಗುಣವನ್ನೂ) [ತಿರಸ್ಕರಿಸಿ ಪ್ರಬಲವಾಗುತ್ತದೆ].

೧೦. ಎಲೈ ಅರ್ಜುನ, ರಜೋಗುಣವನ್ನೂ ತಮೋಗುಣವನ್ನೂ ತಿರಸ್ಕರಿಸಿ ಸತ್ತ್ವಗುಣವು ಪ್ರಬಲವಾಗುತ್ತದೆ; ಸತ್ತ್ವಗುಣವನ್ನೂ ತಮೋಗುಣವನ್ನೂ (ತಿರಸ್ಕರಿಸಿ) ರಜೋಗುಣವು (ಪ್ರಬಲವಾಗುತ್ತದೆ); ಹಾಗೆಯೇ ಸತ್ತ್ವಗುಣವನ್ನೂ ರಜೋಗುಣವನ್ನೂ (ತಿರಸ್ಕರಿಸಿ) ತಮೋಗುಣವು (ಪ್ರಬಲವಾಗುತ್ತದೆ).

[ಪ್ರಾಚೀನಕರ್ಮವಶದಿಂದಲೂ ದೇಹಕ್ಕೆ ಹಿತವಾಗಿರುವ ಆಹಾರದ ವೈಷಮ್ಯದಿಂದಲೂ ಸತ್ತ್ವಾದಿ ಗುಣಗಳು ಪರಸ್ಪರ ಉದ್ಭವಾಭಿಭವರೂಪದಿಂದ ಇರುವುವು— ಶ್ರೀರಾಮಾನುಜ.]

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ ೧೧ ॥**

ಯದಾ (ಯಾವಾಗ) ಅಸ್ಮಿನ್ (ಈ) ದೇಹೇ (ದೇಹದಲ್ಲಿ) ಸರ್ವದ್ವಾರೇಷು (ಸರ್ವದ್ವಾರಗಳಲ್ಲಿಯೂ) ಜ್ಞಾನಂ (ಜ್ಞಾನವು) [ಎಂಬ] ಪ್ರಕಾಶಃ (ಪ್ರಕಾಶವು) ಉಪಜಾಯತೇ (ಉಂಟಾಗುತ್ತದೆಯೋ) ತದಾ ಉತ (ಆಗಲೇ) ಸತ್ತ್ವಂ (ಸತ್ತ್ವಗುಣವು) ವಿವೃದ್ಧಂ ಇತಿ (ವೃದ್ಧಿಯಾಗಿದೆ ಎಂದು) ವಿದ್ಯಾತ್ (ತಿಳಿಯಬೇಕು).

೧೧. ಈ ದೇಹದ ಸಮಸ್ತ ಇಂದ್ರಿಯದ್ವಾರಗಳಲ್ಲಿಯೂ ಜ್ಞಾನವೆಂಬ ಪ್ರಕಾಶವು ಯಾವಾಗ ಉಂಟಾಗುತ್ತದೆಯೋ ಆಗ ಸತ್ತ್ವಗುಣವು ವೃದ್ಧಿಯಾಗಿದೆ ಎಂದು ತಿಳಿಯಬೇಕು.

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨ ॥**

ಭರತರ್ಷಭ (ಎಲೈ ಭರತಶ್ರೇಷ್ಠನೆ) ಲೋಭಃ (ಲೋಭ) ಪ್ರವೃತ್ತಿಃ (ಪ್ರವೃತ್ತಿ) ಕರ್ಮಣಾಂ (ಕರ್ಮಗಳ) ಆರಂಭಃ (ಪ್ರಾರಂಭ, ಉದ್ಯಮ) ಅಶಮಃ (ಅಶಮ)

ಸ್ಪೃಹಾ (ಸ್ಪೃಹೆ) ಏತಾನಿ (ಇವು) ರಜಸಿ ವಿವೃದ್ಧೇ (ರಜೋಗುಣವು ವೃದ್ಧಿಯನ್ನು ಹೊಂದಿದಾಗ) ಜಾಯಂತೇ (ಉಂಟಾಗುವುವು).

**೧೨.** ಎಲೈ ಭರತಶ್ರೇಷ್ಠನೆ, ರಜೋಗುಣವು ವೃದ್ಧಿಯನ್ನು ಹೊಂದಿದಾಗ ಲೋಭ[1] ಪ್ರವೃತ್ತಿ[2] ಕರ್ಮಗಳ ಪ್ರಾರಂಭ ಅಶಮ[3] ಸ್ಪೃಹೆ[4] ಇವು ಉಂಟಾಗುವುವು.

[1] ಪರದ್ರವ್ಯವನ್ನು ಎತ್ತಿಕೊಳ್ಳುವ ಇಚ್ಛೆ (ಶ್ರೀಶಂಕರ). ತನ್ನ ದ್ರವ್ಯವನ್ನು ತ್ಯಾಗಮಾಡದಿರುವ ಸ್ವಭಾವ (ಶ್ರೀರಾಮಾನುಜ).

[2] ಸಾಮಾನ್ಯಪ್ರವರ್ತನೆ (ಶ್ರೀಶಂಕರ). ಯಾವ ಪ್ರಯೋಜನವೂ ಉದ್ದೇಶವಾಗಿಲ್ಲದಿದ್ದರೂ ಏನನ್ನಾದರೂ ಮಾಡುವ ಸ್ವಭಾವ (ಶ್ರೀರಾಮಾನುಜ).

[3] ಅಶಾಂತಿ.

[4] ಸಾಮಾನ್ಯವಿಷಯಗಳಲ್ಲಿ ತೃಷ್ಣೆ (ಶ್ರೀಶಂಕರ). ವಿಷಯೇಚ್ಛೆ (ಶ್ರೀರಾಮಾನುಜ).

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ ೧೩ ॥**

ಕುರುನಂದನ (ಎಲೈ ಅರ್ಜುನನೆ) ಅಪ್ರಕಾಶಃ (ಅಪ್ರಕಾಶ) ಅಪ್ರವೃತ್ತಿಃ ಚ (ಅಪ್ರವೃತ್ತಿ) ಪ್ರಮಾದಃ (ಪ್ರಮಾದ) ಮೋಹಃ ಏವ ಚ (ಮತ್ತು ಮೋಹ) ಏತಾನಿ (ಇವು) ತಮಸಿ ವಿವೃದ್ಧೇ (ತಮೋಗುಣವು ವೃದ್ಧಿಯನ್ನು ಹೊಂದಿದಾಗ) ಜಾಯಂತೇ (ಉಂಟಾಗುವುವು).

**೧೩.** ಎಲೈ ಕುರುನಂದನ, ತಮೋಗುಣವು ವೃದ್ಧಿಯನ್ನು ಹೊಂದಿದಾಗ ಅಪ್ರಕಾಶ[1] ಅಪ್ರವೃತ್ತಿ[2] ಪ್ರಮಾದ[3] ಮತ್ತು ಮೋಹ[4] ಇವು ಉಂಟಾಗುವುವು.

[1] ಅವಿವೇಕ (ಶ್ರೀಶಂಕರ). ಜ್ಞಾನವು ಉದಯವಾಗದಿರುವುದು (ಶ್ರೀರಾಮಾನುಜ).

[2] ಪ್ರವೃತ್ತಿಯ ಅಭಾವ (ಶ್ರೀಶಂಕರ). ಸ್ತಬ್ಧತೆ (ಶ್ರೀರಾಮಾನುಜ).

[3] ಅಕಾರ್ಯದಲ್ಲಿ ಪ್ರವೃತ್ತಿ ಉಂಟಾದಾಗ ಅನಿಷ್ಟಫಲವಾಗುವುದೆಂಬ ಜ್ಞಾನವಿಲ್ಲದಿರುವುದು (ಶ್ರೀರಾಮಾನುಜ).

[4] ವಿಪರೀತಜ್ಞಾನ (ಶ್ರೀರಾಮಾನುಜ).

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥ ೧೪ ॥**

ಯದಾ ತು (ಯಾವಾಗ) ಸತ್ತ್ವೇ ಪ್ರವೃದ್ಧೇ (ಸತ್ತ್ವಗುಣವು ವೃದ್ಧಿಯಾಗಿರುವಾಗ) ದೇಹಭೃತ್ (ದೇಹಧಾರಿಯು) ಪ್ರಲಯಂ (ಪ್ರಳಯವನ್ನು) ಯಾತಿ

(ಹೊಂದುವನೋ) ತದಾ (ಆಗ) ಉತ್ತಮವಿದಾಂ (ಉತ್ತಮಜ್ಞಾನಿಗಳ) ಅಮಲಾನ್ (ಅಮಲವಾದ) ಲೋಕಾನ್ (ಲೋಕಗಳನ್ನು) ಪ್ರತಿಪದ್ಯತೇ (ಹೊಂದುತ್ತಾನೆ).

೧೪. ಸತ್ತ್ವಗುಣವು ವೃದ್ಧಿಯನ್ನು ಹೊಂದಿರುವಾಗ ದೇಹಧಾರಿಯು ಪ್ರಳಯವನ್ನು[1] ಹೊಂದಿದರೆ ಆಗ (ಅವನು) ಉತ್ತಮ ಜ್ಞಾನಿಗಳ[2] ಅಮಲವಾದ ಲೋಕಗಳನ್ನು ಹೊಂದುತ್ತಾನೆ.

1 ಮೃತ್ಯುವನ್ನು.

2 ಮಹದಾದಿತತ್ತ್ವಗಳನ್ನು ತಿಳಿದವರ (ಶ್ರೀಶಂಕರ). ಆತ್ಮಯಾಥಾತ್ಮ್ಯವನ್ನು ತಿಳಿದವರ (ಶ್ರೀರಾಮಾನುಜ).

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫ ॥**

ರಜಸಿ [ಪ್ರವೃದ್ಧೇ] (ರಜೋಗುಣವು ವೃದ್ಧಿಯನ್ನು ಹೊಂದಿರುವಾಗ) ಪ್ರಲಯಂ (ಪ್ರಳಯವನ್ನು) ಗತ್ವಾ (ಹೊಂದಿದಾಗ, ಹೊಂದಿ) ಕರ್ಮಸಂಗಿಷು (ಕರ್ಮಸಂಗಿಗಳಲ್ಲಿ) ಜಾಯತೇ (ಹುಟ್ಟುವನು) ತಥಾ (ಹಾಗೆಯೇ) ತಮಸಿ [ಪ್ರವೃದ್ಧೇ] (ತಮೋಗುಣವು ವೃದ್ಧಿಯನ್ನು ಹೊಂದಿರುವಾಗ) ಪ್ರಲೀನಃ (ಪ್ರಳಯವನ್ನು ಹೊಂದಿದವನು) ಮೂಢಯೋನಿಷು (ಪಶ್ವಾದಿಯೋನಿಗಳಲ್ಲಿ) ಜಾಯತೇ (ಹುಟ್ಟುವನು).

**೧೫.** ರಜೋಗುಣವು ವೃದ್ಧಿಯನ್ನು ಹೊಂದಿರುವಾಗ (ದೇಹಧಾರಿಯು) ಪ್ರಳಯವನ್ನು ಹೊಂದಿದರೆ ಕರ್ಮಸಂಗಿಗಳಲ್ಲಿ[1] ಹುಟ್ಟುವನು; ತಮೋಗುಣವು ವೃದ್ಧಿಯನ್ನು ಹೊಂದಿರುವಾಗ ಪ್ರಳಯವನ್ನು ಹೊಂದಿದವನು ಪಶ್ವಾದಿಯೋನಿಗಳಲ್ಲಿ ಹುಟ್ಟುವನು.

1 ಕರ್ಮಾಸಕ್ತಿಯುಳ್ಳ ಮನುಷ್ಯರಲ್ಲಿ (ಶ್ರೀಶಂಕರ).

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ ೧೬ ॥**

ಸುಕೃತಸ್ಯ (ಸಾತ್ತ್ವಿಕವಾದ) ಕರ್ಮಣಃ (ಕರ್ಮದ, ಕರ್ಮಕ್ಕೆ) ನಿರ್ಮಲಂ (ನಿರ್ಮಲವಾದ) ಸಾತ್ತ್ವಿಕಂ (ಸಾತ್ತ್ವಿಕವಾದ) ಫಲಂ (ಫಲವು) ಆಹುಃ (ಹೇಳುವರು) ರಜಸಃ ತು (ರಜಸ್ಸಿನ) ಫಲಂ (ಫಲವು) ದುಃಖಃ (ದುಃಖವು) ತಮಸಃ (ತಮಸ್ಸಿನ) ಫಲಂ (ಫಲವು) ಅಜ್ಞಾನಂ (ಅಜ್ಞಾನವು).

೧೬. ಸಾತ್ತ್ವಿಕವಾದ ಕರ್ಮಕ್ಕೆ ನಿರ್ಮಲವೂ ಸಾತ್ತ್ವಿಕವೂ ಆದ ಫಲ (ಉಂಟಾಗುವುದೆಂದು ತಿಳಿದವರು) ಹೇಳುವರು; ರಜಸ್ಸಿನ ಫಲ ದುಃಖ, ತಮಸ್ಸಿನ ಫಲ ಅಜ್ಞಾನ.

**ಸತ್ತ್ವಾತ್ ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥ ೧೭ ॥**

ಸತ್ತ್ವಾತ್ (ಸತ್ತ್ವಗುಣದಿಂದ) ಜ್ಞಾನಂ (ಜ್ಞಾನವು) ಸಂಜಾಯತೇ (ಉಂಟಾಗುತ್ತದೆ) ರಜಸಃ (ರಜೋಗುಣದಿಂದ) ಲೋಭಃ ಏವ (ಲೋಭವೇ) [ಉಂಟಾಗುತ್ತದೆ] ತಮಸಃ (ಮತ್ತು ತಮಸ್ಸಿನಿಂದ) ಪ್ರಮಾದ-ಮೋಹೌ (ಪ್ರಮಾದಮೋಹಗಳು) ಭವತಃ (ಉಂಟಾಗುತ್ತವೆ) ಚ ಅಜ್ಞಾನಂ ಏವ [ಭವತಿ] (ಅಜ್ಞಾನವೂ ಉಂಟಾಗುತ್ತದೆ).

೧೭. ಸತ್ತ್ವಗುಣದಿಂದ ಜ್ಞಾನವುಂಟಾಗುತ್ತದೆ, ರಜೋಗುಣದಿಂದ ಲೋಭವುಂಟಾಗುತ್ತದೆ; ತಮೋಗುಣದಿಂದ ಪ್ರಮಾದ ಮೋಹ ಅಜ್ಞಾನ ಇವು ಉಂಟಾಗುತ್ತವೆ.

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಸ್ಥಾ ಅಧೋ ಗಚ್ಛಂತಿ ತಾಮಸಾಃ ॥ ೧೮ ॥**

ಸತ್ತ್ವಸ್ಥಾಃ (ಸತ್ತ್ವದಲ್ಲಿರುವವರು) ಊರ್ಧ್ವಂ ಗಚ್ಛಂತಿ (ಮೇಲಕ್ಕೆ ಹೋಗುವರು) ರಾಜಸಾಃ (ರಜೋಗುಣದಲ್ಲಿರುವವರು) ಮಧ್ಯೇ (ಮಧ್ಯದಲ್ಲಿ) ತಿಷ್ಠಂತಿ (ನಿಲ್ಲುತ್ತಾರೆ) ಜಘನ್ಯ-ಗುಣ-ವೃತ್ತಸ್ಥಾಃ (ನಿಕೃಷ್ಟಗುಣವೃತ್ತದಲ್ಲಿರುವ) ತಾಮಸಾಃ (ತಾಮಸಿಕ ಮನುಷ್ಯರು) ಅಧಃ ಗಚ್ಛಂತಿ (ಕೆಳಕ್ಕೆ ಹೋಗುತ್ತಾರೆ).

೧೮. ಸತ್ತ್ವದಲ್ಲಿರುವವರು ಮೇಲಕ್ಕೆ[1] ಹೋಗುವರು, ರಜೋಗುಣದಲ್ಲಿರುವವರು ಮಧ್ಯದಲ್ಲಿ[2] ನಿಲ್ಲುವರು; ನಿಕೃಷ್ಟಗುಣದ ವೃತ್ತದಲ್ಲಿರುವ[3] ತಾಮಸಿಕ ಮನುಷ್ಯರು ಕೆಳಕ್ಕೆ[4] ಹೋಗುತ್ತಾರೆ.

1 ದೇವಲೋಕಾದಿಗಳಿಗೆ (ಶ್ರೀಶಂಕರ). ಮೋಕ್ಷವನ್ನು ಹೊಂದುತ್ತಾರೆ (ಶ್ರೀ ರಾಮಾನುಜ).

2 ಮನುಷ್ಯರೊಳಗೆ ಹುಟ್ಟುತ್ತಾರೆ (ಶ್ರೀಶಂಕರ).

3 ನಿದ್ರೆ ಆಲಸ್ಯ ಮೊದಲಾದುವು (ಶ್ರೀಶಂಕರ).

4 ಪಶ್ವಾದಿಯೋನಿಗಳನ್ನು ಹೊಂದುತ್ತಾರೆ.

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥**

ಯದಾ (ಯಾವಾಗ) ದ್ರಷ್ಟಾ (ದ್ರಷ್ಟೃವು) ಗುಣೇಭ್ಯಃ (ಗುಣಗಳಿಗಿಂತ) ಅನ್ಯಂ (ಬೇರೊಬ್ಬ) ಕರ್ತಾರಂ (ಕರ್ತೃವನ್ನು) ನ ಅನುಪಶ್ಯತಿ (ನೋಡುವುದಿಲ್ಲವೋ) ಗುಣೇಭ್ಯಃ ಚ (ಮತ್ತು ಗುಣಗಳಿಗಿಂತಲೂ) ಪರಂ (ವ್ಯತಿರಿಕ್ತನಾದವನನ್ನು) ವೇತ್ತಿ (ತಿಳಿಯುವನೋ) [ತದಾ (ಆಗ)] ಸಃ (ಅವನು) ಮದ್ಭಾವಂ (ನನ್ನ ಭಾವವನ್ನು) ಅಧಿಗಚ್ಛತಿ (ಹೊಂದುತ್ತಾನೆ).

೧೯. ದ್ರಷ್ಟೃವು ಯಾವಾಗ ಗುಣಗಳಿಗಿಂತ[1] ಬೇರೊಬ್ಬ ಕರ್ತೃವನ್ನು ನೋಡುವುದಿಲ್ಲವೋ[2] ಮತ್ತು ಗುಣಗಳಿಗಿಂತಲೂ ವ್ಯತಿರಿಕ್ತನಾದವನನ್ನು[3] ತಿಳಿಯುವನೋ (ಆಗ) ಅವನು ನನ್ನ ಭಾವವನ್ನು ಹೊಂದುವನು.

[1] ಕಾರ್ಯ-ಕರಣ-ವಿಷಯಾಕಾರದಿಂದ ಪರಿಣಾಮವನ್ನು ಹೊಂದಿರುವ ಗುಣಗಳಿಗಿಂತ (ಶ್ರೀಶಂಕರ).

[2] ಎಂದರೆ ಗುಣಗಳೇ ಎಲ್ಲಾ ಅವಸ್ಥೆಗಳನ್ನು ಹೊಂದಿ ಸರ್ವಕರ್ಮಗಳನ್ನು ಮಾಡುವುವು ಎಂದು ಅರಿತುಕೊಳ್ಳುವನೋ (ಶ್ರೀಶಂಕರ).

[3] ಗುಣವ್ಯಾಪಾರಗಳಿಗೆ ಸಾಕ್ಷಿಯಾಗಿರುವ ಆತ್ಮನನ್ನು (ಶ್ರೀಶಂಕರ).

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥**

ದೇಹೀ (ದೇಹಿಯು) ದೇಹ-ಸಮುದ್ಭವಾನ್ (ದೇಹೋತ್ಪತ್ತಿಗೆ ಕಾರಣವಾಗಿರುವ) ಏತಾನ್ ತ್ರೀನ್ ಗುಣಾನ್ (ಈ ಮೂರು ಗುಣಗಳನ್ನು) ಅತೀತ್ಯ (ದಾಟಿ) ಜನ್ಮ-ಮೃತ್ಯು-ಜರಾ-ದುಃಖೈಃ (ಜನ್ಮ ಮೃತ್ಯು ಮುಪ್ಪು ಇವುಗಳ ದುಃಖಗಳಿಂದ) ವಿಮುಕ್ತಃ (ಬಿಡಲ್ಪಟ್ಟವನಾಗಿ) ಅಮೃತಂ (ಅಮೃತತ್ವವನ್ನು) ಅಶ್ನುತೇ (ಹೊಂದುತ್ತಾನೆ).

೨೦. ದೇಹಿಯು ದೇಹೋತ್ಪತ್ತಿಗೆ ಕಾರಣವಾಗಿರುವ[1] ಈ ಮೂರು ಗುಣಗಳನ್ನು ದಾಟಿ, ಜನ್ಮ ಮೃತ್ಯು ಮುಪ್ಪು ಇವುಗಳ ದುಃಖಗಳಿಂದ ಬಿಡಲ್ಪಟ್ಟವನಾಗಿ ಅಮೃತತ್ವವನ್ನು ಹೊಂದುತ್ತಾನೆ.

[1] ದೇಹಾಕಾರವಾಗಿ ಪರಿಣಾಮವನ್ನು ಹೊಂದಿರುವ ಪ್ರಕೃತಿಯಿಂದ ಉಂಟಾದ (ಶ್ರೀರಾಮಾನುಜ).

ಅರ್ಜುನ ಉವಾಚ

**ಕೈರ್ಲಿಂಗೈಸ್ತ್ರೀನ್ ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥ ೨೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)—ಪ್ರಭೋ (ಎಲೈ ಪ್ರಭುವೆ) ಕೈಃ ಲಿಂಗೈಃ (ಯಾವ ಚಿಹ್ನೆಗಳಿಂದ) ಏತಾನ್ (ಈ) ತ್ರೀನ್ ಗುಣಾನ್ (ಮೂರು ಗುಣಗಳನ್ನು) ಅತೀತಃ (ದಾಟಿದವನು) ಭವತಿ (ಯುಕ್ತನಾಗಿರುತ್ತಾನೆ) ಕಿಮಾಚಾರಃ (ಅವನ ಆಚಾರವು ಎಂತಹದು) ಕಥಂ ಚ (ಹೇಗೆ) ಏತಾನ್ (ಈ) ತ್ರೀನ್ ಗುಣಾನ್ (ಮೂರು ಗುಣಗಳನ್ನು) ಅತಿವರ್ತತೇ (ಅತಿಕ್ರಮಿಸಿರುವನು).

ಅರ್ಜುನನು ಹೇಳಿದನು

೨೧. ಎಲೈ ಪ್ರಭು, ಈ ಮೂರು ಗುಣಗಳನ್ನು ದಾಟಿದವನು ಯಾವ ಚಿಹ್ನೆಗಳಿಂದ ಯುಕ್ತನಾಗಿರುತ್ತಾನೆ? ಅವನ ಆಚಾರ ಎಂತಹದು? ಮತ್ತು ಈ ಮೂರು ಗುಣಗಳನ್ನು ಹೇಗೆ ಅತಿಕ್ರಮಿಸಿರುತ್ತಾನೆ?

ಶ್ರೀಭಗವಾನ್ ಉವಾಚ

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)— ಪಾಂಡವ (ಎಲೈ ಅರ್ಜುನನೆ) ಪ್ರಕಾಶಂ (ಪ್ರಕಾಶವನ್ನು) ಪ್ರವೃತ್ತಿಂ (ಪ್ರವೃತ್ತಿಯನ್ನು) ಮೋಹಂ ಏವ ಚ (ಮತ್ತು ಮೋಹವನ್ನು) ಸಂಪ್ರವೃತ್ತಾನಿ (ಬಂದೊದಗಿದವುಗಳನ್ನು) [ಯಃ (ಯಾವನು)] ನ ದ್ವೇಷ್ಟಿ (ದ್ವೇಷಿಸುವುದಿಲ್ಲವೋ) ನಿವೃತ್ತಾನಿ (ಹೋದವುಗಳನ್ನು) ನ ಕಾಂಕ್ಷತಿ (ಬಯಸುವುದಿಲ್ಲವೋ)—

ಶ್ರೀಕೃಷ್ಣನು ಹೇಳಿದನು

೨೨. ಎಲೈ ಅರ್ಜುನ, ಯಾವನು ಪ್ರಕಾಶ[1] ಪ್ರವೃತ್ತಿ[2] ಮೋಹ[3] ಇವುಗಳು ಬಂದರೂ ದ್ವೇಷಿಸುವುದಿಲ್ಲವೋ, ಹೋದರೂ ಬಯಸುವುದಿಲ್ಲವೋ—

[1] ಇದು ಸತ್ತ್ವದ ಕಾರ್ಯ.
[2] ಇದು ರಜಸ್ಸಿನ ಕಾರ್ಯ.
[3] ಇದು ತಮಸ್ಸಿನ ಕಾರ್ಯ.

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥ ೨೩ ॥**

ಯಃ (ಯಾವನು) ಉದಾಸೀನವತ್ ಆಸೀನಃ (ಉದಾಸೀನನಂತೆ ಇರುವವನಾಗಿ) ಗುಣೈಃ (ಗುಣಗಳಿಂದ) ನ ವಿಚಾಲ್ಯತೇ (ವಿಚಲಿತನಾಗುವುದಿಲ್ಲವೋ)

ಯಃ (ಯಾವನು) ಗುಣಾಃ (ಗುಣಗಳು) ವರ್ತಂತೇ (ವರ್ತಿಸುತ್ತವೆ) ಇತಿ ಏವ (ಎಂದು) ಅವತಿಷ್ಠತಿ (ಇರುವನೋ) ನ ಇಂಗತೇ (ಚಲಿಸದೆ ಇರುವನೋ)—

೨೩. ಯಾವನು ಉದಾಸೀನನಂತೆ[1] ಇರುವವನಾಗಿ ಗುಣಗಳಿಂದ ವಿಚಲಿತನಾಗುವುದಿಲ್ಲವೋ, 'ಗುಣಗಳು ವರ್ತಿಸುತ್ತವೆ' ಎಂದು (ತಿಳಿ)ದಿರುತ್ತಾನೆಯೋ, ಚಲಿಸದೆ ಇರುವನೋ[2]—

[1] ಯಾರ ಪಕ್ಷವನ್ನೂ ಸೇರದೆ ಇರುವವನಂತೆ (ಶ್ರೀಶಂಕರ). ತ್ರಿಗುಣಗಳಿಗಿಂತ ವ್ಯತಿರಿಕ್ತವಾದ ಆತ್ಮಾವಲೋಕನದ ತೃಪ್ತಿಯಿಂದ ಇತರ ವಿಷಯಗಳಲ್ಲಿ ಉದಾಸೀನನಾಗಿರುವಂತೆ (ಶ್ರೀರಾಮಾನುಜ).

[2] ಸ್ವರೂಪದಿಂದ (ಶ್ರೀಶಂಕರ).

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥**

[ಯಃ (ಯಾವನು)] ಸಮದುಃಖಸುಖಃ (ಸುಖದುಃಖಗಳಲ್ಲಿ ಸಮನಾಗಿರುವನೋ) ಸ್ವಸ್ಥಃ (ಸ್ವಸ್ಥನೋ) ಸಮ-ಲೋಷ್ಟಾಶ್ಮ-ಕಾಂಚನಃ (ಮಣ್ಣು ಹೆಂಟೆ ಕಲ್ಲು ಚಿನ್ನ ಇವುಗಳನ್ನು ಸಮವಾಗಿ ನೋಡುವನೋ) ತುಲ್ಯಪ್ರಿಯಾಪ್ರಿಯಃ (ಪ್ರಿಯಾಪ್ರಿಯಗಳಲ್ಲಿ ಸಮನಾಗಿರುವನೋ) ಧೀರಃ (ಧೀರನೋ) ತುಲ್ಯನಿಂದಾತ್ಮಸಂಸ್ತುತಿಃ (ಸ್ತುತಿ ನಿಂದೆಗಳಲ್ಲಿ ಸಮನಾಗಿರುವನೋ)—

೨೪. (ಯಾವನು) ಸುಖದುಃಖಗಳಲ್ಲಿ ಸಮನಾಗಿರುವನೋ, ಸ್ವಸ್ಥನೋ,[1] ಮಣ್ಣು ಕಲ್ಲು ಚಿನ್ನಗಳನ್ನು ಸಮವಾಗಿ ನೋಡುವನೋ, ಪ್ರಿಯಾಪ್ರಿಯಗಳಲ್ಲಿ ಸಮನಾಗಿರುವನೋ, ಧೀರನೋ,[2] ಸ್ತುತಿನಿಂದೆಗಳಲ್ಲಿ ಸಮನಾಗಿರುವನೋ—

[1] ತನ್ನ ಆತ್ಮನಲ್ಲಿ ನೆಲೆಯನ್ನು ಹೊಂದಿ ಪ್ರಸನ್ನನಾಗಿರುವವನು (ಶ್ರೀಶಂಕರ). ಸಮಚಿತ್ತನಾದವನು (ಶ್ರೀರಾಮಾನುಜ).

[2] ಬುದ್ಧಿವಂತನು (ಶ್ರೀಶಂಕರ). ಪ್ರಕೃತಿ ಮತ್ತು ಆತ್ಮ ಇವುಗಳ ವಿವೇಕವನ್ನು ಅರಿತವನು (ಶ್ರೀರಾಮಾನುಜ).

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫ ॥**

[ಯಃ (ಯಾವನು)] ಮಾನಾಪಮಾನಯೋಃ (ಮಾನಾಪಮಾನಗಳಲ್ಲಿ) ತುಲ್ಯಃ (ಸಮನಾಗಿರುವನೋ) ಮಿತ್ರಾರಿಪಕ್ಷಯೋಃ (ಶತ್ರುಮಿತ್ರಪಕ್ಷಗಳಲ್ಲಿ) ತುಲ್ಯಃ

(ಸಮನಾಗಿರುವನೋ) ಸರ್ವಾರಂಭಪರಿತ್ಯಾಗೀ (ಸಮಸ್ತಕರ್ಮಗಳನ್ನು ಬಿಟ್ಟಿರುತ್ತಾನೆಯೋ) ಸಃ (ಅವನು) ಗುಣಾತೀತಃ (ಗುಣಾತೀತನೆಂದು) ಉಚ್ಯತೇ (ಹೇಳಲ್ಪಡುತ್ತಾನೆ).

**೨೫.** (ಯಾವನು) ಮಾನಾಪಮಾನಗಳಲ್ಲಿ ಸಮಬುದ್ಧಿಯುಳ್ಳವನೋ, ಶತ್ರುಮಿತ್ರಪಕ್ಷಗಳಲ್ಲಿ ಸಮಚಿತ್ತನಾಗಿರುವನೋ, ಸಮಸ್ತಕರ್ಮಗಳನ್ನು[1] ಬಿಟ್ಟಿರುತ್ತಾನೆಯೋ ಅವನು ಗುಣಾತೀತನು ಎಂದು ಹೇಳಲ್ಪಡುತ್ತಾನೆ.

[1] ಇಹಲೋಕದ ಮತ್ತು ಪರಲೋಕದ ಫಲಕ್ಕಾಗಿ ಮಾಡುವ ಕರ್ಮಗಳನ್ನು ಬಿಟ್ಟಿರುವವನು.

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥**

ಯಃ ಚ (ಮತ್ತು ಯಾವನು) ಮಾಂ (ನನ್ನನ್ನು) ಅವ್ಯಭಿಚಾರೇಣ (ಐಕಾಂತಿಕವಾದ) ಭಕ್ತಿಯೋಗೇನ (ಭಕ್ತಿಯೋಗದ ಮೂಲಕ) ಸೇವತೇ (ಸೇವಿಸುತ್ತಾನೆಯೋ) ಸಃ (ಅವನು) ಏತಾನ್ ಗುಣಾನ್ (ಈ ಗುಣಗಳನ್ನು) ಅತೀತ್ಯ (ದಾಟಿ) ಬ್ರಹ್ಮಭೂಯಾಯ (ಬ್ರಹ್ಮಭಾವವನ್ನು ಹೊಂದಲು) ಕಲ್ಪತೇ (ಸಮರ್ಥನಾಗುತ್ತಾನೆ).

**೨೬.** ಮತ್ತು ಯಾವನು ನನ್ನನ್ನು ಐಕಾಂತಿಕ ಭಕ್ತಿಯೋಗದಿಂದ ಸೇವಿಸುತ್ತಾನೆಯೋ ಅವನು ಈ ಗುಣಗಳನ್ನು ದಾಟಿ ಬ್ರಹ್ಮಭಾವವನ್ನು ಹೊಂದಲು ಸಮರ್ಥನಾಗುತ್ತಾನೆ.

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥**

ಹಿ (ಏಕೆಂದರೆ) ಅಹಂ (ನಾನು) ಅವ್ಯಯಸ್ಯ (ಅವ್ಯಯವೂ) ಅಮೃತಸ್ಯ ಚ (ಅಮೃತವೂ) [ಆದ] ಬ್ರಹ್ಮಣಃ (ಬ್ರಹ್ಮದ) ಶಾಶ್ವತಸ್ಯ (ಶಾಶ್ವತವಾದ) ಧರ್ಮಸ್ಯ ಚ (ಧರ್ಮದ) ಐಕಾಂತಿಕಸ್ಯ (ಐಕಾಂತಿಕವಾದ) ಸುಖಸ್ಯ ಚ (ಸುಖದ) ಪ್ರತಿಷ್ಠಾ (ಆಧಾರ).

**೨೭.** ಏಕೆಂದರೆ ನಾನು ಅವ್ಯಯವಾಗಿಯೂ ಅಮೃತವಾಗಿಯೂ ಇರುವ ಬ್ರಹ್ಮಕ್ಕೂ, ಶಾಶ್ವತವಾದ ಧರ್ಮಕ್ಕೂ, ಐಕಾಂತಿಕವಾದ ಸುಖಕ್ಕೂ ಆಧಾರನಾಗಿರುತ್ತೇನೆ.

[ಶ್ರೀಶಂಕರಾಚಾರ್ಯರು 'ಅಹಂ ಬ್ರಹ್ಮಣಃ ಪ್ರತಿಷ್ಠಾ' ಎಂಬುದರ ಮೇಲೆ ಮೂರು ವಿಧವಾಗಿ ವ್ಯಾಖ್ಯಾನಮಾಡಿರುತ್ತಾರೆ:

1) ಅಮೃತಾದಿಸ್ವಭಾವವುಳ್ಳ ಪರಮಾನಂದರೂಪವಾದ ಪರಮಾತ್ಮನಿಗೆ (ಬ್ರಹ್ಮಕ್ಕೆ) ಪ್ರತ್ಯಗಾತ್ಮನು ಪ್ರತಿಷ್ಠೆ; ಸಮ್ಯಗ್ ಜ್ಞಾನದಿಂದ ಪ್ರತ್ಯಗಾತ್ಮನೇ ಪರಮಾತ್ಮನೆಂದು ನಿಶ್ಚಯವಾಗುತ್ತದೆ. ಇದನ್ನೇ 'ಬ್ರಹ್ಮಭೂಯಾಯ ಕಲ್ಪತೇ' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿರುತ್ತದೆ.

2) ಯಾವ ಈಶ್ವರಶಕ್ತಿಯಿಂದ ಭಕ್ತಾನುಗ್ರಹ ಮೊದಲಾದ ಪ್ರಯೋಜನಕ್ಕಾಗಿ ಬ್ರಹ್ಮವು ಪ್ರವರ್ತಿಸುವುದೋ (ಪ್ರತಿಷ್ಠತೇ) ಆ ಶಕ್ತಿಯಾದ ಬ್ರಹ್ಮವೇ ಭಗವಂತನು ('ನಾನು'); ಏಕೆಂದರೆ ಶಕ್ತಿಯೂ ಶಕ್ತಿಯುಳ್ಳ ಬ್ರಹ್ಮವೂ (ಶಕ್ತಿ-ಶಕ್ತಿಮತೋಃ) ಅಭಿನ್ನವಾಗಿರುತ್ತವೆ.

3) ಇಲ್ಲಿ 'ಬ್ರಹ್ಮ' ಎಂದರೆ ಸವಿಕಲ್ಪವಾಗಿರುವ ಬ್ರಹ್ಮ; ಏಕೆಂದರೆ ಅದು ಬ್ರಹ್ಮ ಶಬ್ದಕ್ಕೆ ವಾಚ್ಯವಾಗಿರುವುದು. ಅಮೃತವೂ ಅವ್ಯಯವೂ ಆದ ಬ್ರಹ್ಮಕ್ಕೆ ನಿರ್ವಿಕಲ್ಪನೂ ಅವಾಚ್ಯನೂ ಆದ ಭಗವಂತನು ('ನಾನು') ಪ್ರತಿಷ್ಠೆ ಎಂದರೆ ಆಧಾರ.

ಶ್ರೀರಾಮಾನುಜಭಾಷ್ಯದ ಪ್ರಕಾರ ಇಲ್ಲಿ ಬ್ರಹ್ಮಶಬ್ದದಿಂದ ಪರಮಾತ್ಮನು ಹೇಳಲ್ಪಡ ಲಿಲ್ಲ; ಬ್ರಹ್ಮವೆಂದರೆ ಜೀವಾತ್ಮ; 'ನಾನು ಅವ್ಯಯವೂ ಅಮೃತವೂ ಆದ ಜೀವನಿಗೆ ಆಧಾರ' ಎಂದು ಅರ್ಥವಾಗುತ್ತದೆ.

ಇತಿ ಗುಣತ್ರಯವಿಭಾಗಯೋಗೋ ನಾಮ
ಚತುರ್ದಶೋಽಧ್ಯಾಯಃ ।

ಗುಣತ್ರಯವಿಭಾಗಯೋಗವೆಂಬ ಹದಿನಾಲ್ಕನೆಯ
ಅಧ್ಯಾಯವು ಮುಗಿಯಿತು.

# ಹದಿನೈದನೆಯ ಅಧ್ಯಾಯ

## ಪುರುಷೋತ್ತಮಯೋಗ

ಶ್ರೀಭಗವಾನ್ ಉವಾಚ

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಊರ್ಧ್ವಮೂಲಂ (ಮೇಲೆ ಬುಡವುಳ್ಳ) ಅಧಃಶಾಖಂ (ಕೆಳಗೆ ಶಾಖೆಗಳುಳ್ಳ) ಅಶ್ವತ್ಥಂ (ಅಶ್ವತ್ಥವನ್ನು) ಅವ್ಯಯಂ (ಅವ್ಯಯವೆಂಬುದಾಗಿ) [ಶಾಸ್ತ್ರಗಳು] ಪ್ರಾಹುಃ (ಹೇಳುತ್ತವೆ) ಛಂದಾಂಸಿ (ಛಂದಸ್ಸುಗಳು) ಯಸ್ಯ (ಯಾವುದರ) ಪರ್ಣಾನಿ (ಎಲೆಗಳೋ) ತಂ (ಅದನ್ನು) ಯಃ (ಯಾವನು) ವೇದ (ತಿಳಿಯುತ್ತಾನೆಯೋ) ಸಃ (ಅವನು) ವೇದವಿತ್ (ವೇದವನ್ನು ತಿಳಿದವನು).

ಶ್ರೀಕೃಷ್ಣನು ಹೇಳಿದನು

೧. ಮೇಲೆ[1] ಬುಡವುಳ್ಳ ಕೆಳಗೆ[2] ಶಾಖೆಗಳುಳ್ಳ ಅಶ್ವತ್ಥವೃಕ್ಷವು[3] ಅವ್ಯಯವಾಗಿರುವುದೆಂದು[4] (ಶಾಸ್ತ್ರಗಳು ಹೇಳುವುವು). ಅದರ ಎಲೆಗಳು[5] ಛಂದಸ್ಸುಗಳು. ಅದನ್ನು ಯಾವನು ತಿಳಿಯುತ್ತಾನೆಯೋ ಅವನು ವೇದವನ್ನು ತಿಳಿದವನು.

[1] ಅವ್ಯಕ್ತಮಾಯಾಶಕ್ತಿಯುಳ್ಳ ಬ್ರಹ್ಮವು 'ಊರ್ಧ್ವಂ' ಎಂದು ಹೇಳಲ್ಪಟ್ಟಿದೆ. ಅದು ಇದಕ್ಕೆ ಮೂಲ; ಆದುದರಿಂದ ಈ ಸಂಸಾರವೃಕ್ಷವು 'ಊರ್ಧ್ವಮೂಲಃ' ಎಂದು ಹೇಳಲ್ಪಟ್ಟಿದೆ (ಶ್ರೀಶಂಕರ).

[2] ಮಹತ್ತು ಅಹಂಕಾರ ತನ್ಮಾತ್ರೆಗಳು ಮೊದಲಾದುವು ಕೆಳಗೆ ಇರುವುದರಿಂದ 'ಅಧಃಶಾಖಃ' ಎಂದು ಹೇಳಲ್ಪಟ್ಟಿದೆ (ಶ್ರೀಶಂಕರ).

[3] 'ಶ್ವಃ' ಎಂದರೆ ನಾಳೆ. ಸಂಸಾರವು ನಾಳೆಯವರೆಗೆ ಕೂಡ ನಿಲ್ಲುವುದಿಲ್ಲವಾದುದರಿಂದ ಅಶ್ವತ್ಥವೆಂದು ಹೇಳಿದೆ. ಇಲ್ಲಿ ಅನಿತ್ಯವಾದ ಸಂಸಾರವನ್ನು ಅಶ್ವತ್ಥವೃಕ್ಷಕ್ಕೆ ಹೋಲಿಸಿದೆ.

[4] ಸಂಸಾರಮಾಯೆಯು ಅನಾದಿಕಾಲದಿಂದಲೂ ಪ್ರವೃತ್ತವಾಗಿರುವುದರಿಂದ ಈ ಸಂಸಾರವೃಕ್ಷವು ಅವ್ಯಯವು. ಅನಾದ್ಯನಂತವಾದ ದೇಹಾದಿಸಂತಾನಕ್ಕೆ ಆಶ್ರಯವಾಗಿರುವುದರಿಂದ ಅವ್ಯಯವೆಂದು ಪ್ರಸಿದ್ಧವಾಗಿದೆ (ಶ್ರೀಶಂಕರ).

[5] ಎಲೆಗಳು ಮರವನ್ನು ಹೇಗೆ ಕಾಪಾಡುವುವೋ ಹಾಗೆ ಋಗಾದಿವೇದಗಳು ಸಂಸಾರವೃಕ್ಷವನ್ನು ಕಾಪಾಡುವುವು. ಅವು ಧರ್ಮಾಧರ್ಮಗಳನ್ನು, ಅವುಗಳ ಕಾರಣವನ್ನು, ಫಲವನ್ನು ತೋರಿಸುತ್ತವೆ (ಶ್ರೀಶಂಕರ).

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ
ಗುಣಪ್ರವೃದ್ಧಾ ವಿಷಯಪ್ರವಾಲಾಃ ।
ಅಧಶ್ಚ ಮೂಲಾನ್ಯನುಸಂತತಾನಿ
ಕರ್ಮಾನುಬಂಧೀನಿ ಮನುಷ್ಯಲೋಕೇ ॥ ೨ ॥

ತಸ್ಯ (ಅದರ) ಗುಣಪ್ರವೃದ್ಧಾಃ (ಗುಣಗಳಿಂದ ಬೆಳೆದುಕೊಂಡಿರುವ) ವಿಷಯಪ್ರವಾಲಾಃ (ವಿಷಯಗಳೆಂಬ ಚಿಗುರುಗಳುಳ್ಳ) ಶಾಖಾಃ (ಶಾಖೆಗಳು) ಅಧಃ (ಕೆಳಕ್ಕೂ) ಊರ್ಧ್ವಂ ಚ (ಮತ್ತು ಮೇಲಕ್ಕೂ) ಪ್ರಸೃತಾಃ (ಹರಡಿಕೊಂಡಿವೆ) ಮನುಷ್ಯಲೋಕೇ (ಮನುಷ್ಯಲೋಕದಲ್ಲಿ) ಕರ್ಮಾನುಬಂಧೀನಿ (ಕರ್ಮದ ಸಂಬಂಧವುಳ್ಳ) ಮೂಲಾನಿ (ಬೇರುಗಳು) ಅಧಃ ಚ (ಕೆಳಗಡೆ) ಅನುಸಂತತಾನಿ (ಹರಡಿಕೊಂಡಿವೆ).

೨. ಗುಣಗಳಿಂದ[1] ಬೆಳೆದುಕೊಂಡಿರುವ, ವಿಷಯಗಳೆಂಬ ಚಿಗುರುಗಳುಳ್ಳ ಅದರ ಶಾಖೆಗಳು ಕೆಳಕ್ಕೂ[2] ಮೇಲಕ್ಕೂ[3] ಹರಡಿಕೊಂಡಿವೆ; ಮನುಷ್ಯಲೋಕದಲ್ಲಿ ಕರ್ಮದ ಸಂಬಂಧವುಳ್ಳ ಬೇರುಗಳು[4] ಕೆಳಗಡೆ[5] ಹರಡಿಕೊಂಡಿವೆ.

1 ಸತ್ತ್ವರಜಸ್ತಮಗಳಿಂದ.

2 ಸ್ಥಾವರದ ವರೆಗೆ.

3 ಬ್ರಹ್ಮಾದಿಗಳ ವರೆಗೆ.

4 ಕರ್ಮಫಲದಿಂದ ಉಂಟಾಗುವ ರಾಗದ್ವೇಷಾದಿವಾಸನೆಗಳು ಬೇರುಗಳಂತೆ ಧರ್ಮಾಧರ್ಮಗಳಲ್ಲಿ ಪ್ರವರ್ತಿಸುವುದಕ್ಕೆ ಕಾರಣವಾಗಿರುವುದರಿಂದ ಕುಡಿಬೇರುಗಳೆಂದು ಹೇಳಲ್ಪಟ್ಟಿದೆ. ಇವು ಮನುಷ್ಯಲೋಕದಲ್ಲಿ ಕರ್ಮವನ್ನುಂಟುಮಾಡುತ್ತವೆ.

5 ದೇವಾದಿಗಳಿಗೆ ಹೋಲಿಸಿದರೆ ಕೆಳಗಡೆ.

ನ ರೂಪಮಸ್ಯೇಹ ತಥೋಪಲಭ್ಯತೇ
ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।
ಅಶ್ವತ್ಥಮೂಲಂ ಸುವಿರೂಢಮೂಲ-
ಮಸಂಗಶಸ್ತ್ರೇಣ ದೃಢೇನ ಛಿತ್ತ್ವಾ ॥ ೩ ॥
ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪ ॥

ಇಹ (ಈ ಸಂಸಾರದಲ್ಲಿ) ಅಸ್ಯ (ಇದರ) ರೂಪಂ (ರೂಪವು) ತಥಾ (ಹಿಂದೆ ಹೇಳಿರುವ ಪ್ರಕಾರ) ನ ಉಪಲಭ್ಯತೇ (ಕಾಣುವುದಿಲ್ಲ) [ಇದರ] ಅಂತಃ (ಅಂತವು) ನ (ಕಾಣುವುದಿಲ್ಲ) ಆದಿಃ ಚ (ಆದಿಯು) ನ (ಕಾಣುವುದಿಲ್ಲ) ಸಂಪ್ರತಿಷ್ಠಾ ಚ (ಮತ್ತು ಸ್ಥಿತಿ, ಮಧ್ಯವು) ನ (ಕಾಣುವುದಿಲ್ಲ) ಏನಂ (ಈ) ಸುವಿರೂಢಮೂಲಂ (ಚೆನ್ನಾಗಿ ಬೇರೂರಿರುವ) ಅಶ್ವತ್ಥಂ (ಅಶ್ವತ್ಥವನ್ನು) ದೃಢೇನ (ದೃಢವಾದ) ಅಸಂಗ-ಶಸ್ತ್ರೇಣ (ಅಸಂಗವೆಂಬ ಶಸ್ತ್ರದಿಂದ) ಛಿತ್ತ್ವಾ (ಕತ್ತರಿಸಿ) ತತಃ (ಅನಂತರ) ಯಸ್ಮಿನ್ ಗತಾಃ (ಯಾವುದನ್ನು ಸೇರಿದವರು) ಭೂಯಃ (ಪುನಃ) ನ ನಿವರ್ತಂತಿ (ಹಿಂತಿರುಗುವುದಿಲ್ಲವೋ) ತತ್ ಪದಂ (ಆ ಪದವು) ಪರಿಮಾರ್ಗಿತವ್ಯಂ (ಹುಡುಕಲ್ಪಡತಕ್ಕದ್ದು). ಯತಃ (ಯಾವನಿಂದ) [ಈ] ಪುರಾಣೀ (ಪುರಾತನವಾದ) ಪ್ರವೃತ್ತಿಃ (ಸಂಸಾರ ಪ್ರವೃತ್ತಿಯು) ಪ್ರಸೃತಾ (ಉದ್ಗಮಿಸಿದೆಯೋ) ತಂ ಆದ್ಯಂ ಪುರುಷಂ ಏವ ಚ (ಆ ಆದ್ಯನಾದ ಪುರುಷನನ್ನೇ) ಪ್ರಪದ್ಯೇ (ಶರಣುಹೋಗುತ್ತೇನೆ).

೩–೪. ಈ ಸಂಸಾರದಲ್ಲಿ ಇದರ ರೂಪವು ಮೇಲೆ ಹೇಳಿರುವ ಪ್ರಕಾರ ಕಾಣುವುದಿಲ್ಲ.[1] ಇದರ ಆದಿಯಾಗಲೀ ಮಧ್ಯವಾಗಲೀ ಅಂತವಾಗಲೀ ಕಾಣುವುದಿಲ್ಲ; ಚೆನ್ನಾಗಿ ಬೇರೂರಿರುವ ಈ ಅಶ್ವತ್ಥವನ್ನು ಅಸಂಗವೆಂಬ[2] ದೃಢವಾದ ಶಸ್ತ್ರದಿಂದ ಕತ್ತರಿಸಿ ಅನಂತರ-ಯಾವುದನ್ನು ಸೇರಿದವರು ಪುನಃ ಹಿಂತಿರುಗುವುದಿಲ್ಲವೋ–ಆ ಪದವನ್ನು ಹುಡುಕತಕ್ಕದ್ದು. ಯಾವನ ದೆಸೆಯಿಂದ ಪುರಾತನವಾದ ಈ ಸಂಸಾರವು ಉದ್ಗಮಿಸಿದೆಯೋ ಆ ಆದ್ಯಪುರುಷನನ್ನೇ ಶರಣುಹೋಗುತ್ತೇನೆ.

1 ಸ್ವಪ್ನ ಮರೀಚಿಕೆ ಮಾಯೆ ಗಂಧರ್ವನಗರ ಇವುಗಳ ಹಾಗೆ ದೃಷ್ಟನಷ್ಟಸ್ವರೂಪವುಳ್ಳದ್ದು (ಶ್ರೀಶಂಕರ).

2 ಪುತ್ರ-ವಿತ್ತ-ಲೋಕೈಷಣಾದಿಗಳನ್ನು ತ್ಯಾಗಮಾಡುವುದು (ಶ್ರೀಶಂಕರ).

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-**
**ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥ ೫ ॥**

ನಿರ್ಮಾನಮೋಹಾಃ (ಅಹಂಕಾರಮೋಹಗಳಿಲ್ಲದವರೂ) ಜಿತಸಂಗದೋಷಾಃ (ಆಸಕ್ತಿ ಎಂಬ ದೋಷವನ್ನು ಜಯಿಸಿರುವವರೂ) ಅಧ್ಯಾತ್ಮನಿತ್ಯಾಃ (ಅಧ್ಯಾತ್ಮನಿತ್ಯರೂ), ವಿನಿವೃತ್ತಕಾಮಾಃ (ಸಮಸ್ತಕಾಮಗಳನ್ನು ಬಿಟ್ಟಿರುವವರೂ) ಸುಖದುಃಖಸಂಜ್ಞೈಃ ದ್ವಂದ್ವೈಃ (ಸುಖದುಃಖಗಳೆಂಬ ಹೆಸರಿನ ದ್ವಂದ್ವಗಳಿಂದ) ವಿಮುಕ್ತಾಃ (ಬಿಡಲ್ಪಟ್ಟವರೂ) [ಆದ] ಅಮೂಢಾಃ (ಅಮೂಢರು) ತತ್ (ಆ) ಅವ್ಯಯಂ (ಅವ್ಯಯವಾದ) ಪದಂ (ಪದವನ್ನು) ಗಚ್ಛಂತಿ (ಹೊಂದುತ್ತಾರೆ).

೫. ಅಹಂಕಾರಮೋಹಗಳಿಲ್ಲದವರೂ ಆಸಕ್ತಿ ಎಂಬ ದೋಷವನ್ನು ಜಯಿಸಿದವರೂ ಅಧ್ಯಾತ್ಮನಿತ್ಯರೂ[1] ಸಮಸ್ತ ಕಾಮುಗಳನ್ನು ಬಿಟ್ಟಿರುವವರೂ ಸುಖದುಃಖಗಳೆಂಬ ದ್ವಂದ್ವಗಳಿಂದ ಬಿಡಲ್ಪಟ್ಟವರೂ ಆದ ಅಮೂಢರು[2] ಆ ಅವ್ಯಯವಾದ ಪದವನ್ನು ಹೊಂದುತ್ತಾರೆ.

1 ಪರಮಾತ್ಮಜ್ಞಾನದಲ್ಲಿ ನಿಷ್ಠೆಯುಳ್ಳವರು.
2 ಮೋಹವಿಲ್ಲದವರು.

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೬ ॥**

ಸೂರ್ಯಃ (ಸೂರ್ಯನು) ತತ್ (ಅದನ್ನು) ನ ಭಾಸಯತೇ (ಬೆಳಗುವುದಿಲ್ಲ) ಶಶಾಂಕಃ (ಚಂದ್ರನು) ನ (ಬೆಳಗುವುದಿಲ್ಲ) ಪಾವಕಃ (ಅಗ್ನಿಯು) ನ (ಬೆಳಗುವುದಿಲ್ಲ) ಯತ್ (ಯಾವುದನ್ನು) ಗತ್ವಾ (ಹೊಂದಿ) ನ ನಿವರ್ತಂತೇ (ಹಿಂತಿರುಗುವುದಿಲ್ಲವೋ) ತತ್ (ಅದು) ಮಮ (ನನ್ನ) ಪರಮಂ (ಶ್ರೇಷ್ಠವಾದ) ಧಾಮ (ಸ್ಥಾನ).

೬. ಅದನ್ನು ಸೂರ್ಯನು ಬೆಳಗುವುದಿಲ್ಲ, ಚಂದ್ರನಾಗಲೀ ಅಗ್ನಿಯಾಗಲೀ ಬೆಳಗುವುದಿಲ್ಲ; ಯಾವುದನ್ನು ಹೊಂದಿದರೆ ಹಿಂತಿರುಗುವುದಿಲ್ಲವೋ ಅದೇ ನನ್ನ ಶ್ರೇಷ್ಠವಾದ ಸ್ಥಾನ.

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥**

ಮಮ ಏವ (ನನ್ನದೇ ಆದ) ಸನಾತನಃ (ಸನಾತನವಾದ) ಅಂಶಃ (ಅಂಶವು) ಜೀವಲೋಕೇ (ಸಂಸಾರದಲ್ಲಿ) ಜೀವಭೂತಃ (ಜೀವನಾಗಿ) ಪ್ರಕೃತಿಸ್ಥಾನಿ (ಪ್ರಕೃತಿಯಲ್ಲಿರುವ) ಮನಃಷಷ್ಠಾನಿ (ಮನಸ್ಸೇ ಆರನೆಯದಾದ) ಇಂದ್ರಿಯಾಣಿ (ಇಂದ್ರಿಯಗಳನ್ನು) ಕರ್ಷತಿ (ಸೆಳೆದುಕೊಳ್ಳುತ್ತದೆ).

೭. ಸನಾತನವಾದ ನನ್ನ[1] ಅಂಶವೇ ಸಂಸಾರದಲ್ಲಿ ಜೀವನಾಗಿ ಪ್ರಕೃತಿಯಲ್ಲಿರುವ ಮನಸ್ಸೇ ಆರನೆಯದಾದ[2] ಇಂದ್ರಿಯಗಳನ್ನು ಸೆಳೆದುಕೊಳ್ಳುತ್ತದೆ.

1 ಪರಮಾತ್ಮನಾದ ನಾರಾಯಣನ (ಶ್ರೀಶಂಕರ).
2 ಐದು ಪಂಚೇಂದ್ರಿಯಗಳು ಮತ್ತು ಮನಸ್ಸು.

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮ ॥**

ಈಶ್ವರಃ (ಜೀವನು) ಯತ್ (ಯಾವಾಗ) ಶರೀರಂ (ಶರೀರವನ್ನು) ಅವಾಪ್ನೋತಿ (ಹೊಂದುತ್ತಾನೆಯೋ) ಯತ್ ಚ ಅಪಿ (ಯಾವಾಗ) ಉತ್ಕ್ರಾಮತಿ (ಬಿಟ್ಟುಹೋಗುತ್ತಾನೆಯೋ) [ಆಗ] ವಾಯುಃ (ಗಾಳಿಯು) ಆಶಯಾತ್ (ಆಶ್ರಯದಿಂದ ಅಥವಾ ಸ್ಥಾನದಿಂದ) ಗಂಧಾನ್ ಇವ (ಗಂಧಗಳನ್ನು [ಒಯ್ಯುವ] ಹಾಗೆ) ಏತಾನಿ (ಇವುಗಳನ್ನು) ಗೃಹೀತ್ವಾ (ತೆಗೆದುಕೊಂಡು) ಸಂಯಾತಿ (ಹೋಗುತ್ತಾನೆ).

೮. ಜೀವನು[1] ಶರೀರವನ್ನು ಯಾವಾಗ ಹೊಂದುತ್ತಾನೆಯೋ ಮತ್ತು ಯಾವಾಗ ಬಿಟ್ಟುಹೋಗುತ್ತಾನೆಯೋ ಆಗ — ಗಾಳಿಯು ಗಂಧಗಳನ್ನು (ತನ್ನ) ಸ್ಥಾನದಿಂದ (ಒಯ್ಯುವ) ಹಾಗೆ — ಇವುಗಳನ್ನು[2] ತೆಗೆದುಕೊಂಡು ಹೋಗುತ್ತಾನೆ.

1 ಶರೀರೇಂದ್ರಿಯಗಳಿಗೆ ಸ್ವಾಮಿಯಾದುದರಿಂದ ಜೀವನನ್ನು ಈಶ್ವರನೆಂದು ಕರೆದಿದೆ.
2 ಇಂದ್ರಿಯಗಳನ್ನು.

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯ ॥**

ಅಯಂ (ಈ ಜೀವನು) ಶ್ರೋತ್ರಂ (ಶ್ರೋತ್ರವನ್ನು) ಚಕ್ಷುಃ (ಚಕ್ಷುಸ್ಸನ್ನು) ಸ್ಪರ್ಶನಂ (ಸ್ಪರ್ಶನವನ್ನು) ರಸನಂ ಚ (ರಸನೆಯನ್ನು) ಘ್ರಾಣಂ ಏವ ಚ (ಘ್ರಾಣವನ್ನೂ) ಮನಃ ಚ (ಮತ್ತು ಮನಸ್ಸನ್ನೂ) ಅಧಿಷ್ಠಾಯ (ಆಶ್ರಯಿಸಿ) ವಿಷಯಾನ್ (ವಿಷಯಗಳನ್ನು) ಉಪಸೇವತೇ (ಅನುಭವಿಸುತ್ತಾನೆ).

೯. ಈ ಜೀವನು ಶ್ರೋತ್ರೇಂದ್ರಿಯ ಚಕ್ಷುರಿಂದ್ರಿಯ ತ್ವಗಿಂದ್ರಿಯ ರಸನೇಂದ್ರಿಯ ಘ್ರಾಣೇಂದ್ರಿಯ ಮತ್ತು ಮನಸ್ಸು — ಇವುಗಳನ್ನು ಆಶ್ರಯಿಸಿ[1] ವಿಷಯಗಳನ್ನು ಅನುಭವಿಸುತ್ತಾನೆ.

1 ಎಂದರೆ ಇವುಗಳ ಮೂಲಕ.

**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦ ॥**

ಉತ್ಕ್ರಾಮಂತಂ (ಶರೀರವನ್ನು ಬಿಡುತ್ತಿರುವ) ಸ್ಥಿತಂ (ಶರೀರದಲ್ಲೇ ಇದ್ದುಕೊಂಡಿರುವ) ಭುಂಜಾನಂ ವಾ (ಅಥವಾ ವಿಷಯಗಳನ್ನು ಅನುಭವಿಸುತ್ತಿರುವ) ಗುಣಾನ್ವಿತಂ ವಾ ಅಪಿ (ಅಥವಾ ಗುಣಗಳಿಂದ ಕೂಡಿರುವ) [ಇವನನ್ನು] ವಿಮೂಢಾಃ (ಮೂಢರು) ನ ಅನುಪಶ್ಯಂತಿ (ನೋಡಲಾರರು) ಜ್ಞಾನಚಕ್ಷುಷಃ (ಜ್ಞಾನವೇ ಕಣ್ಣುಗಳಾಗಿ ಉಳ್ಳವರು) ಪಶ್ಯಂತಿ (ನೋಡುತ್ತಾರೆ).

೧೦. (ಶರೀರವನ್ನು) ಬಿಡುತ್ತಿರುವಾಗಲೂ, (ಶರೀರದಲ್ಲೇ ಇದ್ದು ಕೊಂಡಿರುವಾಗಲೂ ಅಥವಾ (ವಿಷಯಗಳನ್ನು) ಅನುಭವಿಸುತ್ತಿರುವಾಗಲೂ ಅಥವಾ ಗುಣಗಳಿಂದ[1] ಕೂಡಿರುವಾಗಲೂ (ಈ ಜೀವನನ್ನು) ಮೂಢರು ನೋಡಲಾರರು,[2] ಜ್ಞಾನಿಗಳು ನೋಡುತ್ತಾರೆ.

[1] ತ್ರಿಗುಣಗಳ ಪರಿಣಾಮವಾದ ಸುಖದುಃಖಗಳಿಂದ.

[2] ಹೀಗೆ ಆತ್ಮನು ಅತ್ಯಂತ ಸಮೀಪದಲ್ಲಿದ್ದರೂ ವಿಷಯಭೋಗಗಳಿಂದ ಸೆಳೆಯಲ್ಪಟ್ಟ ಚಿತ್ತವುಳ್ಳ ಮೂಢರು ಅವನನ್ನು ಅರಿಯಲಾರರು.

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ ೧೧ ॥**

ಯತಂತಃ (ಪ್ರಯತ್ನಮಾಡುತ್ತಿರುವ) ಯೋಗಿನಃ (ಯೋಗಿಗಳು) ಏನಂ (ಇವನನ್ನು, ಆತ್ಮನನ್ನು) ಆತ್ಮನಿ ಅವಸ್ಥಿತಂ (ತಮ್ಮಲ್ಲಿರುವವನೆಂದು) ಪಶ್ಯಂತಿ (ನೋಡುತ್ತಾರೆ) ಯತಂತಃ ಅಪಿ (ಪ್ರಯತ್ನಿಸುತ್ತಿದ್ದರೂ) ಅಕೃತಾತ್ಮಾನಃ (ಅಕೃತಾತ್ಮರಾದ) ಅಚೇತಸಃ (ಅವಿವೇಕಿಗಳು) ಏನಂ (ಇವನನ್ನು) ನ ಪಶ್ಯಂತಿ (ನೋಡಲಾರರು).

೧೧. ಪ್ರಯತ್ನಮಾಡುತ್ತಿರುವ ಯೋಗಿಗಳು,[1] ಈ ಆತ್ಮನು ತಮ್ಮಲ್ಲಿರುವವನೆಂದು[2] ನೋಡುತ್ತಾರೆ. ಅಕೃತಾತ್ಮರಾದ[3] ಅವಿವೇಕಿಗಳು ಪ್ರಯತ್ನ ಮಾಡಿದರೂ ಇವನನ್ನು ಕಾಣಲಾರರು.

[1] ಸಮಾಹಿತಚಿತ್ತರು (ಶ್ರೀಶಂಕರ).

[2] ತಮ್ಮ ಬುದ್ಧಿಯಲ್ಲಿ (ಶ್ರೀಶಂಕರ). ದೇಹದಲ್ಲಿ (ಶ್ರೀರಾಮಾನುಜ)

[3] ತಪಸ್ಸಿನಿಂದಲೂ ಇಂದ್ರಿಯನಿಗ್ರಹದಿಂದಲೂ ಅಂತಃಕರಣಸಂಸ್ಕಾರವನ್ನು ಹೊಂದದವರು (ಶ್ರೀಶಂಕರ). ಭಗವಂತನಲ್ಲಿ ಪ್ರಪತ್ತಿಮಾಡದೆ ಇರುವುದರಿಂದ ಸಂಸ್ಕಾರವಿಲ್ಲದ ಮನಸ್ಸುಳ್ಳವರು (ಶ್ರೀರಾಮಾನುಜ).

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥ ೧೨ ॥**

ಯತ್ (ಯಾವ) ಆದಿತ್ಯಗತಂ (ಆದಿತ್ಯನನ್ನು ಹೊಂದಿರುವ) ತೇಜಃ (ತೇಜಸ್ಸು) ಅಖಿಲಂ ಜಗತ್ (ಜಗತ್ತೆಲ್ಲವನ್ನೂ) ಭಾಸಯತೇ (ಬೆಳಗುತ್ತಿರುವುದೋ) ಯತ್ (ಯಾವ ತೇಜಸ್ಸು) ಚಂದ್ರಮಸಿ (ಚಂದ್ರನಲ್ಲಿರುವುದೋ) ಯತ್ (ಯಾವ ತೇಜಸ್ಸು) ಅಗ್ನೌ ಚ (ಅಗ್ನಿಯಲ್ಲಿರುವುದೋ) ತತ್ ತೇಜಃ (ಆ ತೇಜಸ್ಸು) ಮಾಮಕಂ (ನನ್ನದು ಎಂದು) ವಿದ್ಧಿ (ತಿಳಿ).

೧೨. ಆದಿತ್ಯನನ್ನು ಹೊಂದಿರುವ ಯಾವ ತೇಜಸ್ಸು ಜಗತ್ತೆಲ್ಲವನ್ನೂ ಬೆಳಗುತ್ತಿರುವುದೋ, ಯಾವ ತೇಜಸ್ಸು ಚಂದ್ರನಲ್ಲಿರುವುದೋ, ಯಾವ ತೇಜಸ್ಸು ಅಗ್ನಿಯಲ್ಲಿರುವುದೋ ಆ ತೇಜಸ್ಸು ನನ್ನದೆಂದು ತಿಳಿ.

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥ ೧೩ ॥**

ಅಹಂ (ನಾನು) ಗಾಂ (ಭೂಮಿಯನ್ನು) ಆವಿಶ್ಯ (ಪ್ರವೇಶಮಾಡಿ) ಓಜಸಾ (ಓಜಸ್ಸಿನಿಂದ) ಭೂತಾನಿ (ಪ್ರಾಣಿಗಳನ್ನು) ಧಾರಯಾಮಿ (ಧರಿಸಿರುತ್ತೇನೆ) ರಸಾತ್ಮಕಃ (ರಸಸ್ವರೂಪನಾದ) ಸೋಮಃ ಭೂತ್ವಾ (ಚಂದ್ರನಾಗಿ) ಸರ್ವಾಃ (ಎಲ್ಲಾ) ಓಷಧೀಃ (ವನಸ್ಪತಿಗಳನ್ನು) ಪುಷ್ಣಾಮಿ (ಪೋಷಿಸುತ್ತೇನೆ).

೧೩. ನಾನು ಭೂಮಿಯನ್ನು ಪ್ರವೇಶಮಾಡಿ ಪ್ರಾಣಿಗಳನ್ನು ಓಜಸ್ಸಿನಿಂದ ಧರಿಸಿರುತ್ತೇನೆ; ಮತ್ತು ರಸಸ್ವರೂಪನಾದ ಚಂದ್ರನಾಗಿ ಎಲ್ಲಾ ವನಸ್ಪತಿಗಳನ್ನೂ[1] ಪೋಷಿಸುತ್ತೇನೆ.

[1] ಬತ್ತ ಜವೆ ಮೊದಲಾದುವು.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ ೧೪ ॥**

ಅಹಂ (ನಾನು) ವೈಶ್ವಾನರಃ ಭೂತ್ವಾ (ಜಠರಾಗ್ನಿಯಾಗಿ) ಪ್ರಾಣಿನಾಂ (ಪ್ರಾಣಿಗಳ) ದೇಹಂ (ದೇಹವನ್ನು) ಆಶ್ರಿತಃ (ಆಶ್ರಯಿಸಿದವನಾಗಿ) ಪ್ರಾಣಾಪಾನ-ಸಮಾಯುಕ್ತಃ (ಪ್ರಾಣಾಪಾನಗಳಿಂದ ಕೂಡಿದವನಾಗಿ) ಚತುರ್ವಿಧಂ (ನಾಲ್ಕು ವಿಧವಾದ) ಅನ್ನಂ (ಅನ್ನವನ್ನು) ಪಚಾಮಿ (ಜೀರ್ಣವಾಗುವಂತೆ ಮಾಡುತ್ತೇನೆ).

೧೪. ನಾನು ಜಠರಾಗ್ನಿರೂಪದಿಂದ (ಎಲ್ಲಾ) ಪ್ರಾಣಿಗಳ ಶರೀರವನ್ನು ಆಶ್ರಯಿಸಿ ಪ್ರಾಣಾಪಾನಗಳಿಂದ ಕೂಡಿದವನಾಗಿ ನಾಲ್ಕುವಿಧವಾದ[1] ಅನ್ನವನ್ನು ಜೀರ್ಣವಾಗುವಂತೆ ಮಾಡುತ್ತೇನೆ.

[1] ಭೋಜ್ಯ (ಉಣ್ಣತಕ್ಕದ್ದು), ಭಕ್ಷ್ಯ (ತಿನ್ನತಕ್ಕದ್ದು), ಚೋಷ್ಯ (ಹೀರಿಕೊಳ್ಳತಕ್ಕದ್ದು), ಲೇಹ್ಯ (ನೆಕ್ಕತಕ್ಕದ್ದು).

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇವ ಚಾಹಮ್ ॥ ೧೫ ॥**

ಅಹಂ (ನಾನು) ಸರ್ವಸ್ಯ (ಎಲ್ಲರ) ಹೃದಿ (ಹೃದಯದಲ್ಲಿ) ಸಂನಿವಿಷ್ಟಃ ಚ (ಇರುತ್ತೇನೆ) ಮತ್ತಃ (ನನ್ನಿಂದಲೇ) ಸ್ಮೃತಿಃ (ಸ್ಮೃತಿ) ಜ್ಞಾನಂ (ಜ್ಞಾನವು) ಅಪೋಹನಂ ಚ (ಅವುಗಳ ನಿವೃತ್ತಿ) [ಉಂಟಾಗುತ್ತವೆ] ಸರ್ವೈಃ (ಎಲ್ಲಾ) ವೇದೈಃ ಚ (ವೇದಗಳಿಂದಲೂ) ಅಹಂ ಏವ (ನಾನೇ) ವೇದ್ಯಃ (ತಿಳಿಯತಕ್ಕವನು) ವೇದಾಂತ-ಕೃತ್ (ವೇದವನ್ನು ಮಾಡಿದವನೂ) ವೇದ-ವಿತ್ (ವೇದವನ್ನು ತಿಳಿದವನೂ) ಅಹಂ ಏವ (ನಾನೇ).

೧೫. ನಾನು ಎಲ್ಲರ ಹೃದಯದಲ್ಲಿಯೂ (ಅಂತರ್ಯಾಮಿಯಾಗಿ) ಇರುತ್ತೇನೆ. ಸ್ಮೃತಿ, ಜ್ಞಾನ, ಅವುಗಳ ನಿವೃತ್ತಿ ನನ್ನಿಂದಲೇ (ಉಂಟಾಗುತ್ತವೆ). ಎಲ್ಲಾ ವೇದಗಳಿಂದಲೂ ನಾನೇ ತಿಳಿಯತಕ್ಕವನು. ವೇದಾಂತವನ್ನು[1] ಮಾಡಿದವನು, ವೇದವನ್ನು ತಿಳಿದವನು ನಾನೇ.

[1] ವೇದಾಂತಾರ್ಥದ ಸಂಪ್ರದಾಯವನ್ನು (ಶ್ರೀಶಂಕರ). ವೇದಗಳಲ್ಲಿ ವಿಧಿಸಿರುವ ಕರ್ಮಗಳ ಫಲವನ್ನು (ಶ್ರೀರಾಮಾನುಜ).

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**

ಲೋಕೇ (ಲೋಕದಲ್ಲಿ) ಕ್ಷರಃ (ಕ್ಷರ) ಅಕ್ಷರಃ ಚ (ಮತ್ತು ಅಕ್ಷರ) [ಎಂಬ] ಇಮೌ (ಈ) ದ್ವೌ (ಇಬ್ಬರು) ಪುರುಷೌ ಏವ (ಪುರುಷರು) [ಪ್ರಸಿದ್ಧರಾಗಿದ್ದಾರೆ] ಕ್ಷರಃ (ಕ್ಷರನು) ಸರ್ವಾಣಿ (ಎಲ್ಲಾ) ಭೂತಾನಿ (ಪ್ರಾಣಿಗಳು) ಅಕ್ಷರಃ (ಅಕ್ಷರನು) ಕೂಟಸ್ಥಃ (ಕೂಟಸ್ಥನು) [ಎಂದು] ಉಚ್ಯತೇ (ಹೇಳಲ್ಪಟ್ಟಿದ್ದಾನೆ).

೧೬. ಈ ಲೋಕದಲ್ಲಿ ಕ್ಷರ ಮತ್ತು ಅಕ್ಷರ ಎಂಬ ಇಬ್ಬರು ಪುರುಷರು ಪ್ರಸಿದ್ಧರಾಗಿದ್ದಾರೆ. ಕ್ಷರನೆಂದರೆ ಸರ್ವಪ್ರಾಣಿಗಳು; ಅಕ್ಷರನು ಕೂಟಸ್ಥನೆಂದು ಹೇಳಲ್ಪಟ್ಟಿದ್ದಾನೆ.

[ಕ್ಷರನೆಂದರೆ ವಿನಾಶಸ್ವಭಾವವುಳ್ಳ ಸಮಸ್ತಕಾರ್ಯಸಮುದಾಯವೆಂದೂ, ಅಕ್ಷರನೆಂದರೆ ಸಂಸಾರಿಜೀವರ ಕಾಮಕರ್ಮಗಳ ಸಂಸ್ಕಾರಕ್ಕೆ ಆಶ್ರಯವಾಗಿರುವ ಭಗವಂತನ ಮಾಯಾಶಕ್ತಿಯೆಂದೂ ಶ್ರೀಶಂಕರಾಚಾರ್ಯರು ಅರ್ಥಮಾಡಿರುತ್ತಾರೆ. ಈ ಭಾಷ್ಯದ ಪ್ರಕಾರ ಕೂಟವೆಂದರೆ ರಾಶಿ ಅಥವಾ ಮಾಯೆ; ರಾಶಿಯಂತೆ ಇರತಕ್ಕದ್ದು ಅಥವಾ ಮಾಯಾವಂಚನಾದಿಗಳಿಂದ ಇರುವುದು ಕೂಟಸ್ಥ. ಸಂಸಾರಬೀಜವು ಅನಂತವಾಗಿರುವುದರಿಂದ ಕೂಟಸ್ಥನು ಅಕ್ಷರನೆಂದು ಹೇಳಿದೆ.

ಶ್ರೀರಾಮಾನುಜಭಾಷ್ಯದ ಪ್ರಕಾರ ಅರ್ಥವು ಹೀಗಾಗುತ್ತದೆ: ಬ್ರಹ್ಮನಿಂದ ಮೊದಲುಗೊಂಡು ತೃಣದ ವರೆಗೆ ವಿಕಾರಸ್ವಭಾವವುಳ್ಳ ಪ್ರಕೃತಿಯೊಂದಿಗೆ ಸೇರಿಕೊಂಡಿರುವ

ಸಮಸ್ತಪ್ರಾಣಿಗಳು ಕ್ಷರಪುರುಷರು; ಪ್ರಕೃತಿಸಂಸರ್ಗದಿಂದ ಬಿಡಲ್ಪಟ್ಟು ತಮ್ಮ ನಿಜವಾದ ಸ್ವರೂಪದಲ್ಲಿರುವ ಮುಕ್ತರಾದ ಆತ್ಮರು ಅಕ್ಷರಪುರುಷರು. ಪ್ರಕೃತಿಸಂಸರ್ಗವಿಲ್ಲದಿರುವುದರಿಂದಲೂ, ಪ್ರಕೃತಿಪರಿಣಾಮವಿಶೇಷವಾದ ದೇಹಗಳ ಸಂಬಂಧವಿಲ್ಲದಿರುವುದರಿಂದಲೂ ಅಕ್ಷರನು ಕೂಟಸ್ಥನೆಂದು ಹೇಳಲ್ಪಟ್ಟಿದ್ದಾನೆ.]

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**

ತು (ಆದರೆ) ಅನ್ಯಃ (ವಿಲಕ್ಷಣನಾದ) ಉತ್ತಮಃ ಪುರುಷಃ (ಪುರುಷೋತ್ತಮನು) ಪರಮಾತ್ಮಾ ಇತಿ (ಪರಮಾತ್ಮನೆಂದು) ಉದಾಹೃತಃ (ಹೇಳಲ್ಪಟ್ಟಿರುತ್ತಾನೆ) ಯಃ (ಯಾವ) ಅವ್ಯಯಃ (ಅವ್ಯಯನಾದ) ಈಶ್ವರಃ (ಈಶ್ವರನು) ಲೋಕತ್ರಯಂ (ಮೂರು ಲೋಕಗಳನ್ನು) ಆವಿಶ್ಯ (ಪ್ರವೇಶಿಸಿ) ಬಿಭರ್ತಿ (ಧರಿಸಿರುತ್ತಾನೆ).

೧೭. ಆದರೆ (ಕ್ಷರಾಕ್ಷರಗಳಿಗಿಂತ) ವಿಲಕ್ಷಣನಾದ ಪುರುಷೋತ್ತಮನು ಪರಮಾತ್ಮನೆಂದು ಹೇಳಲ್ಪಟ್ಟಿರುತ್ತಾನೆ. ಆ ಅವ್ಯಯನಾದ ಈಶ್ವರನು ಮೂರು ಲೋಕಗಳನ್ನು[1] ಪ್ರವೇಶಿಸಿ ಧರಿಸಿಕೊಂಡಿರುತ್ತಾನೆ.

[1] ಭೂಃ ಭುವಃ ಸ್ವಃ ಎಂಬ ಲೋಕತ್ರಯವನ್ನು (ಶ್ರೀಶಂಕರ). ಅಚೇತನ, ಬದ್ಧಚೇತನವರ್ಗ ಮತ್ತು ಮುಕ್ತರು (ಶ್ರೀರಾಮಾನುಜ).

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೧೮ ॥**

ಯಸ್ಮಾತ್ (ಯಾವ ಕಾರಣದಿಂದ) ಅಹಂ (ನಾನು) ಕ್ಷರಂ (ಕ್ಷರವನ್ನು) ಅತೀತಃ (ಮೀರಿದವನಾಗಿ) ಅಕ್ಷರಾತ್ ಚ ಅಪಿ (ಅಕ್ಷರಕ್ಕಿಂತಲೂ) ಉತ್ತಮಃ (ಉತ್ತಮನಾಗಿ) [ಇರುವೆನೋ] ಅತಃ (ಆದುದರಿಂದ) ಲೋಕೇ (ಲೋಕದಲ್ಲಿಯೂ) ವೇದೇ ಚ (ವೇದದಲ್ಲಿಯೂ) ಪುರುಷೋತ್ತಮಃ (ಪುರುಷೋತ್ತಮನು) [ಎಂದು] ಪ್ರಥಿತಃ ಅಸ್ಮಿ (ಪ್ರಸಿದ್ಧನಾಗಿರುತ್ತೇನೆ).

೧೮. ನಾನು ಕ್ಷರವನ್ನು ಮೀರಿದವನಾಗಿಯೂ ಅಕ್ಷರಕ್ಕಿಂತ ಉತ್ತಮನಾಗಿಯೂ ಇರುತ್ತೇನೆ; ಆದುದರಿಂದ ಲೋಕದಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧನಾಗಿದ್ದೇನೆ.

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**

ಭಾರತ (ಎಲೈ ಅರ್ಜುನನೆ) ಯಃ (ಯಾವನು) ಅಸಂಮೂಢಃ (ಅಸಂಮೂಢನಾಗಿ) ಏವಂ (ಹೀಗೆ) ಮಾಂ (ನನ್ನನ್ನು) ಪುರುಷೋತ್ತಮಂ (ಪುರುಷೋತ್ತಮನೆಂದು) ಜಾನಾತಿ (ಅರಿಯುವನೋ) ಸಃ (ಆ) ಸರ್ವವಿತ್ (ಸರ್ವಜ್ಞನು) ಸರ್ವ-ಭಾವೇನ (ಸರ್ವಭಾವದಿಂದಲೂ) ಮಾಂ (ನನ್ನನ್ನು) ಭಜತಿ (ಭಜಿಸುತ್ತಾನೆ).

೧೯. ಎಲೈ ಅರ್ಜುನ, ಯಾವನು ಸಂಮೂಢನಾಗದೆ[1] ಹೀಗೆ[2] ನನ್ನನ್ನು ಪುರುಷೋತ್ತಮನೆಂದು ಅರಿಯುವನೋ ಆ ಸರ್ವಜ್ಞನು ನನ್ನನ್ನು ಸರ್ವಭಾವದಿಂದ ಭಜಿಸುತ್ತಾನೆ.

1 ಸಂಮೋಹವಿಲ್ಲದವನಾಗಿ (ಶ್ರೀಶಂಕರ).
2 ಮೇಲೆ ಹೇಳಿದ ಪ್ರಕಾರ.

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ॥ ೨೦ ॥**

ಅನಘ (ಪಾಪರಹಿತನೆ) ಭಾರತ (ಎಲೈ ಅರ್ಜುನನೆ) ಇತಿ (ಹೀಗೆ) ಇದಂ (ಈ) ಗುಹ್ಯತಮಂ (ಅತ್ಯಂತ ರಹಸ್ಯವಾದ) ಶಾಸ್ತ್ರಂ (ಶಾಸ್ತ್ರವು) ಮಯಾ (ನನ್ನಿಂದ) ಉಕ್ತಂ (ಹೇಳಲ್ಪಟ್ಟಿತು) ಏತತ್ (ಇದನ್ನು) ಬುದ್ಧ್ವಾ (ತಿಳಿದುಕೊಂಡು) ಬುದ್ಧಿ-ಮಾನ್ (ಬುದ್ಧಿವಂತನೂ) ಕೃತಕೃತ್ಯಃ ಚ (ಕೃತಕೃತ್ಯನೂ) ಸ್ಯಾತ್ (ಆಗುವನು).

೨೦. ಎಲೈ ಪಾಪರಹಿತನಾದ ಅರ್ಜುನ, ಹೀಗೆ ಅತ್ಯಂತ ರಹಸ್ಯವಾದ ಈ ಶಾಸ್ತ್ರವು[1] ನನ್ನಿಂದ ಹೇಳಲ್ಪಟ್ಟಿತು. ಇದನ್ನು ಅರಿತುಕೊಂಡು (ಮನುಷ್ಯನು) ಬುದ್ಧಿವಂತನೂ ಕೃತಕೃತ್ಯನೂ ಆಗುತ್ತಾನೆ.

1 ಈ ಅಧ್ಯಾಯವನ್ನೇ ಶಾಸ್ತ್ರವೆಂದು ಹೇಳಿದೆ (ಶ್ರೀಶಂಕರ).

**ಇತಿ ಪುರುಷೋತ್ತಮಯೋಗೋ ನಾಮ**
**ಪಂಚದಶೋಽಧ್ಯಾಯಃ ।**

ಪುರುಷೋತ್ತಮಯೋಗವೆಂಬ ಹದಿನೈದನೆಯ
ಅಧ್ಯಾಯವು ಮುಗಿಯಿತು.

# ಹದಿನಾರನೆಯ ಅಧ್ಯಾಯ

## ದೈವಾಸುರಸಂಪದ್ವಿಭಾಗಯೋಗ

ಶ್ರೀಭಗವಾನ್ ಉವಾಚ

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ೧ ॥**

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ**
**ಹ್ರೀರಚಾಪಲಮ್ ॥ ೨ ॥**

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೩ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಭಾರತ (ಎಲೈ ಅರ್ಜುನನೆ) ಅಭಯಂ (ಅಭಯ) ಸತ್ತ್ವ-ಸಂಶುದ್ಧಿಃ (ಸತ್ತ್ವಸಂಶುದ್ಧಿ) ಜ್ಞಾನ-ಯೋಗ-ವ್ಯವಸ್ಥಿತಿಃ (ಜ್ಞಾನಯೋಗವ್ಯವಸ್ಥಿತಿ) ದಾನಂ (ದಾನ) ದಮಃ ಚ (ದಮ) ಯಜ್ಞಃ ಚ (ಯಜ್ಞ) ಸ್ವಾಧ್ಯಾಯಃ (ವೇದಾಧ್ಯಯನ) ತಪಃ (ತಪಸ್ಸು) ಆರ್ಜವಂ (ಸರಳತೆ) ಅಹಿಂಸಾ (ಅಹಿಂಸೆ) ಸತ್ಯಂ (ಸತ್ಯ) ಅಕ್ರೋಧಃ (ಅಕ್ರೋಧ) ತ್ಯಾಗಃ (ತ್ಯಾಗ) ಶಾಂತಿಃ (ಶಾಂತಿ) ಅಪೈಶುನಂ (ಅಪೈಶುನ) ಭೂತೇಷು (ಭೂತಗಳಲ್ಲಿ) ದಯಾ (ದಯೆ) ಅಲೋಲುಪ್ತ್ವಂ (ಅಲೋಲುಪ್ತ್ವ) ಮಾರ್ದವಂ (ಮೃದುಸ್ವಭಾವ) ಹ್ರೀಃ (ನಾಚಿಕೆ) ಅಚಾಪಲಂ (ಅಚಾಪಲ) ತೇಜಃ (ತೇಜಸ್ಸು) ಕ್ಷಮಾ (ಕ್ಷಮೆ) ಧೃತಿಃ (ಧೈರ್ಯ) ಶೌಚಂ (ಶೌಚ) ಅದ್ರೋಹಃ (ಅದ್ರೋಹ) ನಾತಿಮಾನಿತಾ (ಅನಭಿಮಾನ) [ಈ ಗುಣಗಳು] ದೈವೀಂ ಸಂಪದಂ (ದೈವೀಸಂಪತ್ತಿಗೆ) ಅಭಿಜಾತಸ್ಯ (ಹುಟ್ಟಿರುವವನಿಗೆ) ಭವಂತಿ (ಉಂಟಾಗುವುವು).

ಶ್ರೀಕೃಷ್ಣನು ಹೇಳಿದನು

**೧–೩.** ಎಲೈ ಅರ್ಜುನ, ಅಭಯ, ಸತ್ತ್ವಸಂಶುದ್ಧಿ,[1] ಜ್ಞಾನಯೋಗ ವ್ಯವಸ್ಥಿತಿ,[2] ದಾನ, ದಮ,[3] ಯಜ್ಞ, ವೇದಾಧ್ಯಯನ, ತಪಸ್ಸು, ಸರಳತೆ,[4] ಅಹಿಂಸೆ, ಸತ್ಯ, ಅಕ್ರೋಧ, ತ್ಯಾಗ, ಶಾಂತಿ,[5] ಅಪೈಶುನ,[6] ಭೂತದಯೆ, ಅಲೋಲುಪ್ತ್ವ,[7] ಮೃದುಸ್ವಭಾವ, ನಾಚಿಕೆ,[8] ಅಚಾಪಲ,[9] ತೇಜಸ್ಸು,[10]

ಕ್ಷಮೆ, ಧೈರ್ಯ, ಶೌಚ,[11] ಅದ್ರೋಹ, ಅನಭಿಮಾನ—(ಈ ಗುಣಗಳು) ದೈವೀಸಂಪತ್ತಿಗೆ ಹುಟ್ಟಿದವನಿಗೆ ಉಂಟಾಗುವುವು.

1 ಅಂತಃಕರಣದ ಶುದ್ಧಿ.

2 ಶಾಸ್ತ್ರದಿಂದಲೂ ಆಚಾರ್ಯರಿಂದಲೂ ಆತ್ಮಾದಿವಸ್ತುಗಳನ್ನು ತಿಳಿದುಕೊಳ್ಳುವುದು (ಶ್ರೀಶಂಕರ). ಪ್ರಕೃತಿಯಿಂದ ಬಿಡಲ್ಪಟ್ಟ ಆತ್ಮಸ್ವರೂಪದಲ್ಲಿ ನಿಲ್ಲುವುದು (ಶ್ರೀರಾಮಾನುಜ).

3 ಬಾಹ್ಯೇಂದ್ರಿಯಗಳ ನಿಗ್ರಹ.

4 ಮನೋವಾಕ್ಕಾಯಗಳಲ್ಲಿ ಒಂದೇ ರೂಪದಲ್ಲಿರುವುದು.

5 ಮನಸ್ಸಿನ ನಿಗ್ರಹ.

6 ಚಾಡಿಯನ್ನು ಹೇಳದಿರುವುದು.

7 ವಿಷಯಲಂಪಟಿಯಿಲ್ಲದಿರುವಿಕೆ.

8 ಅಕೃತ್ಯಗಳನ್ನು ಮಾಡುವುದರಲ್ಲಿ ನಾಚಿಕೆ (ಶ್ರೀರಾಮಾನುಜ).

9 ಪ್ರಯೋಜನವಿಲ್ಲದಿರುವಾಗ ವಾಕ್ಪಾಣಿಪಾದಾದಿಗಳನ್ನು ಕೆಲಸಮಾಡಿಸದೆ ಇರುವುದು (ಶ್ರೀಶಂಕರ). ಅಪೇಕ್ಷಿಸಲು ಯೋಗ್ಯವಾದ ವಿಷಯಗಳು ಸಮೀಪದಲ್ಲಿರುವಾಗಲೂ ಚಾಪಲ್ಯವಿಲ್ಲದಿರುವುದು (ಶ್ರೀರಾಮಾನುಜ).

10 ಸಾಮರ್ಥ್ಯ (ಪ್ರಾಗಲ್ಭ್ಯ), ಚರ್ಮದ ಕಾಂತಿಯಲ್ಲ (ಶ್ರೀಶಂಕರ). ದುರ್ಜನರಿಂದ ಪರಾಭವವಾಗದಿರುವಿಕೆ (ಶ್ರೀರಾಮಾನುಜ).

11 ಬಾಹ್ಯೇಂದ್ರಿಯಗಳ ಮತ್ತು ಮನಸ್ಸಿನ ನಿರ್ಮಲತೆ.

**ದಂಭೋ ದರ್ಪೋಽತಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ ೪ ॥**

ಪಾರ್ಥ (ಎಲೈ ಅರ್ಜುನನೆ) ದಂಭಃ (ದಂಭ) ದರ್ಪಃ (ದರ್ಪ) ಅತಿಮಾನಃ ಚ (ಅಹಂಕಾರ) ಕ್ರೋಧಃ (ಕ್ರೋಧ) ಪಾರುಷ್ಯಂ ಏವ ಚ (ಕಠಿಣವಾದ ಮಾತು) ಅಜ್ಞಾನಂ ಚ (ಮತ್ತು ಅಜ್ಞಾನ) [ಈ ಗುಣಗಳು] ಆಸುರೀಂ ಸಂಪದಂ (ಆಸುರೀ ಸಂಪತ್ತಿಗೆ) ಅಭಿಜಾತಸ್ಯ (ಹುಟ್ಟಿರುವವನಿಗೆ) [ಉಂಟಾಗುವುವು].

೪. ಎಲೈ ಅರ್ಜುನ, ದಂಭ,[1] ದರ್ಪ,[2] ಅಹಂಕಾರ, ಕ್ರೋಧ, ಕಠಿಣವಾದ ಮಾತು ಮತ್ತು ಅಜ್ಞಾನ[3] (ಈ ಗುಣಗಳು) ಆಸುರೀಸಂಪತ್ತಿಗೆ ಹುಟ್ಟಿರುವವನಿಗೆ (ಉಂಟಾಗುತ್ತವೆ).

1 ಧಾರ್ಮಿಕನೆಂದು ಹೊರಗಡೆ ತೋರಿಸಿಕೊಳ್ಳುವುದು.

2 ವಿದ್ಯಾಧನಸ್ವಜನಾದಿಗಳಿಂದ ಉಂಟಾಗುವ ಸೊಕ್ಕು (ಶ್ರೀಶಂಕರ). ವಿಷಯಾನುಭವನಿಮಿತ್ತವಾದ ಹರ್ಷ (ಶ್ರೀರಾಮಾನುಜ).

3 ಅವಿವೇಕಜ್ಞಾನ–ಕರ್ತವ್ಯಾಕರ್ತವ್ಯಾದಿ-ವಿಷಯಗಳಲ್ಲಿ ತಪ್ಪು ತಿಳುವಳಿಕೆ (ಶ್ರೀ ಶಂಕರ). ಈಶ್ವರ ಮತ್ತು ಜೀವ ಇವರ ತತ್ತ್ವವನ್ನು ವಿಂಗಡಿಸಲಾಗದಿರುವುದು ಮತ್ತು ಕೃತ್ಯಾಕೃತ್ಯಗಳಲ್ಲಿ ಅವಿವೇಕ (ಶ್ರೀರಾಮಾನುಜ).

**ದೈವೀಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**
**ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥ ೫ ॥**

ದೈವೀಸಂಪತ್ (ದೈವೀಸಂಪತ್ತು) ವಿಮೋಕ್ಷಾಯ (ಮೋಕ್ಷಕ್ಕಾಗಿಯೂ) ಆಸುರೀ (ಆಸುರೀಸಂಪತ್ತು) ನಿಬಂಧಾಯ (ಬಂಧನಕ್ಕಾಗಿಯೂ) [ಇರುವುವೆಂದು] ಮತಾ (ನನ್ನ ಮತವು) ಪಾಂಡವ (ಎಲೈ ಅರ್ಜುನನೆ) ಮಾ ಶುಚಃ (ಶೋಕಿಸಬೇಡ) ದೈವೀಂ ಸಂಪದಂ (ದೈವೀಸಂಪತ್ತಿಗಾಗಿ) ಅಭಿಜಾತಃ ಅಸಿ (ಹುಟ್ಟಿರುವೆ).

೫. ದೈವೀಸಂಪತ್ತು ಮೋಕ್ಷಕ್ಕಾಗಿಯೂ, ಆಸುರೀಸಂಪತ್ತು ಬಂಧಕ್ಕಾಗಿಯೂ (ಇರುವುವೆಂದು) ನನ್ನ ಮತ. ಎಲೈ ಅರ್ಜುನ, ಶೋಕಿಸಬೇಡ. ನೀನು ದೈವೀಸಂಪತ್ತಿಗಾಗಿಯೆ ಹುಟ್ಟಿರುವೆ.

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬ ॥**

ಪಾರ್ಥ (ಎಲೈ ಅರ್ಜುನನೆ) ಅಸ್ಮಿನ್ (ಈ) ಲೋಕೇ (ಲೋಕದಲ್ಲಿ) ದೈವಃ (ದೈವವು) ಆಸುರಃ ಚ (ಮತ್ತು ಆಸುರ) [ಎಂದು] ದ್ವೌ (ಎರಡು) ಭೂತಸರ್ಗೌ (ಮನುಷ್ಯಸೃಷ್ಟಿಗಳು) [ಇರುತ್ತವೆ] ದೈವಃ (ದೈವಸೃಷ್ಟಿಯು) ವಿಸ್ತರಶಃ (ವಿಸ್ತಾರವಾಗಿ) ಪ್ರೋಕ್ತಃ (ಹೇಳಲ್ಪಟ್ಟಿತು) ಆಸುರಂ (ಆಸುರೀಸೃಷ್ಟಿಯನ್ನು) ಮೇ (ನನ್ನಿಂದ) ಶೃಣು (ಕೇಳು).

೬. ಎಲೈ ಅರ್ಜುನ, ಈ ಲೋಕದಲ್ಲಿ ದೈವವೆಂದೂ ಆಸುರವೆಂದೂ ಎರಡು ವಿಧವಾದ ಮನುಷ್ಯಸೃಷ್ಟಿಗಳುಂಟು; ದೈವಸೃಷ್ಟಿಯು ವಿಸ್ತಾರವಾಗಿ ಹೇಳಲ್ಪಟ್ಟಿತು; (ಈಗ) ಆಸುರೀಸೃಷ್ಟಿಯನ್ನು ನನ್ನಿಂದ ಕೇಳು.

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭ ॥**

ಆಸುರಾಃ ಜನಾಃ (ಆಸುರೀಸ್ವಭಾವದ ಜನರು) ಪ್ರವೃತ್ತಿಂ ಚ (ಪ್ರವೃತ್ತಿಯನ್ನೂ) ನಿವೃತ್ತಿಂ ಚ (ಮತ್ತು ನಿವೃತ್ತಿಯನ್ನೂ) ನ ವಿದುಃ (ಅರಿಯರು) ತೇಷು (ಅವರಲ್ಲಿ) ಶೌಚಂ (ಶೌಚವು) ನ (ಇಲ್ಲ) ಆಚಾರಃ ಅಪಿ (ಆಚಾರವೂ) ನ (ಇಲ್ಲ) ಸತ್ಯಂ ಚ (ಸತ್ಯವೂ) ನ ವಿದ್ಯತೇ (ಇರುವುದಿಲ್ಲ).

೭. ಆಸುರೀಸ್ವಭಾವದ ಜನರು ಪ್ರವೃತ್ತಿಯನ್ನೂ[1] ನಿವೃತ್ತಿಯನ್ನೂ[2] ಅರಿಯರು; ಅವರಲ್ಲಿ ಶೌಚವಿಲ್ಲ,[3] ಆಚಾರವೂ[4] ಇಲ್ಲ, ಸತ್ಯವೂ ಇಲ್ಲ.

1 ಪುರುಷಾರ್ಥವನ್ನು ಸಾಧಿಸಲು ಮಾಡಬೇಕಾದದ್ದು (ಶ್ರೀಶಂಕರ). ಅಭ್ಯುದಯ ಸಾಧನವಾದ ವೈದಿಕಧರ್ಮ (ಶ್ರೀರಾಮಾನುಜ).

2 ಪ್ರವೃತ್ತಿಗೆ ವಿರುದ್ಧವಾದದ್ದು ಮತ್ತು ಅನರ್ಥಹೇತುವಾದ ಕರ್ಮದಿಂದ ಹಿಂಜರಿಯಬೇಕಾದದ್ದು (ಶ್ರೀಶಂಕರ). ಮೋಕ್ಷಸಾಧನವಾದ ವೈದಿಕಧರ್ಮ (ಶ್ರೀರಾಮಾನುಜ).

3 ಶಾಸ್ತ್ರಸಿದ್ಧವಾದ ವೈದಿಕಕರ್ಮಗಳಿಗೆ ಯೋಗ್ಯತೆಯನ್ನುಂಟುಮಾಡುವ ಒಳಗಿನ ಮತ್ತು ಹೊರಗಿನ ಶುದ್ಧತೆ (ಶ್ರೀರಾಮಾನುಜ).

4 ಆ ಬಾಹ್ಯಾಂತರಶೌಚವು ಯಾವ ಸಂಧ್ಯಾವಂದನಾದಿಗಳಿಂದ ಉಂಟಾಗುತ್ತದೆಯೋ ಅಂತಹ ಅನುಷ್ಠಾನ (ಶ್ರೀರಾಮಾನುಜ).

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ॥ ೮ ॥**

ತೇ (ಅವರು) ಜಗತ್ (ಈ ಜಗತ್ತನ್ನು) ಅಸತ್ಯಂ (ಅಸತ್ಯವೆಂದೂ) ಅಪ್ರತಿಷ್ಠಂ (ಅಪ್ರತಿಷ್ಠವೆಂದೂ) ಅನೀಶ್ವರಂ (ಅನೀಶ್ವರವೆಂದೂ) ಅಪರಸ್ಪರಸಂಭೂತಂ (ಸ್ತ್ರೀ ಪುರುಷರ ಸಂಯೋಗದಿಂದ ಉಂಟಾಗಿರುವುದೆಂದೂ) ಕಿಂ ಅನ್ಯತ್ (ಇನ್ನೇನು) ಕಾಮಹೈತುಕಂ (ಕಾಮವೇ ಕಾರಣವಾಗಿ ಉಳ್ಳದೆಂದೂ) ಆಹುಃ (ಹೇಳುವರು).

೮. ಈ ಜಗತ್ತು ಅನಿತ್ಯ,[1] ಪ್ರತಿಷ್ಠೆಯಿಲ್ಲದ್ದು,[2] ಈಶ್ವರರಹಿತವಾದದ್ದು, ಸ್ತ್ರೀಪುರುಷರ ಸಂಯೋಗದಿಂದ ಉಂಟಾಗಿದ್ದು; ಇನ್ನೇನು? ಕಾಮವೇ (ಸೃಷ್ಟಿಗೆ) ಕಾರಣವು—ಎಂದು ಅವರು[3] ಹೇಳುವರು.

1 ನಾವು ಹೇಗೆ ಅನೃತಪ್ರಾಯರೋ ಹಾಗೆಯೇ ಈ ಜಗತ್ತು ಅಸತ್ಯ (ಶ್ರೀಶಂಕರ). ಸತ್ಯಶಬ್ದನಿರ್ದಿಷ್ಟನಾದ ಬ್ರಹ್ಮನ ಕಾರ್ಯವೆಂದಾಗಲೀ ಬ್ರಹ್ಮಾತ್ಮಕವೆಂದಾಗಲೀ ಹೇಳುವುದಿಲ್ಲ (ಶ್ರೀರಾಮಾನುಜ).

2 ಧರ್ಮಾಧರ್ಮಗಳೆಂಬ ಆಧಾರವಿರುವುದಿಲ್ಲ (ಶ್ರೀಶಂಕರ). ಬ್ರಹ್ಮನಲ್ಲಿ ಪ್ರತಿಷ್ಠಿತವಾಗಿದೆಯೆಂದು ಹೇಳುವುದಿಲ್ಲ (ಶ್ರೀರಾಮಾನುಜ).

3 ಲೋಕಾಯತಿಕರು ಅಥವಾ ಚಾರ್ವಾಕರು.

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೯ ॥**

ಏತಾಂ (ಈ) ದೃಷ್ಟಿಂ (ದೃಷ್ಟಿಯನ್ನು, ಮತವನ್ನು) ಅವಷ್ಟಭ್ಯ (ಆಶ್ರಯಿಸಿ ಕೊಂಡು) ನಷ್ಟಾತ್ಮಾನಃ (ನಷ್ಟಾತ್ಮರಾಗಿ) ಅಲ್ಪಬುದ್ಧಯಃ (ಅಲ್ಪಬುದ್ಧಿಯುಳ್ಳವ ರಾಗಿ) ಉಗ್ರಕರ್ಮಾಣಃ (ಕ್ರೂರಕರ್ಮಿಗಳಾಗಿ) ಅಹಿತಾಃ (ಲೋಕಶತ್ರುಗಳಾಗಿ) ಜಗತಃ (ಜಗತ್ತಿನ) ಕ್ಷಯಾಯ (ನಾಶಕ್ಕೆ) ಪ್ರಭವಂತಿ (ಹುಟ್ಟುತ್ತಾರೆ, ಕಾರಣ ರಾಗುತ್ತಾರೆ).

೯. ಈ ಮತವನ್ನು ಆಶ್ರಯಿಸಿಕೊಂಡು ನಷ್ಟಾತ್ಮರೂ[1] ಅಲ್ಪಬುದ್ಧಿಗಳೂ ಕ್ರೂರಕರ್ಮಿಗಳೂ ಲೋಕಶತ್ರುಗಳೂ ಆದ (ಈ ಆಸುರೀಸ್ವಭಾವದ ಜನರು) ಜಗತ್ತಿನ ನಾಶಕ್ಕೆ ಕಾರಣರಾಗುತ್ತಾರೆ.

[1] ನಷ್ಟಸ್ವಭಾವವುಳ್ಳವರಾಗಿ ಪರಲೋಕಸಾಧನದಿಂದ ಭ್ರಷ್ಟರಾದವರು (ಶ್ರೀಶಂಕರ). ದೇಹಕ್ಕಿಂತಲೂ ಬೇರೆಯಾದ ಆತ್ಮನಿದ್ದಾನೆಂದು ತಿಳಿಯದವರು (ಶ್ರೀರಾಮಾನುಜ).

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।**
**ಮೋಹಾದ್ಗೃಹೀತ್ವಾ ಸದ್ಗ್ರಾಹಾನ್**
**ಪ್ರವರ್ತಂತೇಽಶುಚಿವ್ರತಾಃ ॥ ೧೦ ॥**

ದುಷ್ಪೂರಂ (ತೃಪ್ತಿಪಡಿಸಲಾಗದ) ಕಾಮಂ (ಕಾಮವನ್ನು) ಆಶ್ರಿತ್ಯ (ಆಶ್ರ ಯಿಸಿ) ದಂಭ-ಮಾನ-ಮದಾನ್ವಿತಾಃ (ದಂಭಮಾನಮದಗಳಿಂದ ಕೂಡಿದವರಾಗಿ) ಮೋಹಾತ್ (ಮೋಹದಿಂದ) ಅಸದ್ಗ್ರಾಹಾನ್ (ಅಸದ್ಗ್ರಾಹಗಳನ್ನು) ಗೃಹೀತ್ವಾ (ಹಿಡಿದು) ಅಶುಚಿ-ವ್ರತಾಃ (ಅಶುಚಿವ್ರತರಾಗಿ) ಪ್ರವರ್ತಂತೇ (ಪ್ರವರ್ತಿಸುತ್ತಾರೆ).

೧೦. ತೃಪ್ತಿಪಡಿಸಲಾಗದ ಕಾಮವನ್ನು ಆಶ್ರಯಿಸಿ, ದಂಭಮಾನಮದ ಗಳಿಂದ ಕೂಡಿದವರಾಗಿ, ಮೋಹದಿಂದ ಅಸದ್ಗ್ರಾಹಗಳನ್ನು[1] ಹಿಡಿದು ಅಶುಚಿ ವ್ರತರಾಗಿ ಪ್ರವರ್ತಿಸುತ್ತಾರೆ.

[1] ಅಶುಭನಿಶ್ಚಯಗಳನ್ನು (ಶ್ರೀಶಂಕರ). ಅನ್ಯಾಯದಿಂದ ಸಂಪಾದಿಸಲ್ಪಟ್ಟ ವಸ್ತು ಗಳನ್ನು (ಶ್ರೀರಾಮಾನುಜ).

**ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥**

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥ-**
**ಸಂಚಯಾನ್ ॥ ೧೨ ॥**

ಅಪರಿಮೇಯಾಂ (ಅಪರಿಮೇಯವಾದ) ಪ್ರಲಯಾಂತಾಂ (ಪ್ರಲಯಾಂತ ವಾದ) ಚಿಂತಾಂ (ಚಿಂತೆಯನ್ನು) ಉಪಾಶ್ರಿತಾಃ (ಆಶ್ರಯಿಸಿದವರಾಗಿ) ಕಾಮೋಪ-

ಭೋಗಪರಮಾಃ (ಕಾಮೋಪಭೋಗಪರಾಯಣರಾಗಿ) ಏತಾವತ್ ಇತಿ (ಇಷ್ಟೇ ಎಂದು) ನಿಶ್ಚಿತಾಃ (ನಿಶ್ಚಯಿಸಿದವರಾಗಿ) ಆಶಾಪಾಶಶತೈಃ (ಆಶೆಗಳೆಂಬ ನೂರಾರು ಹಗ್ಗಗಳಿಂದ) ಬದ್ಧಾಃ (ಕಟ್ಟಲ್ಪಟ್ಟವರಾಗಿ) ಕಾಮಕ್ರೋಧಪರಾಯಣಾಃ (ಕಾಮಕ್ರೋಧಪರಾಯಣರಾಗಿ) ಕಾಮಭೋಗಾರ್ಥಂ (ಕಾಮದ ಭೋಗಕ್ಕಾಗಿ) ಅನ್ಯಾಯೇನ (ಅನ್ಯಾಯದಿಂದ) ಅರ್ಥಸಂಚಯಾನ್ (ಧನಸಂಚಯಗಳನ್ನು) ಈಹಂತೇ (ಪ್ರಯತ್ನಿಸುತ್ತಾರೆ).

**೧೧-೧೨.** ಅಪರಿಮೇಯವೂ ಪ್ರಳಯಾಂತವೂ[1] ಆದ ಚಿಂತೆಯನ್ನು ಆಶ್ರಯಿಸಿದವರಾಗಿ, ಕಾಮೋಪಭೋಗಪರಾಯಣರಾಗಿ, ಇಷ್ಟೇ ಎಂದು[2] ನಿಶ್ಚಯಿಸಿದವರಾಗಿ, ಆಶೆಯೆಂಬ ನೂರಾರು ಹಗ್ಗಗಳಿಂದ ಕಟ್ಟಲ್ಪಟ್ಟವರಾಗಿ, ಕಾಮಕ್ರೋಧಪರಾಯಣರಾಗಿ, ಕಾಮದ ಭೋಗಕ್ಕಾಗಿ ಅನ್ಯಾಯದಿಂದ ಧನಸಂಚಯಗಳನ್ನು (ಮಾಡಲು) ಪ್ರಯತ್ನಿಸುತ್ತಾರೆ.

1 ಸಾಯುವ ವರೆಗೆ.
2 ಇದೇ ಪರಮಪುರುಷಾರ್ಥವೆಂದು.

**ಇದಮದ್ಯ ಮಯಾ ಲಬ್ಧಮಿದಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥ ೧೩ ॥**

ಅದ್ಯ (ಇಂದು) ಮಯಾ (ನನ್ನಿಂದ) ಇದಂ (ಇದು) ಲಬ್ಧಂ (ಹೊಂದಲ್ಪಟ್ಟಿತು) ಇದಂ (ಈ) ಮನೋರಥಂ (ಮನೋರಥವನ್ನು) ಪ್ರಾಪ್ಸ್ಯೇ (ಹೊಂದುತ್ತೇನೆ) ಇದಂ (ಈ ಧನವು) ಅಸ್ತಿ (ಇದೆ) ಪುನಃ (ಪುನಃ) ಮೇ (ನನಗೆ) ಇದಂ ಧನಂ ಅಪಿ (ಈ ಧನವೂ ಕೂಡ) ಭವಿಷ್ಯತಿ (ಉಂಟಾಗುವುದು);

**೧೩.** ಇಂದು ಇದು ನನ್ನಿಂದ ಹೊಂದಲ್ಪಟ್ಟಿತು; ಈ ಮನೋರಥವನ್ನು ಹೊಂದುತ್ತೇನೆ; ಈ ಧನವು (ನನಗೆ) ಇದೆ; ನನಗೆ ಈ ಧನವೂ ಕೂಡ ಉಂಟಾಗುವುದು;

[ಇವೆಲ್ಲವೂ ಅದೃಷ್ಟದಿಂದ ಉಂಟಾಗಿಲ್ಲ, ತನ್ನ ಸಾಮರ್ಥ್ಯದಿಂದಲೇ ಉಂಟಾಗಿದೆ ಎಂದು ತಿಳಿಯುತ್ತಾನೆ.]

**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥ ೧೪ ॥**

ಅಸೌ (ಈ) ಶತ್ರುಃ (ಶತ್ರುವು) ಮಯಾ (ನನ್ನಿಂದ) ಹತಃ (ಕೊಲ್ಲಲ್ಪಟ್ಟನು) ಅಪರಾನ್ ಅಪಿ ಚ (ಇತರ ಶತ್ರುಗಳನ್ನೂ) ಹನಿಷ್ಯೇ (ಕೊಲ್ಲುವೆನು) ಅಹಂ (ನಾನು)

ಈಶ್ವರಃ (ಈಶ್ವರನು) ಅಹಂ (ನಾನು) ಭೋಗೀ (ಭೋಗಿ) ಅಹಂ (ನಾನು) ಸಿದ್ಧಃ (ಸಿದ್ಧನು) ಬಲವಾನ್ (ಬಲವಂತನು) ಸುಖೀ (ಸುಖಿಯು);

**೧೪.** ಈ ಶತ್ರುವು ನನ್ನಿಂದ ಕೊಲ್ಲಲ್ಪಟ್ಟನು, ಇತರ ಶತ್ರುಗಳನ್ನೂ ಕೊಲ್ಲುವೆನು, ನಾನು ಈಶ್ವರ, ಭೋಗಿ, ಸಿದ್ಧ ಬಲವಂತ ಮತ್ತು ಸುಖಿ;

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥ ೧೫ ॥**
**ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥ ೧೬ ॥**

ಆಢ್ಯಃ (ಹಣವಂತನು) ಅಭಿಜನವಾನ್ (ಕುಲೀನನು) ಅಸ್ಮಿ (ಆಗಿದ್ದೇನೆ) ಮಯಾ ಸದೃಶಃ (ನನಗೆ ಸಮನಾದವನು) ಅನ್ಯಃ ಕಃ ಅಸ್ತಿ (ಬೇರೆ ಯಾವನಿದ್ದಾನೆ) ಯಕ್ಷ್ಯೇ (ಯಾಗವನ್ನು ಮಾಡುವೆನು) ದಾಸ್ಯಾಮಿ (ದಾನಮಾಡುವೆನು) ಮೋದಿಷ್ಯೇ (ಮೋದಪಡುವೆನು) ಇತಿ (ಎಂದು) ಅಜ್ಞಾನವಿಮೋಹಿತಾಃ (ಅಜ್ಞಾನದಿಂದ ವಿಮೋಹಿತರಾಗಿ) ಅನೇಕ-ಚಿತ್ತ-ವಿಭ್ರಾಂತಾಃ (ಅನೇಕ ಚಿಂತೆಗಳಿಂದ ಭ್ರಾಂತರಾಗಿ) ಮೋಹ-ಜಾಲ-ಸಮಾವೃತಾಃ (ಮೋಹಜಾಲದಿಂದ ಆವರಿಸಲ್ಪಟ್ಟವರಾಗಿ) ಕಾಮಭೋಗೇಷು (ಕಾಮಭೋಗಗಳಲ್ಲಿ) ಪ್ರಸಕ್ತಾಃ (ಆಸಕ್ತರಾಗಿ) ಅಶುಚೌ (ಅಶುಚಿಯಾದ) ನರಕೇ (ನರಕದಲ್ಲಿ) ಪತಂತಿ (ಬೀಳುತ್ತಾರೆ).

**೧೫-೧೬.** ನಾನು ಹಣವಂತನು ಮತ್ತು ಕುಲೀನನು; ನನಗೆ ಸಮನಾದವನು ಬೇರೆ ಯಾವನಿದ್ದಾನೆ? ನಾನು ಯಾಗಮಾಡುವೆನು, ದಾನಮಾಡುವೆನು,[1] ಮೋದಪಡುವೆನು—ಎಂದು ಅಜ್ಞಾನದಿಂದ ಮೋಹಿತರಾಗಿ, ಅನೇಕ ಚಿಂತೆಗಳಿಂದ ಭ್ರಾಂತರಾಗಿ, ಮೋಹಜಾಲದಿಂದ ಆವರಿಸಲ್ಪಟ್ಟವರಾಗಿ, ಕಾಮಭೋಗಗಳಲ್ಲಿ ಆಸಕ್ತರಾಗಿ ಅಶುಚಿಯಾದ ನರಕದಲ್ಲಿ ಬೀಳುತ್ತಾರೆ.

1 ನಟರೇ ಮೊದಲಾದವರಿಗೆ (ಶ್ರೀಶಂಕರ).

**ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ॥ ೧೭ ॥**

ಆತ್ಮಸಂಭಾವಿತಾಃ (ಆತ್ಮಸಂಭಾವಿತರಾದ) ಸ್ತಬ್ಧಾಃ (ಸ್ತಬ್ಧರಾದ) ಧನ-ಮಾನ-ಮದಾನ್ವಿತಾಃ (ಧನಮಾನಮದಗಳಿಂದ ಕೂಡಿದವರಾದ) ತೇ (ಅವರು) ದಂಭೇನ (ದಂಭದಿಂದ) ಅವಿಧಿಪೂರ್ವಕಂ (ವಿಧಿಯನ್ನು ಅನುಸರಿಸದೆ) ನಾಮಯಜ್ಞೈಃ (ನಾಮಯಜ್ಞಗಳಿಂದ) ಯಜಂತೇ (ಯಾಗಮಾಡುವರು).

೧೭. ಆತ್ಮಸಂಭಾವಿತರೂ[1] ಸ್ತಬ್ಧರೂ[2] ಧನಮಾನಮದಗಳಿಂದ ಕೂಡಿದವರೂ ಆದ ಅವರು ವಿಧಿಯನ್ನು ಅನುಸರಿಸದೆ ನಾಮಯಜ್ಞಗಳನ್ನು[3] ಮಾಡುತ್ತಾರೆ.

1 ತಮ್ಮನ್ನು ತಾವೇ ಶ್ಲಾಘಿಸಿಕೊಳ್ಳುವವರು.
2 ಅವಿನೀತರು (ಶ್ರೀಶಂಕರ). ತಾವು ಪರಿಪೂರ್ಣರೆಂದು ತಿಳಿದು ಏನನ್ನೂ ಮಾಡದವರು (ಶ್ರೀರಾಮಾನುಜ).
3 ಹೆಸರಿಗೆ ಮಾತ್ರ ಮಾಡುವ ಯಜ್ಞಕ್ಕೆ ನಾಮಯಜ್ಞವೆಂದು ಹೆಸರು.

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮ ॥**

ಅಹಂಕಾರಂ (ಅಹಂಕಾರವನ್ನೂ) ಬಲಂ (ಬಲವನ್ನೂ) ದರ್ಪಂ (ದರ್ಪವನ್ನೂ) ಕಾಮಂ (ಕಾಮವನ್ನೂ) ಕ್ರೋಧಂ ಚ (ಮತ್ತು ಕ್ರೋಧವನ್ನೂ) ಸಂಶ್ರಿತಾಃ (ಆಶ್ರಯಿಸಿದವರಾಗಿ) ಆತ್ಮ-ಪರ-ದೇಹೇಷು (ತಮ್ಮ ಮತ್ತು ಇತರ ದೇಹಗಳಲ್ಲಿರುವ) ಮಾಂ (ನನ್ನನ್ನು) ಪ್ರದ್ವಿಷಂತಃ (ದ್ವೇಷಿಸುವವರಾಗಿ) ಅಭ್ಯಸೂಯಕಾಃ (ಅಸೂಯೆಯುಳ್ಳವರಾಗಿ) [ಇರುತ್ತಾರೆ].

೧೮. ಅಹಂಕಾರ ಬಲ ದರ್ಪ ಕಾಮ ಮತ್ತು ಕ್ರೋಧ—ಇವುಗಳನ್ನು ಆಶ್ರಯಿಸಿದವರಾಗಿ, ತಮ್ಮ ಮತ್ತು ಇತರರ ದೇಹಗಳಲ್ಲಿರುವ ನನ್ನನ್ನು ದ್ವೇಷಿಸುತ್ತಾ ಅಸೂಯೆಯುಳ್ಳವರಾಗಿ[1] (ಇರುತ್ತಾರೆ).

1 ಸನ್ಮಾರ್ಗಿಗಳ ಗುಣಗಳಲ್ಲಿ ಸಹನೆಯಿಲ್ಲದವರಾಗಿ (ಶ್ರೀಶಂಕರ).

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥**

ಅಹಂ (ನಾನು) ದ್ವಿಷತಃ (ದ್ವೇಷಿಸುತ್ತಿರುವ) ತಾನ್ ಕ್ರೂರಾನ್ (ಆ ಕ್ರೂರರಾದ) ಅಶುಭಾನ್ (ಪಾಪಕರ್ಮಗಳನ್ನು ಮಾಡುವವರಾದ) ನರಾಧಮಾನ್ (ನರಾಧಮರನ್ನು) ಸಂಸಾರೇಷು (ಸಂಸಾರಗಳಲ್ಲಿ) ಆಸುರೀಷು ಯೋನಿಷು ಏವ (ಆಸುರೀಯೋನಿಗಳಲ್ಲಿಯೇ) ಅಜಸ್ರಂ (ಯಾವಾಗಲೂ) ಕ್ಷಿಪಾಮಿ (ಹಾಕುತ್ತೇನೆ).

೧೯. (ಹೀಗೆ ನನ್ನನ್ನು) ದ್ವೇಷಿಸುತ್ತಿರುವ ಆ ಕ್ರೂರರೂ ಪಾಪಕರ್ಮಗಳನ್ನು ಮಾಡುವವರೂ ಆದ ನರಾಧಮರನ್ನು ನಾನು ಸಂಸಾರಗಳಲ್ಲಿ (ಅದರಲ್ಲೂ) ಆಸುರೀಯೋನಿಗಳಲ್ಲಿಯೇ ಯಾವಾಗಲೂ ಹಾಕುತ್ತೇನೆ.

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ**
**ಗತಿಮ್ ॥ ೨೦ ॥**

ಕೌಂತೇಯ (ಕೌಂತೇಯನೆ) ಜನ್ಮನಿ ಜನ್ಮನಿ (ಪ್ರತಿಜನ್ಮದಲ್ಲಿಯೂ) ಆಸುರೀಂ ಯೋನಿಂ (ಆಸುರೀಯೋನಿಯನ್ನು) ಆಪನ್ನಾಃ (ಹೊಂದಿದವರಾದ) ಮೂಢಾಃ (ಮೂಢರು) ಮಾಂ (ನನ್ನನ್ನು) ಅಪ್ರಾಪ್ಯ ಏವ (ಹೊಂದದೆಯೇ) ತತಃ (ಅದಕ್ಕಿಂತಲೂ) ಅಧಮಾಂ (ಅಧಮವಾದ) ಗತಿಂ (ಗತಿಯನ್ನು) ಯಾಂತಿ (ಹೊಂದುವರು).

**೨೦.** ಎಲೈ ಅರ್ಜುನ, ಪ್ರತಿಜನ್ಮದಲ್ಲಿಯೂ ಆಸುರೀಯೋನಿಯನ್ನು ಹೊಂದಿದ ಮೂಢರು ನನ್ನನ್ನು ಪಡೆಯದೆಯೆ ಅದಕ್ಕಿಂತಲೂ ಅಧಮವಾದ ಗತಿಯನ್ನು ಹೊಂದುವರು.

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥ ೨೧ ॥**

ಕಾಮಃ (ಕಾಮ) ಕ್ರೋಧಃ (ಕ್ರೋಧ) ತಥಾ (ಹಾಗೆಯೇ) ಲೋಭಃ (ಲೋಭ) ಇದಂ (ಈ) ತ್ರಿವಿಧಂ (ಮೂರು ವಿಧವಾದ) ನರಕಸ್ಯ (ನರಕದ) ದ್ವಾರಂ (ದ್ವಾರವು) ಆತ್ಮನಃ (ಆತ್ಮನ) ನಾಶನಂ (ನಾಶಕ್ಕೆ ಕಾರಣವಾದುದು) ತಸ್ಮಾತ್ (ಆದುದರಿಂದ) ಏತತ್ (ಈ) ತ್ರಯಂ (ಮೂರನ್ನು) ತ್ಯಜೇತ್ (ಬಿಡಬೇಕು).

**೨೧.** ಕಾಮ ಕ್ರೋಧ ಮತ್ತು ಲೋಭ–ಈ ಮೂರು ವಿಧವಾದ ನರಕ ದ್ವಾರವು ಆತ್ಮನಾಶಕ್ಕೆ ಕಾರಣ. ಆದುದರಿಂದ ಈ ಮೂರನ್ನು ಬಿಡಬೇಕು.

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ ೨೨ ॥**

ಕೌಂತೇಯ (ಎಲೈ ಅರ್ಜುನನೆ) ಏತೈಃ (ಈ) ತ್ರಿಭಿಃ (ಮೂರು) ತಮೋ-ದ್ವಾರೈಃ (ತಮೋದ್ವಾರಗಳಿಂದ) ವಿಮುಕ್ತಃ (ಬಿಡಲ್ಪಟ್ಟವನಾದ) ನರಃ (ಮನುಷ್ಯನು) ಆತ್ಮನಃ (ತನ್ನ) ಶ್ರೇಯಃ (ಶ್ರೇಯಸ್ಸನ್ನು) ಆಚರತಿ (ಮಾಡಿಕೊಳ್ಳುತ್ತಾನೆ) ತತಃ (ಅದರಿಂದ) ಪರಾಂ ಗತಿಂ (ಪರಗತಿಯನ್ನು) ಯಾತಿ (ಹೊಂದುತ್ತಾನೆ).

**೨೨.** ಎಲೈ ಅರ್ಜುನ, ಈ ಮೂರು ತಮೋದ್ವಾರಗಳಿಂದ ಬಿಡಲ್ಪಟ್ಟ ಮನುಷ್ಯನು ತನ್ನ ಶ್ರೇಯಸ್ಸನ್ನು ಮಾಡಿಕೊಳ್ಳುತ್ತಾನೆ. ಅದರಿಂದ ಪರಗತಿಯನ್ನು ಹೊಂದುತ್ತಾನೆ.

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥ ೨೩ ॥**

ಯಃ (ಯಾವನು) ಶಾಸ್ತ್ರವಿಧಿಂ (ವೇದವಿಧಿಯನ್ನು) ಉತ್ಸೃಜ್ಯ (ಬಿಟ್ಟು) ಕಾಮಕಾರತಃ (ಸ್ವೇಚ್ಛೆಯಾಗಿ) ವರ್ತತೇ (ನಡೆಯುವನೋ) ಸಃ (ಅವನು) ಸಿದ್ಧಿಂ (ಪುರುಷಾರ್ಥಯೋಗ್ಯತೆಯನ್ನು) ನ ಅವಾಪ್ನೋತಿ (ಹೊಂದುವುದಿಲ್ಲ) ಸುಖಂ (ಸುಖವನ್ನು) ನ (ಹೊಂದುವುದಿಲ್ಲ) ಪರಾಂ ಗತಿಂ (ಪರಮಗತಿಯನ್ನು) ನ (ಹೊಂದುವುದಿಲ್ಲ).

**೨೩.** ಯಾವನು ವೇದವಿಧಿಯನ್ನು ಬಿಟ್ಟು ಸ್ವೇಚ್ಛೆಯಿಂದ ನಡೆಯುವನೋ ಅವನು ಪುರುಷಾರ್ಥಯೋಗ್ಯತೆಯನ್ನೂ ಹೊಂದುವುದಿಲ್ಲ, ಸುಖವನ್ನೂ ಹೊಂದುವುದಿಲ್ಲ, ಪರಮಗತಿಯನ್ನೂ ಹೊಂದುವುದಿಲ್ಲ.

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪ ॥**

ತಸ್ಮಾತ್ (ಆದುದರಿಂದ) ಕಾರ್ಯಾಕಾರ್ಯ-ವ್ಯವಸ್ಥಿತೌ (ಕಾರ್ಯ ಅಕಾರ್ಯ ಇವುಗಳ ನಿರ್ಧಾರಣೆಯಲ್ಲಿ) ಶಾಸ್ತ್ರಂ (ಶಾಸ್ತ್ರವು) ತೇ (ನಿನಗೆ) ಪ್ರಮಾಣಂ (ಪ್ರಮಾಣ) ಶಾಸ್ತ್ರವಿಧಾನೋಕ್ತಂ (ಶಾಸ್ತ್ರವಿಧಿಯಲ್ಲಿ ಹೇಳಿರುವುದನ್ನು) ಜ್ಞಾತ್ವಾ (ತಿಳಿದುಕೊಂಡು) ಇಹ (ಇಲ್ಲಿ) ಕರ್ಮ (ಕರ್ಮವನ್ನು) ಕರ್ತುಂ (ಮಾಡಲು) ಅರ್ಹಸಿ (ಅರ್ಹನಾಗಿರುತ್ತೀಯೆ).

**೨೪.** ಆದುದರಿಂದ ಕಾರ್ಯ ಅಕಾರ್ಯ ಇವುಗಳ ನಿರ್ಧಾರಣೆಯಲ್ಲಿ ಶಾಸ್ತ್ರವೇ ನಿನಗೆ ಪ್ರಮಾಣ. (ನೀನು) ಶಾಸ್ತ್ರವಿಧಿಯಲ್ಲಿ ಹೇಳಿರುವುದನ್ನು ತಿಳಿದುಕೊಂಡು ಇಲ್ಲಿ ಕರ್ಮವನ್ನು ಮಾಡಲು ಅರ್ಹನಾಗಿರುತ್ತೀಯೆ.

**ಇತಿ ದೈವಾಸುರಸಂಪದ್ವಿಭಾಗಯೋಗೋ ನಾಮ**
**ಷೋಡಶೋಽಧ್ಯಾಯಃ ।**

ದೈವಾಸುರಸಂಪದ್ವಿಭಾಗಯೋಗವೆಂಬ ಹದಿನಾರನೆಯ
ಅಧ್ಯಾಯವು ಮುಗಿಯಿತು.

# ಹದಿನೇಳನೆಯ ಅಧ್ಯಾಯ

## ಶ್ರದ್ಧಾತ್ರಯವಿಭಾಗಯೋಗ

ಅರ್ಜುನ ಉವಾಚ

**ಯೋ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥ ೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)—ಕೃಷ್ಣ (ಎಲೈ ಕೃಷ್ಣನೆ) ಯೇ (ಯಾರು) ಶಾಸ್ತ್ರವಿಧಿಂ (ಶಾಸ್ತ್ರವಿಧಿಯನ್ನು) ಉತ್ಸೃಜ್ಯ (ಬಿಟ್ಟು) ತು (ಆದರೆ) ಶ್ರದ್ಧಯಾ (ಶ್ರದ್ಧೆಯಿಂದ) ಅನ್ವಿತಾಃ (ಕೂಡಿದವರಾಗಿ) ಯಜಂತೇ (ಪೂಜಿಸುವರೋ) ತೇಷಾಂ (ಅವರ) ನಿಷ್ಠಾ (ನಿಷ್ಠೆಯು) ಕಾ (ಎಂತಹದು) ಸತ್ತ್ವಂ (ಸಾತ್ತ್ವಿಕವೋ) ರಜಃ (ರಾಜಸಿಕವೋ) ಆಹೋ ತಮಃ (ಅಥವಾ ತಾಮಸಿಕವೋ).

ಅರ್ಜುನನು ಹೇಳಿದನು

೧. ಎಲೈ ಕೃಷ್ಣ, ಯಾರು ಶಾಸ್ತ್ರವಿಧಿಯನ್ನು ಬಿಟ್ಟು ಶ್ರದ್ಧೆಯಿಂದ ಕೂಡಿ (ದೇವಾದಿಗಳನ್ನು) ಪೂಜಿಸುವರೋ ಅವರ ನಿಷ್ಠೆ ಎಂತಹದು? ಸಾತ್ವಿಕವೋ ರಾಜಸಿಕವೋ ಅಥವಾ ತಾಮಸಿಕವೋ?

ಶ್ರೀಭಗವಾನ್ ಉವಾಚ

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ದೇಹಿನಾಂ (ದೇಹಿಗಳ) ಸಾ ಸ್ವಭಾವಜಾ ಶ್ರದ್ಧಾ (ಸ್ವಭಾವದಿಂದ ಹುಟ್ಟಿದ ಆ ಶ್ರದ್ಧೆಯು) ಸಾತ್ತ್ವಿಕೀ (ಸಾತ್ತ್ವಿಕ) ರಾಜಸೀ (ರಾಜಸ) ತಾಮಸೀ ಚ (ಮತ್ತು ತಾಮಸ) ಇತಿ (ಎಂದು) ತ್ರಿವಿಧಾ ಏವ ಭವತಿ (ಮೂರು ವಿಧವಾಗಿಯೇ ಇರುತ್ತದೆ) ತಾಂ ಚ (ಅದನ್ನು) ಶೃಣು (ಕೇಳು).

ಶ್ರೀಕೃಷ್ಣನು ಹೇಳಿದನು

೨. ಸ್ವಭಾವದಿಂದ[1] ಹುಟ್ಟಿದ ದೇಹಿಗಳ ಆ ಶ್ರದ್ಧೆಯು ಸಾತ್ವಿಕ ರಾಜಸ ಮತ್ತು ತಾಮಸ ಎಂದು ಮೂರು ವಿಧವಾಗಿಯೇ ಇರುತ್ತದೆ; ಅದನ್ನು ಕೇಳು.

1 ಪೂರ್ವಜನ್ಮದ ಸಂಸ್ಕಾರದಿಂದ.

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥ ೩ ॥**

ಭಾರತ (ಎಲೈ ಅರ್ಜುನನೆ) ಸರ್ವಸ್ಯ (ಎಲ್ಲರ) ಶ್ರದ್ಧಾ (ಶ್ರದ್ಧೆಯು) ಸತ್ತ್ವಾನುರೂಪಾ (ಅಂತಃಕರಣಕ್ಕನುರೂಪವಾಗಿ) ಭವತಿ (ಆಗುತ್ತದೆ) ಅಯಂ ಪುರುಷಃ (ಈ ಪುರುಷನು) ಶ್ರದ್ಧಾಮಯಃ (ಶ್ರದ್ಧಾಮಯನು) ಯಃ (ಯಾವನು) ಯಚ್ಛ್ರದ್ಧಃ (ಯಾವ ಶ್ರದ್ಧೆಯುಳ್ಳವನೋ) ಸಃ (ಅವನು) ಸಃ ಏವ (ಅಂತಹವನೇ).

೩. ಎಲೈ ಅರ್ಜುನ, ಎಲ್ಲರ ಶ್ರದ್ಧೆಯು (ಅವರ) ಅಂತಃಕರಣಕ್ಕೆ ಅನುರೂಪವಾಗಿರುತ್ತದೆ. ಈ ಪುರುಷನು ಶ್ರದ್ಧಾಮಯನು; ಯಾವನು ಯಾವ ಶ್ರದ್ಧೆಯುಳ್ಳವನೋ ಅವನು ಅಂತಹವನೇ.[1]

1 ಅವನು ಆ ಶ್ರದ್ಧೆಗೆ ಅನುರೂಪನಾಗಿರುತ್ತಾನೆ.

**ಯಜಂತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪ ॥**

ಸಾತ್ತ್ವಿಕಾಃ (ಸಾತ್ತ್ವಿಕರು) ದೇವಾನ್ (ದೇವತೆಗಳನ್ನು) ಯಜಂತೇ (ಪೂಜಿಸುತ್ತಾರೆ) ರಾಜಸಾಃ (ರಾಜಸಿಕರು) ಯಕ್ಷರಕ್ಷಾಂಸಿ (ಯಕ್ಷರಾಕ್ಷಸರನ್ನು) [ಪೂಜಿಸುತ್ತಾರೆ] ಅನ್ಯೇ (ಇತರ) ತಾಮಸಾಃ ಜನಾಃ (ತಾಮಸಿಕರಾದ ಜನರು) ಪ್ರೇತಾನ್ (ಪ್ರೇತಗಳನ್ನು) ಭೂತಗಣಾನ್ ಚ (ಭೂತಗಣಗಳನ್ನೂ ಕೂಡ) ಯಜಂತೇ (ಪೂಜಿಸುತ್ತಾರೆ).

೪. ಸಾತ್ತ್ವಿಕರು ದೇವತೆಗಳನ್ನು ಪೂಜಿಸುತ್ತಾರೆ. ರಾಜಸಿಕರು ಯಕ್ಷರಾಕ್ಷಸರನ್ನು (ಪೂಜಿಸುತ್ತಾರೆ). ಇತರ ತಾಮಸಿಕ ಜನರು ಪ್ರೇತಗಳನ್ನೂ ಮತ್ತು ಭೂತಗಣಗಳನ್ನೂ[1] ಪೂಜಿಸುತ್ತಾರೆ.

1 ಸಪ್ತಮಾತೃಕೆಯರೇ ಮೊದಲಾದ (ಶ್ರೀಶಂಕರ).

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥**
**ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃಶರೀರಸ್ಥಂ ತಾನ್ ವಿದ್ಧ್ಯಾಸುರನಿಶ್ಚಯಾನ್ ॥ ೬ ॥**

ಯೇ ಜನಾಃ (ಯಾವ ಜನರು) ದಂಭಾಹಂಕಾರ-ಸಂಯುಕ್ತಾಃ (ದಂಭ ಅಹಂಕಾರ ಇವುಗಳಿಂದ ಕೂಡಿದವರಾಗಿ) ಕಾಮ-ರಾಗ-ಬಲಾನ್ವಿತಾಃ (ಕಾಮರಾಗ

ಬಲಗಳಿಂದ ಕೂಡಿದವರಾಗಿ) ಅಚೇತಸಃ (ಅವಿವೇಕಿಗಳಾಗಿ) ಶರೀರಸ್ಥಂ (ಶರೀರ ದಲ್ಲಿರುವ) ಭೂತಗ್ರಾಮಂ (ಇಂದ್ರಿಯಗಳ ಸಮೂಹವನ್ನೂ) ಅಂತಃಶರೀರಸ್ಥಂ (ಶರೀರದಲ್ಲಿರುವ) ಮಾಂ (ನನ್ನನ್ನೂ) ಕರ್ಶಯಂತಃ (ಕ್ಲೇಶಗೊಳಿಸುತ್ತಿರುವರೋ) ಅಶಾಸ್ತ್ರವಿಹಿತಂ (ಶಾಸ್ತ್ರವಿಹಿತವಲ್ಲದ) ಘೋರಂ (ಘೋರವಾದ) ತಪಃ ತಪ್ಯಂತೇ (ತಪಸ್ಸನ್ನು ಮಾಡುತ್ತಿರುವರೋ) ತಾನ್ (ಅಂತಹವರನ್ನು) ಆಸುರನಿಶ್ಚಯಾನ್ (ಆಸುರೀಬುದ್ಧಿಯುಳ್ಳವರೆಂದು) ವಿದ್ಧಿ (ತಿಳಿ).

**೫–೬.** ಯಾವ ಜನರು ದಂಭಾಹಂಕಾರಗಳಿಂದಲೂ ಕಾಮರಾಗಬಲ ಗಳಿಂದಲೂ ಕೂಡಿದವರಾಗಿ ಅವಿವೇಕಿಗಳಾಗಿ ಶರೀರದಲ್ಲಿರುವ ಇಂದ್ರಿಯ ಸಮುದಾಯವನ್ನೂ ಮತ್ತು ನನ್ನನ್ನೂ[1] ಕ್ಲೇಶಗೊಳಿಸುತ್ತಿರುವರೋ ಮತ್ತು ಶಾಸ್ತ್ರವಿಹಿತವಲ್ಲದ ಘೋರವಾದ ತಪಸ್ಸನ್ನು ಮಾಡುತ್ತಿರುವರೋ ಅಂತಹವ ರನ್ನು ಆಸುರೀಬುದ್ಧಿಯುಳ್ಳವರೆಂದು ತಿಳಿ.

[1] ಅವರ ಕರ್ಮಗಳಿಗೂ ಬುದ್ಧಿಗೂ ಸಾಕ್ಷಿಯಾಗಿರುವ ನನ್ನನ್ನು (ಶ್ರೀಶಂಕರ). ನನ್ನ ಅಂಶವಾದ ಜೀವನನ್ನು (ಶ್ರೀರಾಮಾನುಜ).

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥**

ಆಹಾರಃ ಅಪಿ ತು (ಆಹಾರವೂ ಕೂಡ) ಸರ್ವಸ್ಯ (ಎಲ್ಲರಿಗೂ) ತ್ರಿವಿಧಃ (ಮೂರು ವಿಧವಾಗಿ) ಪ್ರಿಯಃ ಭವತಿ (ಪ್ರಿಯವಾಗಿರುತ್ತದೆ) ತಥಾ (ಹಾಗೆಯೇ) ಯಜ್ಞಃ (ಯಜ್ಞ) ತಪಃ (ತಪಸ್ಸು) ದಾನಂ (ದಾನ) [ಮೂರು ವಿಧವಾಗಿ ಪ್ರಿಯ ವಾಗಿರುವುವು] ತೇಷಾಂ (ಅವುಗಳ) ಇಮಂ (ಈ) ಭೇದಂ (ಭೇದವನ್ನು) ಶೃಣು (ಕೇಳು).

**೭.** ಆಹಾರವೂ ಕೂಡ ಎಲ್ಲರಿಗೂ (ಸತ್ತ್ವಾದಿಗುಣಭೇದದಿಂದ) ಮೂರು ವಿಧವಾಗಿ ಪ್ರಿಯವಾಗಿರುತ್ತದೆ; ಹಾಗೆಯೇ ಯಜ್ಞ ತಪಸ್ಸು ದಾನ—(ಇವೂ ಮೂರು ವಿಧವಾಗಿ ಪ್ರಿಯವಾಗಿರುತ್ತವೆ). ಅವುಗಳ ಈ ಭೇದವನ್ನು ಕೇಳು.

**ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ ೮ ॥**

ಆಯುಸ್ಸತ್ತ್ವ-ಬಲಾರೋಗ್ಯ-ಸುಖ-ಪ್ರೀತಿ-ವಿವರ್ಧನಾಃ (ಆಯುಸ್ಸು ಸತ್ತ್ವ ಬಲ ಆರೋಗ್ಯ ಸುಖ ಪ್ರೀತಿ ಇವುಗಳನ್ನು ವೃದ್ಧಿಗೊಳಿಸುವವುಗಳಾದ) ರಸ್ಯಾಃ (ಮಧುರರಸದಿಂದ ಕೂಡಿದ) ಸ್ನಿಗ್ಧಾಃ (ಸ್ನಿಗ್ಧವಾದ) ಸ್ಥಿರಾಃ (ಸ್ಥಿರವಾದ) ಹೃದ್ಯಾಃ

(ಹೃದಯಪ್ರಿಯವಾದ) ಆಹಾರಾಃ (ಆಹಾರಗಳು) ಸಾತ್ತ್ವಿಕಪ್ರಿಯಾಃ (ಸಾತ್ತ್ವಿಕನಿಗೆ ಪ್ರಿಯವಾಗಿರುವುವು).

೮. ಆಯುಸ್ಸು ಸತ್ತ್ವ[1] ಬಲ ಆರೋಗ್ಯ ಸುಖ ಪ್ರೀತಿ–ಇವುಗಳನ್ನು ವೃದ್ಧಿಗೊಳಿಸುವವುಗಳಾದ ರಸಯುಕ್ತವಾದ ಸ್ನಿಗ್ಧವಾದ[2] ಸ್ಥಿರವಾದ[3] ಹೃದಯಪ್ರಿಯವಾದ ಆಹಾರಗಳು ಸಾತ್ತ್ವಿಕನಿಗೆ ಪ್ರಿಯವಾಗಿರುವುವು.

[1] ಜ್ಞಾನ (ಶ್ರೀರಾಮಾನುಜ).
[2] ಜಿಡ್ಡುಳ್ಳ.
[3] ಶರೀರದಲ್ಲಿ ಬಹುಕಾಲದ ವರೆಗೂ ಇರುವ.

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥**

ಕಟ್ವಮ್ಲ-ಲವಣಾತ್ಯುಷ್ಣ-ತೀಕ್ಷ್ಣ-ರೂಕ್ಷ-ವಿದಾಹಿನಃ (ಅತಿ ಕಹಿಯೂ ಹುಳಿಯೂ ಉಪ್ಪೂ ಉಷ್ಣವೂ ತೀಕ್ಷ್ಣವೂ ಒಣಕಲೂ ದಾಹವನ್ನುಂಟುಮಾಡುವುದೂ ಆದ) ದುಃಖಶೋಕಾಮಯಪ್ರದಾಃ (ದುಃಖ ಶೋಕ ರೋಗ ಇವುಗಳನ್ನುಂಟುಮಾಡುವವುಗಳಾದ) ಆಹಾರಾಃ (ಆಹಾರಗಳು) ರಾಜಸಸ್ಯ (ರಾಜಸಿಕನಿಗೆ) ಇಷ್ಟಾಃ (ಇಷ್ಟವಾದುವು).

೯. ಅತಿ ಕಹಿಯೂ ಹುಳಿಯೂ ಉಪ್ಪೂ ಉಷ್ಣವೂ ತೀಕ್ಷ್ಣವೂ ಒಣಕಲೂ ದಾಹವನ್ನುಂಟುಮಾಡುವುದೂ ಆದ ಮತ್ತು ದುಃಖಶೋಕರೋಗಗಳನ್ನುಂಟುಮಾಡುವ ಆಹಾರಗಳು ರಾಜಸಿಕಮನುಷ್ಯನಿಗೆ ಇಷ್ಟವಾದುವು.

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥ ೧೦ ॥**

ಯತ್ ಭೋಜನಂ (ಯಾವ ಆಹಾರವು) ಯಾತಯಾಮಂ (ಯಾತಯಾಮವೋ) ಗತರಸಂ (ರಸಹೀನವೋ) ಪೂತಿ (ದುರ್ಗಂಧಮಯವೋ) ಪರ್ಯುಷಿತಂ (ಹಳಸಿಹೋದುದೋ) ಉಚ್ಛಿಷ್ಟಂ (ಉಚ್ಛಿಷ್ಟವೋ) ಅಮೇಧ್ಯಂ (ಯಜ್ಞಕ್ಕೆ ಅನರ್ಹವೋ) [ತತ್ (ಅದು)] ತಾಮಸಪ್ರಿಯಂ (ತಾಮಸಿಕನಿಗೆ ಪ್ರಿಯವು).

೧೦. ಯಾತಯಾಮವೂ[1] ರಸಹೀನವೂ ದುರ್ಗಂಧಮಯವೂ ಹಳಸಿಹೋದುದೂ ಉಚ್ಛಿಷ್ಟವೂ ಯಜ್ಞಕ್ಕೆ ಅನರ್ಹವೂ ಆದ ಆಹಾರವು ತಾಮಸಿಕನಿಗೆ ಪ್ರಿಯವು.

[1] ಸ್ವಲ್ಪ ಪಕ್ವವಾಗಿರುವುದು (ಶ್ರೀಶಂಕರ). ಹೆಚ್ಚು ಹೊತ್ತಿನಿಂದ ಇಟ್ಟಿದ್ದು (ಶ್ರೀರಾಮಾನುಜ).

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧ ॥**

ಅಫಲಾಕಾಂಕ್ಷಿಭಿಃ (ಫಲಾಕಾಂಕ್ಷೆಯಿಲ್ಲದವರಿಂದ) ಯಷ್ಟವ್ಯಂ ಏವ ಇತಿ (ಯಜ್ಞವನ್ನು ಮಾಡಬೇಕೆಂದು) ಮನಃ (ಮನಸ್ಸನ್ನು) ಸಮಾಧಾಯ (ಸ್ಥಿರಗೊಳಿಸಿ) ಯಃ (ಯಾವ) ವಿಧಿದೃಷ್ಟಃ (ಶಾಸ್ತ್ರಸಮ್ಮತವಾದ) ಯಜ್ಞಃ (ಯಜ್ಞವು) ಇಜ್ಯತೇ (ಮಾಡಲ್ಪಡುವುದೋ) ಸಃ ಸಾತ್ತ್ವಿಕಃ (ಅದು ಸಾತ್ತ್ವಿಕವು).

೧೧. ಫಲಾಕಾಂಕ್ಷೆಯಿಲ್ಲದವರು 'ಯಜ್ಞವನ್ನು ಮಾಡಬೇಕು'[1] ಎಂದು ಮನಸ್ಸನ್ನು ಸ್ಥಿರಗೊಳಿಸಿ[2] ಯಾವ ಶಾಸ್ತ್ರಸಮ್ಮತವಾದ[3] ಯಜ್ಞವನ್ನು ಮಾಡುತ್ತಾರೆಯೋ ಅದು ಸಾತ್ತ್ವಿಕವಾದುದು.

[1] ಯಜ್ಞಸ್ವರೂಪವನ್ನುಂಟುಮಾಡುವುದೇ ಕರ್ತವ್ಯ (ಶ್ರೀಶಂಕರ). ಭಗವದಾರಾಧನರೂಪದಲ್ಲಿ ಯಜ್ಞಮಾಡುವುದೇ ಸ್ವಯಂಪ್ರಯೋಜನವೆಂದು (ಶ್ರೀರಾಮಾನುಜ).
[2] ತಾನು ಪಡೆದುಕೊಳ್ಳಬೇಕಾದ ಪುರುಷಾರ್ಥವೇನೂ ಇಲ್ಲವೆಂದು ನಿಶ್ಚಯಿಸಿ (ಶ್ರೀಶಂಕರ).
[3] ಮಂತ್ರದ್ರವ್ಯಕ್ರಿಯಾದಿಗಳಿಂದ ಕೂಡಿದ (ಶ್ರೀರಾಮಾನುಜ).

**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯಃ* ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ ೧೨ ॥**

ಭರತಶ್ರೇಷ್ಠ (ಎಲೈ ಭರತಶ್ರೇಷ್ಠನೆ) ತು (ಆದರೆ) ಫಲಂ (ಫಲವನ್ನು) ಅಭಿಸಂಧಾಯ (ಉದ್ದೇಶಿಸಿ) ದಂಭಾರ್ಥಂ ಅಪಿ ಏವ ಚ (ದಂಭಕ್ಕಾಗಿಯೇ) ಯಃ (ಯಾವ ಯಜ್ಞವು) ಇಜ್ಯತೇ (ಮಾಡಲ್ಪಡುವುದೋ) ತಂ ಯಜ್ಞಂ (ಆ ಯಜ್ಞವನ್ನು) ರಾಜಸಂ (ರಾಜಸವೆಂದು) ವಿದ್ಧಿ (ತಿಳಿ).

೧೨. ಆದರೆ, ಎಲೈ ಅರ್ಜುನ, ಫಲವನ್ನು ಉದ್ದೇಶಿಸಿ ದಂಭಕ್ಕಾಗಿಯೇ ಯಾವ ಯಜ್ಞವು ಮಾಡಲ್ಪಡುತ್ತದೆಯೋ ಅದನ್ನು ರಾಜಸವೆಂದು ತಿಳಿ.

* ಶಾಂಕರಪಾಠದಲ್ಲಿ 'ಯತ್' ಎಂದಿದೆ.

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥**

ವಿಧಿಹೀನಂ (ವಿಧಿಶೂನ್ಯವಾದ) ಅಸೃಷ್ಟಾನ್ನಂ (ಅನ್ನದಾನವಿಲ್ಲದ) ಮಂತ್ರಹೀನಂ (ಮಂತ್ರಹೀನವಾದ) ಅದಕ್ಷಿಣಂ (ದಕ್ಷಿಣಾಶೂನ್ಯವಾದ) ಶ್ರದ್ಧಾವಿರಹಿತಂ (ಶ್ರದ್ಧಾರಹಿತವಾದ) ಯಜ್ಞಂ (ಯಜ್ಞವನ್ನು) ತಾಮಸಂ (ತಾಮಸವೆಂದು) ಪರಿಚಕ್ಷತೇ (ಹೇಳುತ್ತಾರೆ).

೧೩. ವಿಧಿಶೂನ್ಯವೂ ಅನ್ನದಾನರಹಿತವೂ ಮಂತ್ರಹೀನವೂ[1] ದಕ್ಷಿಣಾ ಶೂನ್ಯವೂ ಶ್ರದ್ಧಾರಹಿತವೂ ಆದ ಯಜ್ಞವನ್ನು ತಾಮಸವೆಂದು ಹೇಳುತ್ತಾರೆ.

[1] ಸ್ವರದಿಂದ ಅಥವಾ ವರ್ಣದಿಂದ ರಹಿತವಾಗಿರುವುದು (ಶ್ರೀಶಂಕರ).

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥**

ದೇವ-ದ್ವಿಜ-ಗುರು-ಪ್ರಾಜ್ಞ-ಪೂಜನಂ (ದೇವತೆಗಳು ದ್ವಿಜರು ಗುರುಗಳು ಜ್ಞಾನಿಗಳು ಇವರ ಪೂಜೆ) ಶೌಚಂ (ಶೌಚ) ಆರ್ಜವಂ (ಆರ್ಜವ) ಬ್ರಹ್ಮಚರ್ಯಂ (ಬ್ರಹ್ಮಚರ್ಯ) ಅಹಿಂಸಾ ಚ (ಮತ್ತು ಅಹಿಂಸೆ) [ಇವು] ಶಾರೀರಂ ತಪಃ (ಕಾಯಿಕ ತಪಸ್ಸು) [ಎಂದು] ಉಚ್ಯತೇ (ಹೇಳಲ್ಪಡುತ್ತದೆ).

೧೪. ದೇವಬ್ರಾಹ್ಮಣಗುರುಜ್ಞಾನಿಗಳ ಪೂಜೆಯೂ ಶೌಚವೂ ಆರ್ಜವವೂ ಬ್ರಹ್ಮಚರ್ಯವೂ ಮತ್ತು ಅಹಿಂಸೆಯೂ ಕಾಯಿಕ ತಪಸ್ಸು ಎಂದು ಹೇಳಲ್ಪಡುತ್ತದೆ.

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥**

ಯತ್ (ಯಾವುದು) ಅನುದ್ವೇಗಕರಂ (ಉದ್ವೇಗವನ್ನುಂಟುಮಾಡದ) ಸತ್ಯಂ (ಸತ್ಯವಾದ) ಪ್ರಿಯಹಿತಂ ಚ (ಪ್ರಿಯವಾದ ಮತ್ತು ಹಿತವಾದ) ವಾಕ್ಯಂ (ವಾಕ್ಯವೋ) ಸ್ವಾಧ್ಯಾಯಾಭ್ಯಸನಂ ಏವ ಚ (ಸ್ವಶಾಖಾಧ್ಯಯನವೋ) [ತತ್ (ಅದು)] ವಾಙ್ಮಯಂ ತಪಃ (ವಾಚಿಕ ತಪಸ್ಸು) [ಎಂದು] ಉಚ್ಯತೇ (ಹೇಳಲ್ಪಟ್ಟಿದೆ).

೧೫. ಉದ್ವೇಗಕರವಲ್ಲದ, ಸತ್ಯವೂ ಪ್ರಿಯವೂ ಹಿತವೂ ಆದ ವಾಕ್ಯವೂ ಮತ್ತು ಸ್ವಶಾಖೆಯ ಅಧ್ಯಯನವೂ ವಾಚಿಕ ತಪಸ್ಸು ಎಂದು ಹೇಳಲ್ಪಟ್ಟಿದೆ.

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥**

ಮನಃಪ್ರಸಾದಃ (ಮನಸ್ಸಿನ ಪ್ರಸನ್ನತೆ) ಸೌಮ್ಯತ್ವಂ (ಸೌಮ್ಯಭಾವ) ಮೌನಂ (ಮೌನ) ಆತ್ಮವಿನಿಗ್ರಹಃ (ಮನೋನಿರೋಧ) ಭಾವಸಂಶುದ್ಧಿಃ (ಭಾವಸಂಶುದ್ಧಿ) ಇತಿ ಏತತ್ (ಎಂಬ ಇದು) ಮಾನಸಂ ತಪಃ (ಮಾನಸಿಕ ತಪಸ್ಸು) [ಎಂದು] ಉಚ್ಯತೇ (ಹೇಳಲ್ಪಟ್ಟಿದೆ).

೧೬. ಮನಸ್ಸಿನ ಪ್ರಸನ್ನತೆ ಸೌಮ್ಯಭಾವ[1] ಮೌನ[2] ಮನೋನಿರೋಧ ಭಾವಸಂಶುದ್ಧಿ[3]—ಇವು ಮಾನಸಿಕ ತಪಸ್ಸು ಎಂದು ಹೇಳಲ್ಪಟ್ಟಿವೆ.

1 ಇತರರಿಗೆ ಅಭ್ಯುದಯವುಂಟಾಗುವುದರಲ್ಲಿ ಮನಸ್ಸಿನ ಆಶೆ (ಶ್ರೀರಾಮಾನುಜ).

2 ಮಾತಿನ ಸಂಯಮ.

3 ಇತರರೊಂದಿಗೆ ವ್ಯವಹಾರಮಾಡುವಾಗ ಕಪಟತೆಯಿಲ್ಲದಿರುವುದು (ಶ್ರೀಶಂಕರ). ಆತ್ಮವ್ಯತಿರಿಕ್ತವಿಷಯದಲ್ಲಿ ಆಲೋಚನೆಯಿಲ್ಲದಿರುವುದು (ಶ್ರೀರಾಮಾನುಜ).

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ ೧೭ ॥**

ಅಫಲಾಕಾಂಕ್ಷಿಭಿಃ (ಫಲಾಕಾಂಕ್ಷಾರಹಿತರಾದ) ಯುಕ್ತೈಃ (ಸಮಾಹಿತರಾದ) ನರೈಃ (ಮನುಷ್ಯರಿಂದ) ಪರಯಾ ಶ್ರದ್ಧಯಾ (ಪರಮಶ್ರದ್ಧೆಯಿಂದ) ತಪ್ತಂ (ಆಚರಿಸಲ್ಪಟ್ಟ) ತತ್ (ಆ) ತ್ರಿವಿಧಂ (ಮೂರು ವಿಧವಾದ) ತಪಃ (ತಪಸ್ಸನ್ನು) ಸಾತ್ತ್ವಿಕಂ (ಸಾತ್ತ್ವಿಕವೆಂದು) ಪರಿಚಕ್ಷತೇ (ಹೇಳುತ್ತಾರೆ).

೧೭. ಫಲಾಕಾಂಕ್ಷೆಯಿಲ್ಲದ ಸಮಾಹಿತರಾದ ಮನುಷ್ಯರು ಪರಮ ಶ್ರದ್ಧೆಯಿಂದ ಆಚರಿಸುವ ಆ ಮೂರು ವಿಧವಾದ ತಪಸ್ಸನ್ನು ಸಾತ್ತ್ವಿಕವೆಂದು ಹೇಳುತ್ತಾರೆ.

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮ ॥**

ಸತ್ಕಾರ-ಮಾನ-ಪೂಜಾರ್ಥಂ (ಸತ್ಕಾರ ಗೌರವ ಪೂಜೆ ಇವುಗಳಿಗಾಗಿ) ಯತ್ ತಪಃ (ಯಾವ ತಪಸ್ಸು) ದಂಭೇನ ಏವ ಚ (ದಂಭದಿಂದಲೇ) ಕ್ರಿಯತೇ (ಮಾಡಲ್ಪಡುವುದೋ) ಚಲಂ (ಚಲವಾದ) ಅಧ್ರುವಂ (ಅನಿತ್ಯವಾದ) ತತ್ (ಅದು) ಇಹ (ಇಲ್ಲಿ) ರಾಜಸಂ (ರಾಜಸವೆಂದು) ಪ್ರೋಕ್ತಂ (ಹೇಳಲ್ಪಟ್ಟಿದೆ).

೧೮. ಸತ್ಕಾರಗೌರವಪೂಜೆಗಳಿಗಾಗಿ ಯಾವ ತಪಸ್ಸು ದಂಭದಿಂದ ಮಾಡಲ್ಪಡುವುದೋ, ಚಲವೂ ಅನಿತ್ಯವೂ ಆದ ಅದು ಇಲ್ಲಿ ರಾಜಸವೆಂದು ಹೇಳಲ್ಪಟ್ಟಿದೆ.

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥ ೧೯ ॥**

ಮೂಢಗ್ರಾಹೇಣ (ಅವಿವೇಕಬುದ್ಧಿಯಿಂದ) ಆತ್ಮನಃ (ತನ್ನ) ಪೀಡಯಾ (ಪೀಡೆಯ ಮೂಲಕ) ವಾ (ಅಥವಾ) ಪರಸ್ಯ (ಇತರರ) ಉತ್ಸಾದನಾರ್ಥಂ

(ನಾಶಕ್ಕಾಗಿ) ಯತ್ ತಪಃ (ಯಾವ ತಪಸ್ಸು) ಕ್ರಿಯತೇ (ಮಾಡಲ್ಪಡುತ್ತದೆಯೋ) ತತ್ (ಅದು) ತಾಮಸಂ (ತಾಮಸವೆಂದು) ಉದಾಹೃತಂ (ಹೇಳಲ್ಪಟ್ಟಿದೆ).

೧೯. ಮೂಢಬುದ್ಧಿಯಿಂದ ತನಗೆ ಪೀಡೆಯನ್ನುಂಟುಮಾಡುವುದರ ಮೂಲಕ[1] ಅಥವಾ ಇತರರ ನಾಶಕ್ಕಾಗಿ ಯಾವ ತಪಸ್ಸು ಮಾಡಲ್ಪಡುವುದೋ ಅದು ತಾಮಸವೆಂದು ಹೇಳಲ್ಪಟ್ಟಿದೆ.

[1] ತನ್ನ ಶಕ್ತಿ ಮೊದಲಾದುವುಗಳನ್ನು ಪರೀಕ್ಷಿಸದೆ (ಶ್ರೀರಾಮಾನುಜ).

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ ೨೦ ॥**

ದಾತವ್ಯಂ ಇತಿ (ದಾನಮಾಡತಕ್ಕದ್ದೆಂದು) ಯತ್ ದಾನಂ (ಯಾವ ದಾನವು) ಅನುಪಕಾರಿಣೇ (ಅನುಪಕಾರಿಗೆ) ದೇಶೇ (ದೇಶದಲ್ಲಿ) ಕಾಲೇ ಚ (ಕಾಲದಲ್ಲಿ) ಪಾತ್ರೇ ಚ (ಪಾತ್ರದಲ್ಲಿ) ದೀಯತೇ (ಕೊಡಲ್ಪಡುತ್ತದೆಯೋ) ತತ್ ದಾನಂ (ಆ ದಾನವು) ಸಾತ್ತ್ವಿಕಂ (ಸಾತ್ತ್ವಿಕವೆಂದು) ಸ್ಮೃತಂ (ಹೇಳಲ್ಪಟ್ಟಿದೆ).

೨೦. ದಾನಮಾಡತಕ್ಕದ್ದೆಂದು ಯಾವ ದಾನವು ಅನುಪಕಾರಿಯಾದವನಿಗೆ[1] ದೇಶಕಾಲಪಾತ್ರಗಳಲ್ಲಿ[2] ಕೊಡಲ್ಪಡುವುದೋ ಆ ದಾನವು ಸಾತ್ತ್ವಿಕವೆಂದು ಹೇಳಲ್ಪಟ್ಟಿದೆ.

[1] ಪ್ರತ್ಯುಪಕಾರವನ್ನು ಮಾಡಲು ಅಸಮರ್ಥನಾದವನಿಗೆ ಅಥವಾ ಸಮರ್ಥನಾಗಿದ್ದರೂ ಅವನಿಂದ ಏನನ್ನೂ ಅಪೇಕ್ಷಿಸದೆ (ಶ್ರೀಶಂಕರ).
[2] ಕುರುಕ್ಷೇತ್ರಾದಿಪುಣ್ಯದೇಶ, ಸಂಕ್ರಾಂತಿಯೇ ಮೊದಲಾದ ಕಾಲ, ಷಡಂಗವೇತ್ತನೂ ವೇದಪಾರಗನೂ ಮೊದಲಾದ ಪಾತ್ರ— ಇವುಗಳಲ್ಲಿ (ಶ್ರೀಶಂಕರ).

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಮ್ ॥ ೨೧ ॥**

ತು (ಆದರೆ) ಯತ್ ಚ (ಯಾವುದು) ಪ್ರತ್ಯುಪಕಾರಾರ್ಥಂ (ಪ್ರತ್ಯುಪಕಾರಕ್ಕಾಗಿ) ವಾ (ಅಥವಾ) ಪುನಃ ಫಲಂ (ಪುನಃ ಫಲವನ್ನು) ಉದ್ದಿಶ್ಯ (ಉದ್ದೇಶಿಸಿ) ಪರಿಕ್ಲಿಷ್ಟಂ (ಪರಿಕ್ಲೇಶದಿಂದ) ದೀಯತೇ (ಕೊಡಲ್ಪಡುವುದೋ) ತತ್ ದಾನಂ (ಆ ದಾನವು) ರಾಜಸಂ (ರಾಜಸವೆಂದು) ಉದಾಹೃತಂ (ಹೇಳಲ್ಪಟ್ಟಿದೆ).

೨೧. ಆದರೆ ಯಾವುದು ಪ್ರತ್ಯುಪಕಾರಕ್ಕಾಗಿ ಅಥವಾ ಪುನಃ ಫಲವನ್ನು ಉದ್ದೇಶಿಸಿ ಪರಿಕ್ಲೇಶದಿಂದ ಕೊಡಲ್ಪಡುವುದೋ ಆ ದಾನವು ರಾಜಸವೆಂದು ಹೇಳಲ್ಪಟ್ಟಿದೆ.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ೨೨ ॥**

ಯತ್ ದಾನಂ (ಯಾವ ದಾನವು) ಅದೇಶಕಾಲೇ (ಅದೇಶಕಾಲಗಳಲ್ಲಿ) ಅಪಾತ್ರೇಭ್ಯಃ ಚ (ಅಪಾತ್ರರಿಗೆ) ಅಸತ್ಕೃತಂ (ಸತ್ಕಾರವಿಲ್ಲದೆ) ಅವಜ್ಞಾತಂ (ತಿರಸ್ಕಾರದಿಂದ) ದೀಯತೇ (ಕೊಡಲ್ಪಡುವುದೋ) ತತ್ (ಅದು) ತಾಮಸಂ (ತಾಮಸವೆಂದು) ಉದಾಹೃತಂ (ಹೇಳಲ್ಪಟ್ಟಿದೆ).

**೨೨.** ಯಾವ ದಾನವು ಅದೇಶಕಾಲಗಳಲ್ಲಿ ಅಪಾತ್ರರಿಗೆ[1] ಸತ್ಕಾರವಿಲ್ಲದೆ ತಿರಸ್ಕಾರದಿಂದ ಕೊಡಲ್ಪಡುವುದೋ ಅದು ತಾಮಸವೆಂದು ಹೇಳಲ್ಪಟ್ಟಿದೆ.

[1] ಮೂರ್ಖರು ಕಳ್ಳರು ಮೊದಲಾದವರಿಗೆ (ಶ್ರೀಶಂಕರ).

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥**

ಓಂ ತತ್ ಸತ್ ಇತಿ (ಓಂ ತತ್ಸತ್ ಎಂದು) ಬ್ರಹ್ಮಣಃ (ಬ್ರಹ್ಮಕ್ಕೆ) ತ್ರಿವಿಧಃ (ಮೂರು ವಿಧವಾದ) ನಿರ್ದೇಶಃ (ನಿರ್ದೇಶವು) ಸ್ಮೃತಃ (ಹೇಳಲ್ಪಟ್ಟಿರುವುದು) ತೇನ (ಅದರ ಮೂಲಕ) ಪುರಾ (ಹಿಂದೆ) ಬ್ರಾಹ್ಮಣಾಃ (ಬ್ರಾಹ್ಮಣರು) ವೇದಾಃ ಚ (ವೇದಗಳು) ಯಜ್ಞಾಃ ಚ (ಯಜ್ಞಗಳು) ವಿಹಿತಾಃ (ವಿಹಿತವಾಗಿವೆ).

**೨೩.** 'ಓಂ ತತ್ ಸತ್' ಎಂದು ಬ್ರಹ್ಮಕ್ಕೆ ಮೂರು ವಿಧವಾದ ನಿರ್ದೇಶವು[1] ಹೇಳಲ್ಪಟ್ಟಿರುವುದು. ಅದರ ಮೂಲಕ ಹಿಂದೆ ಬ್ರಾಹ್ಮಣರೂ ಯಜ್ಞಗಳೂ ವೇದಗಳೂ ವಿಹಿತವಾಗಿವೆ.

[1] ನಾಮ ಅಥವಾ ಹೆಸರು.

[ಶ್ರೀರಾಮಾನುಜಭಾಷ್ಯದ ಪ್ರಕಾರ ಪೂರ್ವಾರ್ಧದ ಅರ್ಥವು ಹೀಗೆ ಆಗುತ್ತದೆ: 'ಓಂ ತತ್ ಸತ್' ಎಂಬ ಮೂರು ವಿಧವಾದ ಶಬ್ದಗಳು ವೇದೋಕ್ತವಾದ ಯಜ್ಞಾದಿಗಳಿಗೆ (ಬಹ್ಮ) ಅನ್ವಯವಾಗುತ್ತವೆ.]

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥ ೨೪ ॥**

ತಸ್ಮಾತ್ (ಆದುದರಿಂದ) ಓಂ ಇತಿ (ಓಂ ಎಂದು) ಉದಾಹೃತ್ಯ (ಉಚ್ಚರಿಸಿ) ಬ್ರಹ್ಮವಾದಿನಾಂ (ಬ್ರಹ್ಮವಾದಿಗಳ) ವಿಧಾನೋಕ್ತಾಃ (ಶಾಸ್ತ್ರಸಮ್ಮತವಾದ) ಯಜ್ಞದಾನತಪಃಕ್ರಿಯಾಃ (ಯಜ್ಞದಾನತಪಃಕ್ರಿಯೆಗಳು) ಸತತಂ (ಯಾವಾಗಲೂ) ಪ್ರವರ್ತಂತೇ (ಪ್ರಾರಂಭವಾಗುತ್ತವೆ).

೨೪. ಆದುದರಿಂದ ಬ್ರಹ್ಮವಾದಿಗಳು 'ಓಂ' ಎಂದು ಉಚ್ಚರಿಸಿ ಶಾಸ್ತ್ರ ಸಮ್ಮತವಾದ ಯಜ್ಞದಾನತಪಃಕ್ರಿಯೆಗಳನ್ನು ಯಾವಾಗಲೂ ಪ್ರಾರಂಭಿಸುತ್ತಾರೆ.

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ ೨೫ ॥**

ತತ್ ಇತಿ (ತತ್ ಎಂದು) [ಉದಾಹೃತ್ಯ (ಉಚ್ಚರಿಸಿ)] ಫಲಂ (ಫಲವನ್ನು) ಅನಭಿಸಂಧಾಯ (ಅಪೇಕ್ಷಿಸದೆ) ಮೋಕ್ಷಕಾಂಕ್ಷಿಭಿಃ (ಮೋಕ್ಷಕಾಂಕ್ಷಿಗಳಿಂದ) ವಿವಿಧಾಃ (ವಿವಿಧವಾದ) ಯಜ್ಞತಪಃಕ್ರಿಯಾಃ (ಯಜ್ಞಕ್ರಿಯೆಗಳು ಮತ್ತು ತಪಃ ಕ್ರಿಯೆಗಳು) ದಾನಕ್ರಿಯಾಃ ಚ (ಮತ್ತು ದಾನಕ್ರಿಯೆಗಳು) ಕ್ರಿಯಂತೇ (ಮಾಡಲ್ಪಡುತ್ತವೆ).

೨೫. ಮೋಕ್ಷಕಾಂಕ್ಷಿಗಳು 'ತತ್' ಎಂದು ಉಚ್ಚರಿಸಿ ಫಲವನ್ನು ಅಪೇಕ್ಷಿಸದೆ ವಿವಿಧವಾದ ಯಜ್ಞಕ್ರಿಯೆಗಳನ್ನೂ ತಪಃಕ್ರಿಯೆಗಳನ್ನೂ ಮತ್ತು ದಾನಕ್ರಿಯೆಗಳನ್ನೂ ಮಾಡುತ್ತಾರೆ.

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥**

ಪಾರ್ಥ (ಎಲೈ ಅರ್ಜುನನೆ) ಸದ್ಭಾವೇ (ಸದ್ಭಾವದಲ್ಲಿಯೂ) ಸಾಧುಭಾವೇ ಚ (ಮತ್ತು ಸಾಧುಭಾವದಲ್ಲಿಯೂ) ಸತ್ ಇತಿ ಏತತ್ (ಸತ್ ಎಂಬ ಇದು) ಪ್ರಯುಜ್ಯತೇ (ಪ್ರಯೋಗಿಸಲ್ಪಡುತ್ತದೆ) ತಥಾ (ಮತ್ತು) ಪ್ರಶಸ್ತೇ ಕರ್ಮಣಿ (ಪ್ರಶಸ್ತಕರ್ಮದಲ್ಲಿಯೂ) ಸಚ್ಛಬ್ದಃ (ಸತ್ ಎಂಬ ಶಬ್ದವು) ಯುಜ್ಯತೇ (ಪ್ರಯೋಗಿಸಲ್ಪಡುವುದು).

೨೬. ಎಲೈ ಅರ್ಜುನ, ಸದ್ಭಾವದಲ್ಲಿಯೂ[1] ಸಾಧುಭಾವದಲ್ಲಿಯೂ[2] 'ಸತ್' ಎಂಬ ಇದು ಪ್ರಯೋಗಿಸಲ್ಪಡುತ್ತದೆ; ಹಾಗೆಯೇ ಪ್ರಶಸ್ತಕರ್ಮದಲ್ಲಿಯೂ[3] ಸಚ್ಛಬ್ದವು ಪ್ರಯೋಗಿಸಲ್ಪಡುವುದು.

1 ಇರುವಿಕೆ ಎಂಬ ಅರ್ಥದಲ್ಲಿ.

2 ಒಳ್ಳೆಯದು ಎಂಬ ಅರ್ಥದಲ್ಲಿ.

3 ವಿವಾಹ ಮೊದಲಾದ ಶುಭಕರ್ಮಗಳಲ್ಲಿ.

[ಕರ್ಮಕ್ಕೆ ಸಾದ್ಗುಣ್ಯವನ್ನು ಉಂಟುಮಾಡಲು ಸತ್ ಎಂಬ ಬ್ರಹ್ಮದ ಹೆಸರು ಉಪಯೋಗಿಸಲ್ಪಡುವುದು.]

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥**

ಯಜ್ಞೇ (ಯಜ್ಞದಲ್ಲಿಯೂ) ತಪಸಿ (ತಪಸ್ಸಿನಲ್ಲಿಯೂ) ದಾನೇ ಚ (ಮತ್ತು ದಾನದಲ್ಲಿಯೂ) ಸ್ಥಿತಿಃ (ಇರುವಿಕೆಯು) ಸತ್ ಇತಿ (ಸತ್ ಎಂದು) ಉಚ್ಯತೇ (ಹೇಳಲ್ಪಡುತ್ತದೆ) ತದರ್ಥೀಯಂ ಚ (ಅದಕ್ಕಾಗಿ ಮಾಡುವ) ಕರ್ಮ ಏವ ಚ (ಕರ್ಮವು) ಸತ್ ಇತಿ ಏವ (ಸತ್ ಎಂದೇ) ಅಭಿಧೀಯತೇ (ಹೇಳಲ್ಪಡುತ್ತದೆ).

೨೭. ಯಜ್ಞದಲ್ಲಿಯೂ ತಪಸ್ಸಿನಲ್ಲಿಯೂ ದಾನದಲ್ಲಿಯೂ ಯಾವ ಇರುವಿಕೆಯುಂಟೋ ಅದು 'ಸತ್' ಎಂದು ಹೇಳಲ್ಪಡುತ್ತದೆ; ಮತ್ತು ಅದಕ್ಕಾಗಿ[1] ಮಾಡುವ ಕರ್ಮವೂ 'ಸತ್' ಎಂದೇ ಹೇಳಲ್ಪಡುತ್ತದೆ.

[1] ಯಜ್ಞದಾನತಪಸ್ಸುಗಳಿಗಾಗಿ ಅಥವಾ ಈಶ್ವರನಿಗಾಗಿ (ಶ್ರೀಶಂಕರ).

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮ ॥**

ಪಾರ್ಥ (ಎಲೈ ಅರ್ಜುನನೆ) ಯತ್ (ಯಾವುದು) ಅಶ್ರದ್ಧಯಾ (ಅಶ್ರದ್ಧೆಯಿಂದ) ಹುತಂ (ಹೋಮಮಾಡಲ್ಪಟ್ಟಿದೆಯೋ) ದತ್ತಂ (ದಾನಮಾಡಲ್ಪಟ್ಟಿದೆಯೋ) ತಪಃ (ತಪಸ್ಸು) ತಪ್ತಂ (ಆಚರಿಸಲ್ಪಟ್ಟಿದೆಯೋ) ಕೃತಂ ಚ (ಮಾಡಲ್ಪಟ್ಟಿರುವುದೋ) [ತತ್ (ಅದೆಲ್ಲವೂ)] ಅಸತ್ ಇತಿ (ಅಸತ್ ಎಂದು) ಉಚ್ಯತೇ (ಹೇಳಲ್ಪಟ್ಟಿದೆ) ತತ್ (ಅದು) ಪ್ರೇತ್ಯ (ಸತ್ತಮೇಲೆ) ನ ಚ (ಇಲ್ಲ) ಇಹ ನೋ (ಇಲ್ಲಿಯೂ ಇಲ್ಲ).

೨೮. ಎಲೈ ಪಾರ್ಥ, ಅಶ್ರದ್ಧೆಯಿಂದ ಮಾಡಿದ ಹೋಮ ದಾನ ತಪಸ್ಸು ಮತ್ತು ಕರ್ಮ[1]—ಇವೆಲ್ಲವೂ 'ಅಸತ್' ಎಂದು ಹೇಳಲ್ಪಡುತ್ತದೆ. ಅದು ಸತ್ತಮೇಲೂ (ಫಲಕ್ಕೆ) ಕಾರಣವಾಗುವುದಿಲ್ಲ; ಇಲ್ಲಿಯೂ (ಸುಖಕ್ಕೆ) ಕಾರಣವಾಗುವುದಿಲ್ಲ.[2]

[1] ಸ್ತುತಿನಮಸ್ಕಾರಾದಿಗಳು (ಶ್ರೀಶಂಕರ).
[2] ಏಕೆಂದರೆ ಸತ್ಪುರುಷರು ಅದನ್ನು ನಿಂದಿಸುತ್ತಾರೆ.

[ಅಶ್ರದ್ಧೆಯಿಂದ ಮಾಡಿದ ಹೋಮಾದಿಕರ್ಮಗಳು ಶಾಸ್ತ್ರೀಯವಾಗಿದ್ದರೂ 'ಅಸತ್' ಎಂದು ಹೇಳಲ್ಪಡುತ್ತವೆ—ಶ್ರೀರಾಮಾನುಜ.]

**ಇತಿ ಶ್ರದ್ಧಾತ್ರಯವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ ॥**

ಶ್ರದ್ಧಾತ್ರಯವಿಭಾಗಯೋಗವೆಂಬ ಹದಿನೇಳನೆಯ
ಅಧ್ಯಾಯವು ಮುಗಿಯಿತು.

# ಹದಿನೆಂಟನೆಯ ಅಧ್ಯಾಯ

## ಮೋಕ್ಷಸಂನ್ಯಾಸಯೋಗ

ಅರ್ಜುನ ಉವಾಚ

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ಮಹಾಬಾಹೋ (ಎಲೈ ಮಹಾಬಾಹುವೆ) ಹೃಷೀಕೇಶ (ಎಲೈ ಹೃಷೀಕೇಶನೆ) ಕೇಶಿನಿಷೂದನ (ಕೇಶಿ ಎಂಬ ರಾಕ್ಷಸನನ್ನು ನಾಶಮಾಡಿದವನೆ) ಸಂನ್ಯಾಸಸ್ಯ (ಸಂನ್ಯಾಸದ) ತ್ಯಾಗಸ್ಯ ಚ (ಮತ್ತು ತ್ಯಾಗದ) ತತ್ತ್ವಂ (ತತ್ತ್ವವನ್ನು) ಪೃಥಕ್ (ಬೇರೆಬೇರೆಯಾಗಿ) ವೇದಿತುಂ (ತಿಳಿದು ಕೊಳ್ಳಲು) ಇಚ್ಛಾಮಿ (ಬಯಸುತ್ತೇನೆ).

ಅರ್ಜುನನು ಹೇಳಿದನು

೧. ಎಲೈ ಮಹಾಬಾಹು, ಹೃಷೀಕೇಶ, ಕೇಶಿನಿಷೂದನ, ಸಂನ್ಯಾಸದ ಮತ್ತು ತ್ಯಾಗದ ತತ್ತ್ವವನ್ನು ಬೇರೆಬೇರೆಯಾಗಿ ತಿಳಿದುಕೊಳ್ಳಲು ಬಯಸು ತ್ತೇನೆ.

[ಸಮಸ್ತ ಗೀತಾಶಾಸ್ತ್ರದ ಅರ್ಥವನ್ನು ಈ ಅಧ್ಯಾಯದಲ್ಲಿ ಉಪಸಂಹರಿಸಿ ವೇದಾರ್ಥ ವೆಲ್ಲವನ್ನೂ ಹೇಳಬೇಕು ಎಂಬ ಅಭಿಪ್ರಾಯದಿಂದ ಈ ಅಧ್ಯಾಯವು ಆರಂಭಿಸಲ್ಪಟ್ಟಿದೆ —ಶ್ರೀಶಂಕರ.

ಈ ಕೆಳಗೆ ಹೇಳಿರುವ ಅಂಶಗಳು ಹದಿನೆಂಟನೆಯ ಅಧ್ಯಾಯದಲ್ಲಿ ಪ್ರತಿಪಾದಿತ ವಾಗಿವೆಯೆಂದು ಶ್ರೀರಾಮಾನುಜಾಚಾರ್ಯರು ತಮ್ಮ ಭಾಷ್ಯಾವತಾರಿಕೆಯಲ್ಲಿ ಹೇಳಿರು ತ್ತಾರೆ:

(1) ಮೋಕ್ಷಕ್ಕೆ ಸಾಧನಭೂತವೆಂದು ನಿರ್ದಿಷ್ಟವಾದ ತ್ಯಾಗಸಂನ್ಯಾಸಗಳ ಏಕತ್ವ.
(2) ತ್ಯಾಗದ ಸ್ವರೂಪ.
(3) ಸರ್ವೇಶ್ವರನಾದ ಭಗವಂತನಲ್ಲಿ ಸರ್ವಕರ್ಮಗಳ ಕರ್ತೃತ್ವಾನುಸಂಧಾನ.
(4) ಸತ್ತ್ವಗುಣವು ಆವಶ್ಯಕವಾಗಿ ಉಪಾದೇಯವು ಎಂಬುದನ್ನು ತೋರಿಸಲು ಸತ್ತ್ವರಜಸ್ತಮೋಗುಣಗಳ ಕಾರ್ಯವರ್ಣನೆ.
(5) ಪರಮಪುರುಷಾರಾಧನಭೂತವಾದ ಸ್ವಕರ್ಮಗಳು ಪರಮಪುರುಷಪ್ರಾಪ್ತಿ ಯನ್ನು ಹೊಂದಿಸುವ ಪ್ರಕಾರ.
(6) ಭಕ್ತಿಯೋಗವು ಸಮಸ್ತ ಗೀತಾಶಾಸ್ತ್ರದ ಸಾರಾರ್ಥ.]

ಶ್ರೀಭಗವಾನ್ ಉವಾಚ

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥**

ಶ್ರೀಭಗವಾನ್ (ಶ್ರೀಕೃಷ್ಣನು) ಉವಾಚ (ಹೇಳಿದನು)—ಕವಯಃ (ಕವಿಗಳು, ಪಂಡಿತರು) ಕಾಮ್ಯಾನಾಂ ಕರ್ಮಣಾಂ (ಕಾಮ್ಯಕರ್ಮಗಳ) ನ್ಯಾಸಂ (ಬಿಡುವಿಕೆಯನ್ನು) ಸಂನ್ಯಾಸಂ (ಸಂನ್ಯಾಸವೆಂದು) ವಿದುಃ (ಅರಿಯುತ್ತಾರೆ) ವಿಚಕ್ಷಣಾಃ (ವಿಚಕ್ಷಣರು, ಜ್ಞಾನಿಗಳು) ಸರ್ವ-ಕರ್ಮ-ಫಲತ್ಯಾಗಂ (ಸರ್ವಕರ್ಮಗಳ ಫಲತ್ಯಾಗವನ್ನು) ತ್ಯಾಗಂ (ತ್ಯಾಗವೆಂದು) ಪ್ರಾಹುಃ (ಹೇಳುತ್ತಾರೆ).

ಶ್ರೀಕೃಷ್ಣನು ಹೇಳಿದನು

೨. (ಕೆಲವರು) ಕವಿಗಳು ಕಾಮ್ಯಕರ್ಮಗಳ ಬಿಡುವಿಕೆಯನ್ನು ಸಂನ್ಯಾಸವೆಂದು ಅರಿಯುತ್ತಾರೆ. (ಮತ್ತೆ ಕೆಲವರು) ವಿಚಕ್ಷಣರು ಸರ್ವ ಕರ್ಮಗಳ ಫಲತ್ಯಾಗವನ್ನು ತ್ಯಾಗವೆಂದು ಹೇಳುತ್ತಾರೆ.

[ಸಂನ್ಯಾಸವೇ ಆಗಲಿ ತ್ಯಾಗವೇ ಆಗಲಿ 'ಬಿಡುವಿಕೆ' ಎಂಬುದು ಎರಡು ಪದಗಳಿಗೂ ಸಾಮಾನ್ಯವಾದ ಅರ್ಥ.]

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩ ॥**

ಏಕೇ ಮನೀಷಿಣಃ (ಕೆಲವರು ಪಂಡಿತರು) ಕರ್ಮ (ಕರ್ಮವು) ದೋಷವತ್ ಇತಿ (ದೋಷವುಳ್ಳದ್ದೆಂದು) ತ್ಯಾಜ್ಯಂ (ಬಿಡಲ್ಪಡತಕ್ಕದ್ದು) [ಎಂದು] ಪ್ರಾಹುಃ (ಹೇಳುತ್ತಾರೆ) ಅಪರೇ ಚ (ಇನ್ನು ಕೆಲವರು) ಯಜ್ಞ-ದಾನ-ತಪಃ-ಕರ್ಮ (ಯಜ್ಞದಾನತಪಃ ಕರ್ಮವು) ನ ತ್ಯಾಜ್ಯಂ ಇತಿ (ಬಿಡತಕ್ಕದ್ದಲ್ಲ ಎಂದು) [ಹೇಳುತ್ತಾರೆ].

೩. ಕರ್ಮವು ದೋಷವುಳ್ಳದ್ದಾಗಿರುವುದರಿಂದ ಬಿಡಲ್ಪಡತಕ್ಕದ್ದು ಎಂದು ಕೆಲವರು ಪಂಡಿತರು[1] ಹೇಳುತ್ತಾರೆ. ಯಜ್ಞದಾನತಪಃಕರ್ಮವು ಬಿಡತಕ್ಕದ್ದಲ್ಲವೆಂದು ಇನ್ನು ಕೆಲವರು ಹೇಳುತ್ತಾರೆ.

[1] ಸಾಂಖ್ಯರು ಅಥವಾ ಸಾಂಖ್ಯದೃಷ್ಟಿಯುಳ್ಳವರು.

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪ ॥**

ಭರತಸತ್ತಮ (ಎಲೈ ಭರತಶ್ರೇಷ್ಠನೆ) ತತ್ರ ತ್ಯಾಗೇ (ಆ ತ್ಯಾಗದ ವಿಷಯದಲ್ಲಿ ಮೇ (ನನ್ನ) ನಿಶ್ಚಯಂ (ನಿಶ್ಚಯವನ್ನು) ಶೃಣು (ಕೇಳು) ಪುರುಷವ್ಯಾಘ್ರ (ಎಲೈ ಪುರುಷವ್ಯಾಘ್ರನೆ) ತ್ಯಾಗಃ ಹಿ (ತ್ಯಾಗವು) ತ್ರಿವಿಧಃ (ತ್ರಿವಿಧವು) [ಎಂದು] ಸಂಪ್ರ-ಕೀರ್ತಿತಃ (ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುತ್ತದೆ).

೪. ಎಲೈ ಭರತಶ್ರೇಷ್ಠ, ತ್ಯಾಗದ ವಿಷಯದಲ್ಲಿ ನನ್ನ ನಿಶ್ಚಯವನ್ನು ಕೇಳು. ಎಲೈ ಪುರುಷವ್ಯಾಘ್ರ, ತ್ಯಾಗವು ತ್ರಿವಿಧವೆಂದು[1] (ಶಾಸ್ತ್ರಗಳಲ್ಲಿ) ಹೇಳಲ್ಪಟ್ಟಿದೆ.

[1] ತಾಮಸಾದಿಪ್ರಕಾರಗಳಿಂದ (ಶ್ರೀಶಂಕರ). ವೈದಿಕಕರ್ಮಗಳಲ್ಲಿ ಫಲವಿಷಯಕವಾದ ತ್ಯಾಗ, ಕರ್ಮವಿಷಯಕವಾದ ತ್ಯಾಗ, ಕರ್ತೃತ್ವವಿಷಯಕವಾದ ತ್ಯಾಗ (ಶ್ರೀ ರಾಮಾನುಜ).

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ ೫ ॥**

ಯಜ್ಞದಾನತಪಃಕರ್ಮ (ಯಜ್ಞ ದಾನ ತಪಸ್ಸು ಎಂಬ ಕರ್ಮವು) ನ ತ್ಯಾಜ್ಯಂ (ಬಿಡತಕ್ಕದ್ದಲ್ಲ) ತತ್ (ಅದು) ಕಾರ್ಯಂ ಏವ (ಮಾಡಲ್ಪಡತಕ್ಕದ್ದೇ) ಯಜ್ಞಃ (ಯಜ್ಞ) ದಾನಂ (ದಾನ) ತಪಃ ಏವ ಚ (ಮತ್ತು ತಪಸ್ಸು) ಮನೀಷಿಣಾಂ (ಮನೀಷಿಗಳಿಗೆ) ಪಾವನಾನಿ (ಪವಿತ್ರವಾದುವು).

೫. ಯಜ್ಞ ದಾನ ತಪಸ್ಸು ಎಂಬ ಕರ್ಮವು ಬಿಡತಕ್ಕದ್ದಲ್ಲ; ಅದು ಮಾಡಲ್ಪಡತಕ್ಕದ್ದೇ. ಯಜ್ಞ ದಾನ ಮತ್ತು ತಪಸ್ಸು ಮನೀಷಿಗಳಿಗೆ[1] ಪವಿತ್ರವಾದುವು.

[1] ಫಲವನ್ನು ಬಯಸದವರಿಗೆ (ಶ್ರೀಶಂಕರ). ಮನನಶೀಲರಿಗೆ (ಶ್ರೀರಾಮಾನುಜ).

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥ ೬ ॥**

ಪಾರ್ಥ (ಎಲೈ ಅರ್ಜುನನೆ) ತು (ಆದರೆ) ಏತಾನಿ (ಈ) ಕರ್ಮಾಣಿ (ಕರ್ಮಗಳೂ) ಸಂಗಂ (ಆಸಕ್ತಿಯನ್ನೂ) ಫಲಾನಿ ಚ (ಮತ್ತು ಫಲವನ್ನೂ) ತ್ಯಕ್ತ್ವಾ (ಬಿಟ್ಟು) ಕರ್ತವ್ಯಾನಿ (ಮಾಡಲ್ಪಡತಕ್ಕವು) ಇತಿ (ಎಂದು) ಮೇ (ನನ್ನ) ನಿಶ್ಚಿತಂ (ನಿಶ್ಚಿತವಾದ) ಉತ್ತಮಂ (ಉತ್ತಮವಾದ) ಮತಂ (ಮತ).

೬. ಆದರೆ, ಎಲೈ ಪಾರ್ಥ, ಆಸಕ್ತಿಯನ್ನೂ ಮತ್ತು ಫಲಗಳನ್ನೂ ಬಿಟ್ಟು ಈ ಕರ್ಮಗಳನ್ನೂ ಮಾಡಬೇಕು ಎಂದು ನನ್ನ ನಿಶ್ಚಿತವೂ ಉತ್ತಮವೂ ಆದ ಮತ.

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।
ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ ೭ ॥**

ತು (ಆದರೆ) ನಿಯತಸ್ಯ (ನಿತ್ಯವಾದ) ಕರ್ಮಣಃ (ಕರ್ಮದ) ಸಂನ್ಯಾಸಃ (ಸಂನ್ಯಾಸವು) ನ ಉಪಪದ್ಯತೇ (ಯುಕ್ತವಲ್ಲ) ಮೋಹಾತ್ (ಮೋಹದಿಂದ) ತಸ್ಯ (ಅದರ) ಪರಿತ್ಯಾಗಃ (ಪರಿತ್ಯಾಗವು) ತಾಮಸಃ (ತಾಮಸಿಕವು) [ಎಂದು] ಪರಿ-ಕೀರ್ತಿತಃ (ಹೇಳಲ್ಪಟ್ಟಿದೆ).

೭. ಆದರೆ ನಿತ್ಯಕರ್ಮದ ಸಂನ್ಯಾಸವು ಯುಕ್ತವಲ್ಲ.[1] ಮೋಹದಿಂದ ಅದನ್ನು ಪರಿತ್ಯಾಗಮಾಡುವುದು ತಾಮಸಿಕವೆಂದು ಹೇಳಲ್ಪಟ್ಟಿದೆ.

[1] ಏಕೆಂದರೆ ನಿತ್ಯಕರ್ಮವು ಅಜ್ಞಾನಿಗೆ ಶುದ್ಧಿಯನ್ನುಂಟುಮಾಡುವುದಕ್ಕೆ ಕಾರಣವಾಗಿರುತ್ತದೆ.

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥**

[ಯಃ (ಯಾವನು)] ಯತ್ ಕರ್ಮ (ಯಾವ ಕರ್ಮವನ್ನು) ದುಃಖಂ ಏವ ಇತಿ (ದುಃಖವೇ ಎಂದು) [ಭಾವಿಸಿ] ಕಾಯ-ಕ್ಲೇಶ-ಭಯಾತ್ (ಶರೀರಾಯಾಸದ ಭಯದಿಂದ) ತ್ಯಜೇತ್ (ತ್ಯಜಿಸುತ್ತಾನೆಯೋ) ಸಃ (ಅವನು) ರಾಜಸಂ ತ್ಯಾಗಂ (ರಾಜಸಿಕತ್ಯಾಗವನ್ನು) ಕೃತ್ವಾ (ಮಾಡಿ) ತ್ಯಾಗಫಲಂ (ತ್ಯಾಗದ ಫಲವನ್ನು) ನ ಲಭೇತ್ (ಹೊಂದುವುದಿಲ್ಲ).

೮. ಯಾವನು ಶರೀರಾಯಾಸದ ಭಯದಿಂದ ದುಃಖವೆಂದೇ (ಭಾವಿಸಿ) ಕರ್ಮವನ್ನು ತ್ಯಜಿಸುತ್ತಾನೆಯೋ ಅವನು ರಾಜಸಿಕತ್ಯಾಗವನ್ನು ಮಾಡಿ ತ್ಯಾಗದ ಫಲವನ್ನು[1] ಹೊಂದುವುದಿಲ್ಲ.

[1] ಮೋಕ್ಷವನ್ನು (ಶ್ರೀಶಂಕರ).

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯ ॥**

ಅರ್ಜುನ (ಎಲೈ ಅರ್ಜುನನೆ) ಯತ್ (ಯಾವ) ನಿಯತಂ (ನಿತ್ಯವಾದ) ಕರ್ಮ (ಕರ್ಮವು) ಕಾರ್ಯಂ ಇತಿ ಏವ (ಮಾಡಲ್ಪಡತಕ್ಕದ್ದು ಎಂದೇ) ಸಂಗಂ (ಆಸಕ್ತಿಯನ್ನೂ) ಫಲಂ ಚ ಏವ (ಮತ್ತು ಫಲವನ್ನೂ) ತ್ಯಕ್ತ್ವಾ (ಬಿಟ್ಟು) ಕ್ರಿಯತೇ (ಮಾಡಲ್ಪಡುತ್ತದೆಯೋ) ಸಃ ತ್ಯಾಗಃ (ಆ ತ್ಯಾಗವು) ಸಾತ್ತ್ವಿಕಃ (ಸಾತ್ತ್ವಿಕವು) [ಎಂದು] ಮತಃ (ಮತವು).

೯. ಎಲೈ ಅರ್ಜುನ, ಯಾವ ನಿತ್ಯಕರ್ಮವು ಮಾಡಲ್ಪಡತಕ್ಕದ್ದು ಎಂದೇ ಆಸಕ್ತಿಯನ್ನೂ ಮತ್ತು ಫಲವನ್ನೂ ಬಿಟ್ಟು ಮಾಡಲ್ಪಡುತ್ತದೆಯೋ ಆ ತ್ಯಾಗವು ಸಾತ್ತ್ವಿಕವು ಎಂದು (ನನ್ನ) ಮತ.

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥**

ಮೇಧಾವೀ (ಮೇಧಾವಿಯಾದ) ಛಿನ್ನಸಂಶಯಃ (ಸಂಶಯರಹಿತನಾದ) ಸತ್ತ್ವ-ಸಮಾವಿಷ್ಟಃ (ಸಾತ್ತ್ವಿಕನಾದ) ತ್ಯಾಗೀ (ತ್ಯಾಗಿಯು) ಅಕುಶಲಂ ಕರ್ಮ (ಅಕುಶಲವಾದ ಕರ್ಮವನ್ನು) ನ ದ್ವೇಷ್ಟಿ (ದ್ವೇಷಿಸುವುದಿಲ್ಲ) ಕುಶಲೇ (ಕುಶಲಕರ್ಮದಲ್ಲಿ) ನ ಅನುಷಜ್ಜತೇ (ಆಸಕ್ತನಾಗುವುದಿಲ್ಲ).

೧೦. ಮೇಧಾವಿಯೂ[1] ಸಂಶಯರಹಿತನೂ ಆದ ಸಾತ್ತ್ವಿಕತ್ಯಾಗಿಯು ಅಕುಶಲಕರ್ಮವನ್ನು[2] ದ್ವೇಷಿಸುವುದಿಲ್ಲ, ಕುಶಲಕರ್ಮದಲ್ಲಿ[3] ಆಸಕ್ತನಾಗುವುದಿಲ್ಲ.

1 ಆತ್ಮಜ್ಞಾನಲಕ್ಷಣವುಳ್ಳ ಪ್ರಜ್ಞೆಯಿಂದ ಕೂಡಿದವನು (ಶ್ರೀಶಂಕರ).
2 ಕಾಮ್ಯಕರ್ಮವನ್ನು (ಶ್ರೀಶಂಕರ).
3 ನಿತ್ಯಕರ್ಮದಲ್ಲಿ (ಶ್ರೀಶಂಕರ).

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**

ಹಿ (ಏಕೆಂದರೆ) ದೇಹಭೃತಾ (ದೇಹಧಾರಿಯಾದವನಿಂದ) ಕರ್ಮಾಣಿ (ಕರ್ಮಗಳನ್ನು) ಅಶೇಷತಃ (ಸಂಪೂರ್ಣವಾಗಿ) ತ್ಯಕ್ತುಂ (ತ್ಯಾಗಮಾಡಲು) ನ ಶಕ್ಯಂ (ಆಗುವುದಿಲ್ಲ) ತು (ಆದರೆ) ಯಃ (ಯಾವನು) ಕರ್ಮಫಲತ್ಯಾಗೀ (ಕರ್ಮಫಲತ್ಯಾಗಿಯೋ) ಸಃ (ಅವನು) ತ್ಯಾಗೀ ಇತಿ (ತ್ಯಾಗಿಯೆಂದು) ಅಭಿಧೀಯತೇ (ಹೇಳಲ್ಪಡುವನು).

೧೧. ಏಕೆಂದರೆ ದೇಹಧಾರಿಯಾದವನಿಂದ[1] ಕರ್ಮಗಳನ್ನು ಸಂಪೂರ್ಣವಾಗಿ ತ್ಯಾಗಮಾಡುವುದಕ್ಕೆ ಆಗುವುದಿಲ್ಲ. ಯಾವನು ಕರ್ಮಫಲತ್ಯಾಗಿಯೋ ಅವನೇ ತ್ಯಾಗಿಯೆಂದು ಹೇಳಲ್ಪಡುವನು.

1 ದೇಹವೇ ತಾನು ಎಂದು ಅಭಿಮಾನವುಳ್ಳವನು (ಶ್ರೀಶಂಕರ).

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨ ॥**

ಅನಿಷ್ಟಂ (ಅನಿಷ್ಟ) ಇಷ್ಟಂ (ಇಷ್ಟ) ಮಿಶ್ರಂ ಚ (ಮತ್ತು ಮಿಶ್ರ) [ಎಂಬ] ತ್ರಿವಿಧಂ (ತ್ರಿವಿಧವಾದ) ಕರ್ಮಣಃ (ಕರ್ಮದ) ಫಲಂ (ಫಲವು) ಅತ್ಯಾಗಿನಾಂ (ಅತ್ಯಾಗಿಗಳಿಗೆ) ಪ್ರೇತ್ಯ (ಹೊರಟುಹೋದ ಮೇಲೆ, ದೇಹಾವಸಾನವಾದ ಮೇಲೆ) ಭವತಿ (ಆಗುವುದು) ತು (ಆದರೆ) ಸಂನ್ಯಾಸಿನಾಂ (ಸಂನ್ಯಾಸಿಗಳಿಗೆ) ಕ್ವಚಿತ್ ನ [ಭವತಿ] (ಎಂದಿಗೂ ಆಗುವುದಿಲ್ಲ).

೧೨. ಅನಿಷ್ಟ[1] ಇಷ್ಟ[2] ಮಿಶ್ರ[3] ಎಂಬ ತ್ರಿವಿಧವಾದ ಕರ್ಮಫಲವು ಅತ್ಯಾಗಿಗಳಿಗೆ[4] ದೇಹಾವಸಾನವಾದ ಮೇಲೆ ಆಗುವುದು; ಆದರೆ ಸಂನ್ಯಾಸಿಗಳಿಗೆ[5] ಎಂದಿಗೂ ಆಗುವುದಿಲ್ಲ.

1 ಪಶ್ವಾದಿಜನ್ಮ.

2 ದೇವಾದಿಜನ್ಮ.

3 ಮನುಷ್ಯಜನ್ಮ.

4 ಪರಮಾರ್ಥಸಂನ್ಯಾಸವನ್ನು ಮಾಡದ ಕರ್ಮನಿಷ್ಠರಾದ ಅಜ್ಞಾನಿಗಳಿಗೆ (ಶ್ರೀ ಶಂಕರ). ಕರ್ತೃತ್ವ ಮಮತೆ ಫಲ ಇವುಗಳ ತ್ಯಾಗವನ್ನು ಮಾಡದವರಿಗೆ (ಶ್ರೀ ರಾಮಾನುಜ).

5 ಕೇವಲಜ್ಞಾನನಿಷ್ಠರೂ ಪರಮಹಂಸಪರಿವ್ರಾಜಕರೂ ಆದ ಪರಮಾರ್ಥಸಂನ್ಯಾಸಿಗಳು (ಶ್ರೀಶಂಕರ). ಕರ್ತೃತ್ವಾದಿಗಳನ್ನು ಬಿಟ್ಟಿರುವವರು (ಶ್ರೀರಾಮಾನುಜ).

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥ ೧೩ ॥**

ಮಹಾಬಾಹೋ (ಎಲೈ ಮಹಾಬಾಹುವೆ) ಸರ್ವಕರ್ಮಣಾಂ (ಎಲ್ಲಾ ಕರ್ಮಗಳ) ಸಿದ್ಧಯೇ (ಸಿದ್ಧಿಗಾಗಿ) ಏತಾನಿ ಪಂಚ ಕಾರಣಾನಿ (ಈ ಐದು ಕಾರಣಗಳು) ಸಾಂಖ್ಯೇ ಕೃತಾಂತೇ (ಸಾಂಖ್ಯಕೃತಾಂತದಲ್ಲಿ) ಪ್ರೋಕ್ತಾನಿ (ಹೇಳಲ್ಪಟ್ಟಿವೆ) [ತಾನಿ (ಅವುಗಳನ್ನು)] ಮೇ (ನನ್ನಿಂದ) ನಿಬೋಧ (ತಿಳಿದುಕೊ).

೧೩. ಎಲೈ ಮಹಾಬಾಹುವೆ, ಎಲ್ಲಾ ಕರ್ಮಗಳ ಸಿದ್ಧಿಗಾಗಿ ಈ ಐದು ಕಾರಣಗಳು ಸಾಂಖ್ಯ-ಕೃತಾಂತದಲ್ಲಿ[1] ಹೇಳಲ್ಪಟ್ಟಿವೆ. (ಅವುಗಳನ್ನು) ನನ್ನಿಂದ ತಿಳಿದುಕೊ.

1 ಅರಿತುಕೊಳ್ಳಬೇಕಾದ ವಸ್ತುಗಳನ್ನು ಯಾವ ಶಾಸ್ತ್ರದಲ್ಲಿ ಹೇಳಿರುತ್ತದೆಯೋ ಅದು ಸಾಂಖ್ಯ ಎಂದರೆ ವೇದಾಂತ. 'ಕೃತಾಂತೇ' ಎಂಬುದು ಅದಕ್ಕೆ ವಿಶೇಷಣ. 'ಕೃತ' ಎಂದರೆ ಕರ್ಮ. ಅದರ ಅಂತವು ಅಥವಾ ಪರಿಸಮಾಪ್ತಿ ಯಾವುದರಲ್ಲಿ ಆಗುವುದೋ ಅದು ಕೃತಾಂತ ಎಂದರೆ ಕರ್ಮದ ಕೊನೆ (ಶ್ರೀಶಂಕರ). ಯಥಾರ್ಥ

ತತ್ತ್ವವೇ ವಿಷಯವಾದ ವೈದಿಕಬುದ್ಧಿಯಿಂದ ವಿಚಾರಪೂರ್ವಕವಾಗಿ ಮಾಡಿದ ನಿರ್ಣಯದಲ್ಲಿ (ಶ್ರೀರಾಮಾನುಜ).

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥ ೧೪ ॥**

ಅಧಿಷ್ಠಾನಂ (ಅಧಿಷ್ಠಾನ) ತಥಾ (ಹಾಗೆಯೇ) ಕರ್ತಾ (ಕರ್ತೃ) ಪೃಥಗ್ವಿಧಂ (ಅನೇಕ ಬಗೆಯಾದ) ಕರಣಂ (ಕರಣ) ವಿವಿಧಾಃ ಚ (ಮತ್ತು ವಿವಿಧವಾದ) ಪೃಥಕ್ಚೇಷ್ಟಾಃ (ಬೇರೆಬೇರೆ ಕಾರ್ಯಗಳು) ಅತ್ರ (ಇವುಗಳ ಮಧ್ಯದಲ್ಲಿ) ದೈವಂ ಏವ ಚ (ದೈವವೇ) ಪಂಚಮಂ (ಐದನೆಯದು).

**೧೪.** ಅಧಿಷ್ಠಾನ[1] ಕರ್ತೃ[2] ಅನೇಕ ಬಗೆಯ ಕರಣ[3] ಮತ್ತು ವಿವಿಧವಾದ ಬೇರೆ ಬೇರೆ ಕಾರ್ಯಗಳು;[4] ಇವುಗಳ ಮಧ್ಯದಲ್ಲಿ ದೈವವು[5] ಐದನೆಯದು.

1 ಶರೀರ.

2 ಉಪಾಧಿಯಿಂದ ಕಂಡುಬರುವ ಭೋಕ್ತೃ (ಶ್ರೀಶಂಕರ). ಜೀವಾತ್ಮ (ಶ್ರೀರಾಮಾನುಜ.

3 ಇಂದ್ರಿಯಗಳು ಮನಸ್ಸು ಮತ್ತು ಬುದ್ಧಿ.

4 ಪ್ರಾಣಾಪಾನಾದಿಪಂಚವಾಯುಗಳ ವ್ಯಾಪಾರ.

5 ಚಕ್ಷುವೇ ಮೊದಲಾದ ಇಂದ್ರಿಯಗಳಿಗೆ ಸಹಾಯವನ್ನು ಮಾಡುವ ಆದಿತ್ಯನೇ ಮೊದಲಾದವರು (ಶ್ರೀಶಂಕರ). ಅಂತರ್ಯಾಮಿಯಾದ ಪರಮಾತ್ಮ (ಶ್ರೀರಾಮಾನುಜ).

**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫ ॥**

ನರಃ (ಮನುಷ್ಯನು) ಶರೀರವಾಙ್ಮನೋಭಿಃ (ಶರೀರ ವಾಕ್ ಮನಸ್ಸು ಇವುಗಳಿಂದ) ಯತ್ (ಯಾವ) ನ್ಯಾಯ್ಯಂ ವಾ (ನ್ಯಾಯವಾದ) ವಿಪರೀತಂ ವಾ (ಅಥವಾ ವಿರುದ್ಧವಾದ) ಕರ್ಮ (ಕರ್ಮವನ್ನು) ಪ್ರಾರಭತೇ (ಪ್ರಾರಂಭಿಸುತ್ತಾನೆಯೋ) ಏತೇ ಪಂಚ (ಈ ಐದು) ತಸ್ಯ (ಅದರ) ಹೇತವಃ (ಕಾರಣಗಳು).

**೧೫.** ಶರೀರ ವಾಕ್ ಮನಸ್ಸು ಇವುಗಳಿಂದ ಮನುಷ್ಯನು ನ್ಯಾಯವಾದ[1] ಅಥವಾ ಅದಕ್ಕೆ ವಿರುದ್ಧವಾದ[2] ಯಾವ ಕರ್ಮವನ್ನು ಪ್ರಾರಂಭಿಸುತ್ತಾನೆಯೋ ಅದಕ್ಕೆ ಈ ಐದು ಕಾರಣಗಳು.

1 ಧರ್ಮದಿಂದ ಕೂಡಿದ ಶಾಸ್ತ್ರೀಯಕರ್ಮ.
2 ಅಧರ್ಮದಿಂದ ಕೂಡಿದ ಅಶಾಸ್ತ್ರೀಯಕರ್ಮ.

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬ ॥**

ತು (ಆದರೆ) ಏವಂ ಸತಿ (ಹೀಗಿರುವಾಗ) ತತ್ರ (ಅಲ್ಲಿ) ಯಃ (ಯಾವನು) ಅಕೃತಬುದ್ಧಿತ್ವಾತ್ (ಅಸಂಸ್ಕೃತಬುದ್ಧಿಯ ಮೂಲಕ) ಕೇವಲಂ (ಕೇವಲನಾದ) ಆತ್ಮಾನಂ (ಆತ್ಮನನ್ನು) ಕರ್ತಾರಂ (ಕರ್ತೃವೆಂದು) ಪಶ್ಯತಿ (ನೋಡುತ್ತಾನೆಯೋ) ಸಃ ದುರ್ಮತಿಃ (ಆ ದುರ್ಮತಿಯು) ನ ಪಶ್ಯತಿ (ನೋಡುವುದಿಲ್ಲ).

೧೬. ಆದರೆ ಅಲ್ಲಿ ಹೀಗಿರುವಾಗ[1] ಯಾವನು ಅಸಂಸ್ಕೃತಬುದ್ಧಿಯ ಮೂಲಕ[2] ಕೇವಲ ಆತ್ಮನನ್ನು ಕರ್ತೃವೆಂದು ತಿಳಿದುಕೊಳ್ಳುತ್ತಾನೆಯೋ ಆ ದುರ್ಮತಿಯು ನೋಡುವುದಿಲ್ಲ.

1 ಸರ್ವಕರ್ಮಗಳಲ್ಲಿಯೂ (ತತ್ರ) ಮೇಲೆ ಹೇಳಿದ ಅಧಿಷ್ಠಾನ ಮೊದಲಾದುವು ಕಾರಣಗಳಾಗಿರುವಾಗ.
2 ವೇದಾಂತೋಪದೇಶ ಆಚಾರ್ಯೋಪದೇಶ ಮತ್ತು ತರ್ಕ — ಇವುಗಳಿಂದ ಸಂಸ್ಕೃತವಾಗದ ಬುದ್ಧಿಯಿಂದ (ಶ್ರೀಶಂಕರ).

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಲ್ಲೋಕಾನ್ನ ಹಂತಿ ನ ನಿಬಧ್ಯತೇ ॥ ೧೭ ॥**

ಯಸ್ಯ (ಯಾವನಿಗೆ) ಅಹಂಕೃತಃ ಭಾವಃ (ನಾನು ಕರ್ತೃ ಎಂಬ ಭಾವವು) ನ (ಇರುವುದಿಲ್ಲವೋ) ಯಸ್ಯ (ಯಾವನ) ಬುದ್ಧಿಃ (ಬುದ್ಧಿಯು) ನ ಲಿಪ್ಯತೇ (ಲಿಪ್ತವಾಗುವುದಿಲ್ಲವೋ) ಸಃ (ಅವನು) ಇಮಾನ್ ಲೋಕಾನ್ (ಈ ಲೋಕಗಳನ್ನು) ಹತ್ವಾ ಅಪಿ (ಕೊಂದರೂ) ನ ಹಂತಿ (ಕೊಲ್ಲುವುದಿಲ್ಲ) ನ ನಿಬಧ್ಯತೇ (ಬಂಧಿಸಲ್ಪಡುವುದಿಲ್ಲ).

೧೭. ಯಾವನಿಗೆ 'ನಾನು ಕರ್ತೃ' ಎಂಬ ಭಾವವಿರುವುದಿಲ್ಲವೋ, ಯಾವನ ಬುದ್ಧಿಯು ಲಿಪ್ತವಾಗುವುದಿಲ್ಲವೋ ಅವನು ಈ ಲೋಕಗಳನ್ನು ಕೊಂದರೂ ಕೊಲ್ಲುವುದಿಲ್ಲ, ಬಂಧಿಸಲ್ಪಡುವುದಿಲ್ಲ.

[ಕರ್ತೃತ್ವಫಲಸಂಬಂಧಗಳು ಇಲ್ಲದಿರುವಾಗ ಈ ಯುದ್ಧದಲ್ಲಿ ಭೀಷ್ಮಾದಿಗಳನ್ನಲ್ಲದೆ ಇತರರನ್ನು ಕೊಂದರೂ ಆ ಯುದ್ಧವೆಂಬ ಕರ್ಮದ ದೆಸೆಯಿಂದ ಉಂಟಾಗುವ ಫಲವನ್ನು (ಅರ್ಜುನನು) ಅನುಭವಿಸುವುದಿಲ್ಲ — ಶ್ರೀರಾಮಾನುಜ.]

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥**

ಜ್ಞಾನಂ (ಜ್ಞಾನ) ಜ್ಞೇಯಂ (ಅರಿಯಲ್ಪಡತಕ್ಕವಸ್ತು, ಜ್ಞೇಯ) ಪರಿಜ್ಞಾತಾ (ಪರಿಜ್ಞಾತೃ) [ಎಂದು] ಕರ್ಮಚೋದನಾ (ಕರ್ಮಪ್ರವರ್ತಕವು) ತ್ರಿವಿಧಾ (ಮೂರು ವಿಧ) ಕರಣಂ (ಕರಣ) ಕರ್ಮ (ಕರ್ಮ) ಕರ್ತಾ (ಕರ್ತೃ) ಇತಿ (ಎಂದು) ಕರ್ಮ-ಸಂಗ್ರಹಃ (ಕರ್ಮಸಂಗ್ರಹವು) ತ್ರಿವಿಧಃ (ಮೂರು ವಿಧ).

**೧೮.** ಜ್ಞಾನ ಜ್ಞೇಯ ಪರಿಜ್ಞಾತೃ ಎಂದು ಕರ್ಮದ ಪ್ರವರ್ತಕವು ಮೂರು ವಿಧ;[1] ಕರಣ[2] ಕರ್ಮ ಕರ್ತೃ[3] ಎಂದು ಕರ್ಮಸಂಗ್ರಹವು[4] ಮೂರು ವಿಧ.

[1] ಜ್ಞಾನ ಜ್ಞೇಯ ಜ್ಞಾತೃ ಈ ಮೂರೂ ಸೇರಿದ ಮೇಲೆ, 'ಬಿಡುವುದು' 'ತೆಗೆದುಕೊಳ್ಳುವುದು' ಮೊದಲಾದ ಪ್ರಯೋಜನವುಳ್ಳ ಯಾವ ಕರ್ಮವನ್ನಾದರೂ ಮಾಡಬಹುದು (ಶ್ರೀಶಂಕರ).

[2] ಶ್ರೋತ್ರವೇ ಮೊದಲಾದ ಇಂದ್ರಿಯಗಳು ಮತ್ತು ಬುದ್ಧಿ (ಶ್ರೀಶಂಕರ).

[3] ಇಂದ್ರಿಯಗಳನ್ನು ಕೆಲಸಮಾಡಿಸುವ ಉಪಾಧಿಲಕ್ಷಣನಾದ ಜೀವ (ಶ್ರೀಶಂಕರ).

[4] ಕರ್ಮದ ಸಂಗ್ರಹ ಕರ್ಮಸಂಗ್ರಹ. ಕರ್ಮವು ಕರಣ-ಕರ್ಮ-ಕರ್ತೃಗಳಲ್ಲಿ ಸೇರಿಕೊಂಡಿರುತ್ತದೆ (ಶ್ರೀಶಂಕರ).

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯ ॥**

ಜ್ಞಾನಂ (ಜ್ಞಾನ) ಕರ್ಮ ಚ (ಕ್ರಿಯೆ) ಕರ್ತಾ ಚ (ಮತ್ತು ಕರ್ತೃ) ಗುಣಭೇದತಃ (ಗುಣಭೇದದಿಂದ) ತ್ರಿಧಾ ಏವ (ಮೂರು ವಿಧವೇ) [ಎಂದು] ಗುಣ-ಸಂಖ್ಯಾನೇ (ಗುಣಸಂಖ್ಯಾನದಲ್ಲಿ) ಪ್ರೋಚ್ಯತೇ (ಹೇಳಲ್ಪಟ್ಟಿವೆ) ತಾನಿ ಅಪಿ (ಅವು-ಗಳನ್ನು) ಯಥಾವತ್ (ಯಥಾರ್ಥವಾಗಿ) ಶೃಣು (ಕೇಳು).

**೧೯.** ಜ್ಞಾನ ಕರ್ಮ ಕರ್ತೃ—ಇವು (ಸತ್ತ್ವಾದಿ) ಗುಣಭೇದದಿಂದ ಮೂರು ವಿಧವೆಂದು ಗುಣಸಂಖ್ಯಾನದಲ್ಲಿ[1] ಹೇಳಲ್ಪಟ್ಟಿವೆ. ಅವುಗಳನ್ನು ಯಥಾವತ್ತಾಗಿ ಕೇಳು.

[1] ಕಾಪಿಲಶಾಸ್ತ್ರದಲ್ಲಿ (ಶ್ರೀಶಂಕರ). (ಸತ್ತ್ವಾದಿ) ಗುಣಗಳ ಕಾರ್ಯದ ಗಣನೆಯಲ್ಲಿ (ಶ್ರೀರಾಮಾನುಜ).

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ ೨೦ ॥**

ಯೇನ (ಯಾವುದರಿಂದ) ವಿಭಕ್ತೇಷು (ವಿಭಿನ್ನವಾದ) ಸರ್ವಭೂತೇಷು (ಸರ್ವಭೂತಗಳಲ್ಲಿ) ಅವಿಭಕ್ತಂ (ಅಭಿನ್ನವಾದ) ಅವ್ಯಯಂ (ಅವ್ಯಯವಾದ) ಏಕಂ (ಒಂದೇ) ಭಾವಂ (ಭಾವವನ್ನು) ಈಕ್ಷತೇ (ನೋಡುತ್ತಾನೆಯೋ) ತತ್ ಜ್ಞಾನಂ (ಆ ಜ್ಞಾನವನ್ನು) ಸಾತ್ತ್ವಿಕಂ (ಸಾತ್ತ್ವಿಕವೆಂದು) ವಿದ್ಧಿ (ತಿಳಿ).

೨೦. ವಿಭಿನ್ನವಾದ ಸರ್ವಭೂತಗಳಲ್ಲಿಯೂ ಅಭಿನ್ನವೂ ಅವ್ಯಯವೂ ಆದ ಒಂದೇ ಭಾವವನ್ನು[1] ಯಾವುದರಿಂದ ನೋಡುತ್ತಾನೆಯೋ ಆ ಜ್ಞಾನವನ್ನು ಸಾತ್ತ್ವಿಕವೆಂದು ತಿಳಿದುಕೊ.

[1] ಆತ್ಮವಸ್ತು.

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥ ೨೧ ॥**

ತು (ಆದರೆ) ಯತ್ (ಯಾವ) ಜ್ಞಾನಂ (ಜ್ಞಾನವು) ಸರ್ವೇಷು ಭೂತೇಷು (ಸಮಸ್ತಪ್ರಾಣಿಗಳಲ್ಲಿಯೂ) ಪೃಥಗ್ವಿಧಾನ್ (ಭಿನ್ನಲಕ್ಷಣವುಳ್ಳ) ನಾನಾಭಾವಾನ್ (ನಾನಾ ಆತ್ಮಗಳನ್ನು) ಪೃಥಕ್ತ್ವೇನ (ಬೇರೆಯಾಗಿಯೇ) ವೇತ್ತಿ (ತಿಳಿಯುತ್ತದೆಯೋ) ತತ್ (ಆ) ಜ್ಞಾನಂ (ಜ್ಞಾನವನ್ನು) ರಾಜಸಂ (ರಾಜಸವೆಂದು) ವಿದ್ಧಿ (ತಿಳಿ).

೨೧. ಯಾವ ಜ್ಞಾನವು ಸಮಸ್ತಪ್ರಾಣಿಗಳಲ್ಲಿಯೂ ಭಿನ್ನಲಕ್ಷಣವುಳ್ಳ ನಾನಾ ಆತ್ಮಗಳನ್ನು ಬೇರೆಯಾಗಿಯೇ[1] ತಿಳಿಯುತ್ತದೆಯೋ ಆ ಜ್ಞಾನವನ್ನು ರಾಜಸವೆಂದು ತಿಳಿ.

[1] ಪ್ರತಿಶರೀರದಲ್ಲಿಯೂ ಆತ್ಮನು ಭಿನ್ನಭಿನ್ನನಾಗಿರುವನೆಂದು.

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ ೨೨ ॥**

ತು (ಆದರೆ) ಯತ್ (ಯಾವ ಜ್ಞಾನವು) ಏಕಸ್ಮಿನ್ ಕಾರ್ಯೇ (ಯಾವುದೋ ಒಂದು ಕಾರ್ಯದಲ್ಲಿ) ಕೃತ್ಸ್ನವತ್ (ಪರಿಪೂರ್ಣವಾಗಿರುವಂತೆ) ಸಕ್ತಂ (ಆಸಕ್ತವಾಗಿರುವುದೋ) ಅಹೈತುಕಂ (ಹೇತುಶೂನ್ಯವೋ) ಅತತ್ತ್ವಾರ್ಥವತ್ (ಯಥಾಭೂತವಾದ ಅರ್ಥವಿಲ್ಲದುದೋ) ಅಲ್ಪಂ ಚ (ತುಚ್ಛವೋ) ತತ್ (ಅದು) ತಾಮಸಂ (ತಾಮಸವೆಂದು) ಉದಾಹೃತಂ (ಹೇಳಲ್ಪಟ್ಟಿದೆ).

೨೨. ಆದರೆ ಯಾವ (ಜ್ಞಾನವು) ಒಂದೇ ಕಾರ್ಯದಲ್ಲಿ[1] ಪರಿಪೂರ್ಣವಾಗಿರುವಂತೆ ಆಸಕ್ತವಾಗಿರುವುದೋ, ಹೇತುಶೂನ್ಯವೋ, ಯಥಾಭೂತವಾದ ಅರ್ಥವಿಲ್ಲದುದೋ ತುಚ್ಛವೋ[2] ಅದು ತಾಮಸವೆಂದು ಹೇಳಲ್ಪಟ್ಟಿದೆ.

[1] ದೇಹದಲ್ಲಿ ಅಥವಾ ಪ್ರತಿಮಾದಿಗಳಲ್ಲಿ 'ಈ ಆತ್ಮನು ಅಥವಾ ಈಶ್ವರನು ಇಷ್ಟು ಮಾತ್ರವೇ, ಇದಕ್ಕಿಂತ ಬೇರೆ ಯಾವುದೂ ಇಲ್ಲ' ಎಂದು ಆಸಕ್ತವಾಗಿರುವುದು (ಶ್ರೀಶಂಕರ).

[2] ಅಲ್ಪವಿಷಯವುಳ್ಳದ್ದರಿಂದ ಅಥವಾ ಅಲ್ಪಫಲವುಳ್ಳದ್ದರಿಂದ (ಶ್ರೀಶಂಕರ).

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ೨೩ ॥**

ನಿಯತಂ (ನಿತ್ಯವಾದ) ಸಂಗರಹಿತಂ (ಆಸಕ್ತಿರಹಿತವಾದ) ಅಫಲಪ್ರೇಪ್ಸುನಾ (ಫಲಾಪೇಕ್ಷೆಯಿಲ್ಲದವನಿಂದ) ಅರಾಗದ್ವೇಷತಃ ಕೃತಂ (ರಾಗದ್ವೇಷಗಳಿಲ್ಲದೆ ಮಾಡಲ್ಪಟ್ಟ) ಯತ್ ಕರ್ಮ (ಯಾವ ಕರ್ಮವಿದೆಯೋ) ತತ್ (ಅದು) ಸಾತ್ತ್ವಿಕಂ (ಸಾತ್ತ್ವಿಕವು) [ಎಂದು] ಉಚ್ಯತೇ (ಹೇಳಲ್ಪಡುತ್ತದೆ).

೨೩. ನಿತ್ಯವಾದ ಸಂಗರಹಿತವಾದ ಫಲಾಪೇಕ್ಷೆಯಿಲ್ಲದವನಿಂದ ರಾಗ ದ್ವೇಷಗಳಿಲ್ಲದೆ ಮಾಡಲ್ಪಟ್ಟ ಯಾವ ಕರ್ಮವಿದೆಯೋ ಅದು ಸಾತ್ತ್ವಿಕವೆಂದು ಹೇಳಲ್ಪಡುತ್ತದೆ.

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ ೨೪ ॥**

ತು ಪುನಃ (ಆದರೆ) ಕಾಮೇಪ್ಸುನಾ (ಫಲಾಪೇಕ್ಷೆಯುಳ್ಳವನಿಂದ) ಸಾಹಂ-ಕಾರೇಣ ವಾ (ಅಥವಾ ಅಹಂಕಾರವುಳ್ಳವನಿಂದ) ಬಹುಲಾಯಾಸಂ (ಬಹು ಆಯಾಸ ದಿಂದ ಕೂಡಿರುವ) ಯತ್ (ಯಾವ) ಕರ್ಮ (ಕರ್ಮವು) ಕ್ರಿಯತೇ (ಮಾಡಲ್ಪಡು ತ್ತದೆಯೋ) ತತ್ (ಅದು) ರಾಜಸಂ (ರಾಜಸವೆಂದು) ಉದಾಹೃತಂ (ಹೇಳಲ್ಪಟ್ಟಿದೆ).

೨೪. ಆದರೆ ಫಲಾಕಾಂಕ್ಷೆಯುಳ್ಳವನು ಅಥವಾ ಅಹಂಕಾರಿಯು ಬಹು ಆಯಾಸದಿಂದ ಕೂಡಿರುವ ಯಾವ ಕರ್ಮವನ್ನು ಮಾಡುತ್ತಾನೆಯೋ ಅದು ರಾಜಸವೆಂದು ಹೇಳಲ್ಪಟ್ಟಿದೆ.

**ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ ೨೫ ॥**

ಅನುಬಂಧಂ (ಅನುಬಂಧವನ್ನೂ) ಕ್ಷಯಂ (ಕ್ಷಯುವನ್ನೂ) ಹಿಂಸಾಂ (ಹಿಂಸೆ ಯನ್ನೂ) ಪೌರುಷಂ ಚ (ಮತ್ತು ಪೌರುಷವನ್ನೂ) ಅನಪೇಕ್ಷ್ಯ (ವಿಚಾರಿಸದೆ) ಯತ್ (ಯಾವ) ಕರ್ಮ (ಕರ್ಮವು) ಮೋಹಾತ್ (ಮೋಹದಿಂದ) ಆರಭ್ಯತೇ

(ಆರಂಭಿಸಲ್ಪಡುತ್ತದೆಯೋ) ತತ್ (ಅದು) ತಾಮಸಂ (ತಾಮಸವೆಂದು) ಉಚ್ಯತೇ (ಹೇಳಲ್ಪಡುತ್ತದೆ).

**೨೫.** ಅನುಬಂಧವನ್ನೂ[1] ಕ್ಷಯವನ್ನೂ[2] ಹಿಂಸೆಯನ್ನೂ ಪೌರುಷವನ್ನೂ[3] ವಿಚಾರಿಸದೆ ಯಾವ ಕರ್ಮವು ಮೋಹದಿಂದ ಪ್ರಾರಂಭಿಸಲ್ಪಡುತ್ತದೆಯೋ ಅದು ತಾಮಸವೆಂದು ಹೇಳಲ್ಪಡುತ್ತದೆ.

1 ಮುಂದೆ ಉಂಟಾಗುವ ಶುಭಾಶುಭಫಲಗಳು.
2 ಶಕ್ತಿಕ್ಷಯ ಅಥವಾ ಹಣದ ಕ್ಷಯ.
3 ತನ್ನ ಸಾಮರ್ಥ್ಯವನ್ನು.

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬ ॥**

ಮುಕ್ತಸಂಗಃ (ಫಲಸಂಗರಹಿತನೂ) ಅನಹಂವಾದೀ (ಅಹಂಕಾರವಿಲ್ಲದವನೂ) ಧೃತ್ಯುತ್ಸಾಹ-ಸಮನ್ವಿತಃ (ಧೃತಿ ಉತ್ಸಾಹ ಇವುಗಳಿಂದ ಕೂಡಿದವನೂ) ಸಿದ್ಧ್ಯಸಿ-ದ್ಧ್ಯೋಃ (ಸಿದ್ಧಿ ಅಸಿದ್ಧಿ ಇವುಗಳಲ್ಲಿ) ನಿರ್ವಿಕಾರಃ (ನಿರ್ವಿಕಾರನೂ) [ಆದ] ಕರ್ತಾ (ಕರ್ತೃವು) ಸಾತ್ತ್ವಿಕಃ (ಸಾತ್ತ್ವಿಕನು) [ಎಂದು] ಉಚ್ಯತೇ (ಹೇಳಲ್ಪಡುತ್ತಾನೆ).

**೨೬.** ಫಲಸಂಗರಹಿತನೂ ಅನಹಂಕಾರಿಯೂ[1] ಧೃತ್ಯುತ್ಸಾಹಗಳಿಂದ ಕೂಡಿದವನೂ ಸಿದ್ಧಿ ಅಸಿದ್ಧಿ ಇವುಗಳಲ್ಲಿ ನಿರ್ವಿಕಾರನೂ ಆದ ಕರ್ತೃವು ಸಾತ್ತ್ವಿಕನು ಎಂದು ಹೇಳಲ್ಪಡುತ್ತಾನೆ.

1 'ನಾನು' ಎಂಬ ಅಭಿಮಾನವಿಲ್ಲದವನು.

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭ ॥**

ರಾಗೀ (ರಾಗವುಳ್ಳವನೂ) ಕರ್ಮಫಲಪ್ರೇಪ್ಸುಃ (ಕರ್ಮಫಲಾಕಾಂಕ್ಷಿಯೂ) ಲುಬ್ಧಃ (ಲೋಭಿಯೂ) ಹಿಂಸಾತ್ಮಕಃ (ಹಿಂಸಾಸ್ವಭಾವವುಳ್ಳವನೂ) ಅಶುಚಿಃ (ಅಶುಚಿಯೂ) ಹರ್ಷಶೋಕಾನ್ವಿತಃ (ಹರ್ಷಶೋಕಗಳಿಂದ ಕೂಡಿದವನೂ ಆದ) ಕರ್ತಾ (ಕರ್ತೃವು) ರಾಜಸಃ (ರಾಜಸಿಕನು) [ಎಂದು] ಪರಿಕೀರ್ತಿತಃ (ಹೇಳಲ್ಪಟ್ಟಿರುತ್ತಾನೆ).

**೨೭.** ರಾಗವುಳ್ಳವನೂ ಕರ್ಮಫಲಾಕಾಂಕ್ಷಿಯೂ ಲೋಭಿಯೂ ಹಿಂಸಾಸ್ವಭಾವವುಳ್ಳವನೂ ಅಶುಚಿಯೂ ಹರ್ಷಶೋಕಗಳಿಂದ ಕೂಡಿದವನೂ ಆದ ಕರ್ತೃವು ರಾಜಸಿಕನು ಎಂದು ಹೇಳಲ್ಪಟ್ಟಿರುತ್ತಾನೆ.

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥**

ಅಯುಕ್ತಃ (ಅಯುಕ್ತನೂ) ಪ್ರಾಕೃತಃ (ಪ್ರಾಕೃತನೂ) ಸ್ತಬ್ಧಃ (ಸ್ತಬ್ಧನೂ) ಶಠಃ (ಶಠನೂ) ನೈಷ್ಕೃತಿಕಃ (ನೈಷ್ಕೃತಿಕನೂ) ಅಲಸಃ (ಅಲಸನೂ) ವಿಷಾದೀ (ವಿಷಾದವುಳ್ಳವನೂ) ದೀರ್ಘಸೂತ್ರೀ ಚ (ಮತ್ತು ದೀರ್ಘಸೂತ್ರಿಯೂ) [ಆದ] ಕರ್ತಾ (ಕರ್ತೃವು) ತಾಮಸಃ (ತಾಮಸಿಕನು) [ಎಂದು] ಉಚ್ಯತೇ (ಹೇಳಲ್ಪಡುತ್ತಾನೆ).

೨೮. ಅಯುಕ್ತನೂ[1] ಪ್ರಾಕೃತನೂ[3] ಸ್ತಬ್ಧನೂ[3] ಶಠನೂ[4] ನೈಷ್ಕೃತಿಕನೂ[5] ಅಲಸನೂ[6] ವಿಷಾದವುಳ್ಳವನೂ ಮತ್ತು ದೀರ್ಘಸೂತ್ರಿಯೂ[7] ಆದ ಕರ್ತೃವು ತಾಮಸಿಕನೆಂದು ಹೇಳಲ್ಪಡುತ್ತಾನೆ.

1 ಸಮಾಹಿತಚಿತ್ತವಿಲ್ಲದವನು (ಶ್ರೀಶಂಕರ). ಶಾಸ್ತ್ರೀಯಕರ್ಮಕ್ಕೆ ಯೋಗ್ಯನಲ್ಲದವನು (ಶ್ರೀರಾಮಾನುಜ).

2 ಅತ್ಯಂತ ಅಸಂಸ್ಕೃತಬುದ್ಧಿಯುಳ್ಳವನು (ಶ್ರೀಶಂಕರ). ಶಾಸ್ತ್ರಜ್ಞಾನವನ್ನು ಹೊಂದದೆ ಇರುವವನು (ಶ್ರೀರಾಮಾನುಜ).

3 ಯಾರಿಗೂ ದಂಡವತ್ ಪ್ರಣಾಮವನ್ನು ಮಾಡದವನು (ಶ್ರೀಶಂಕರ). ಕಾರ್ಯವನ್ನು ಪ್ರಾರಂಭಿಸದೆ ಇರುವ ಸ್ವಭಾವವುಳ್ಳವನು (ಶ್ರೀರಾಮಾನುಜ).

4 ಮಾಯಾವಿ (ಶ್ರೀಶಂಕರ).

5 ಇನ್ನೊಬ್ಬರ ವೃತ್ತಿಯನ್ನು ನಾಶಮಾಡುವವನು (ಶ್ರೀಶಂಕರ). ವಂಚನಪರನು (ಶ್ರೀರಾಮಾನುಜ).

6 ಕರ್ತವ್ಯದಲ್ಲಿ ಪ್ರವೃತ್ತಿಯಿಲ್ಲದವನು (ಶ್ರೀಶಂಕರ). ಪ್ರಾರಂಭಿಸಿದ ಕರ್ಮದಲ್ಲಿ ಮಂದಪ್ರವೃತ್ತಿಯುಳ್ಳವನು (ಶ್ರೀರಾಮಾನುಜ).

7 ಯಾವಾಗಲೂ ಮಂದಸ್ವಭಾವವುಳ್ಳವನು (ಶ್ರೀಶಂಕರ).

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥**

ಧನಂಜಯ (ಎಲೈ ಅರ್ಜುನನೆ) ಪೃಥಕ್ತ್ವೇನ (ಬೇರೆಬೇರೆಯಾಗಿ) ಅಶೇಷೇಣ (ಸಂಪೂರ್ಣವಾಗಿ) ಪ್ರೋಚ್ಯಮಾನಂ (ಹೇಳಲ್ಪಡುವುದನ್ನು) ಬುದ್ಧೇಃ (ಬುದ್ಧಿಯ) ಧೃತೇಃ ಚ (ಧೃತಿಯ) ಗುಣತಃ ಏವ (ಗುಣದಿಂದಲೇ) ತ್ರಿವಿಧಂ (ಮೂರು ವಿಧವಾದ) ಭೇದಂ (ಭೇದವನ್ನು) ಶೃಣು (ಕೇಳು).

೨೯. ಎಲೈ ಅರ್ಜುನ, ಬುದ್ಧಿಯ ಮತ್ತು ಧೃತಿಯ ಭೇದವು ಗುಣ

ದಿಂದಲೇ ಮೂರು ವಿಧವಾಗಿದೆ; (ಅದನ್ನು) ಸಂಪೂರ್ಣವಾಗಿ ಬೇರೆಬೇರೆಯಾಗಿ ಹೇಳುತ್ತೇನೆ, ಕೇಳು.

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ**
**ಪಾರ್ಥ ಸಾತ್ತ್ವಿಕೀ ॥ ೩೦ ॥**

ಪಾರ್ಥ (ಎಲೈ ಅರ್ಜುನನೆ) ಪ್ರವೃತ್ತಿಂ ಚ (ಪ್ರವೃತ್ತಿಯನ್ನೂ) ನಿವೃತ್ತಿಂ ಚ (ನಿವೃತ್ತಿಯನ್ನೂ) ಕಾರ್ಯಾಕಾರ್ಯೇ (ಕಾರ್ಯಾಕಾರ್ಯಗಳನ್ನೂ) ಭಯಾಭಯೇ (ಭಯಾಭಯಗಳನ್ನೂ) ಬಂಧಂ (ಬಂಧವನ್ನೂ) ಮೋಕ್ಷಂ ಚ (ಮೋಕ್ಷವನ್ನೂ) ಯಾ (ಯಾವುದು) ವೇತ್ತಿ (ತಿಳಿಯುವುದೋ) ಸಾ ಬುದ್ಧಿಃ (ಆ ಬುದ್ಧಿಯು) ಸಾತ್ತ್ವಿಕೀ (ಸಾತ್ತ್ವಿಕವು).

**೩೦.** ಎಲೈ ಅರ್ಜುನ, ಪ್ರವೃತ್ತಿನಿವೃತ್ತಿಗಳನ್ನೂ[1] ಕಾರ್ಯಾಕಾರ್ಯಗಳನ್ನೂ ಭಯಾಭಯಗಳನ್ನೂ ಬಂಧಮೋಕ್ಷಗಳನ್ನೂ ಯಾವುದು ತಿಳಿಯುವುದೋ ಆ ಬುದ್ಧಿಯು ಸಾತ್ತ್ವಿಕವು.

[1] ಶಾಸ್ತ್ರವಿಹಿತವಾದ ಕರ್ಮಮಾರ್ಗ ಮತ್ತು ಮೋಕ್ಷಹೇತುವಾದ ಸಂನ್ಯಾಸಮಾರ್ಗ (ಶ್ರೀಶಂಕರ).

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧ ॥**

ಪಾರ್ಥ (ಎಲೈ ಅರ್ಜುನನೆ) ಯಯಾ (ಯಾವುದರಿಂದ) ಧರ್ಮಂ (ಧರ್ಮವನ್ನೂ) ಅಧರ್ಮಂ ಚ (ಮತ್ತು ಅಧರ್ಮವನ್ನೂ) ಕಾರ್ಯಂ ಚ (ಕಾರ್ಯವನ್ನೂ) ಅಕಾರ್ಯಂ ಏವ ಚ (ಮತ್ತು ಅಕಾರ್ಯವನ್ನೂ) ಅಯಥಾವತ್ (ಅಯಥಾರ್ಥವಾಗಿ) ಪ್ರಜಾನಾತಿ (ತಿಳಿಯುವನೋ) ಸಾ ಬುದ್ಧಿಃ (ಆ ಬುದ್ಧಿಯು) ರಾಜಸೀ (ರಾಜಸಿಕವು).

**೩೧.** ಎಲೈ ಅರ್ಜುನ, ಧರ್ಮಾಧರ್ಮಗಳನ್ನೂ ಕಾರ್ಯಾಕಾರ್ಯಗಳನ್ನೂ ಯಾವುದರಿಂದ ಯಥಾರ್ಥವಾಗಿ ತಿಳಿಯುವುದಿಲ್ಲವೋ ಆ ಬುದ್ಧಿಯು ರಾಜಸಿಕವು.

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ**
**ಪಾರ್ಥ ತಾಮಸೀ ॥ ೩೨ ॥**

ಪಾರ್ಥ (ಎಲೈ ಅರ್ಜುನನೆ) ಯಾ (ಯಾವುದು) ತಮಸಾವೃತಾ (ತಮಸ್ಸಿನಿಂದ ಆವೃತವಾಗಿ) ಅಧರ್ಮಂ (ಅಧರ್ಮವನ್ನು) ಧರ್ಮಂ ಇತಿ (ಧರ್ಮವೆಂದು) ಮನ್ಯತೇ (ತಿಳಿಯುತ್ತದೆಯೋ) ಸರ್ವಾರ್ಥಾನ್ (ಸರ್ವಾರ್ಥಗಳನ್ನೂ) ವಿಪರೀತಾನ್ ಚ (ವಿಪರೀತವಾಗಿಯೂ) [ತಿಳಿಯುತ್ತದೆಯೋ] ಸಾ ಬುದ್ಧಿಃ (ಆ ಬುದ್ಧಿಯು) ತಾಮಸೀ (ತಾಮಸಿಕವು).

೩೨. ಎಲೈ ಅರ್ಜುನ, ಯಾವುದು ತಮಸ್ಸಿನಿಂದ ಆವೃತವಾಗಿ ಅಧರ್ಮವನ್ನು ಧರ್ಮವೆಂದು ತಿಳಿಯುವುದೋ, ಸರ್ವಾರ್ಥಗಳನ್ನೂ[1] ವಿಪರೀತವಾಗಿ ತಿಳಿಯುತ್ತದೆಯೋ ಆ ಬುದ್ಧಿಯು ತಾಮಸಿಕವು.

1 ತಿಳಿಯಲ್ಪಡತಕ್ಕ ಸಮಸ್ತವಸ್ತುಗಳನ್ನೂ (ಶ್ರೀಶಂಕರ).

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩ ॥**

ಪಾರ್ಥ (ಎಲೈ ಅರ್ಜುನನೆ) ಯೋಗೇನ (ಯೋಗದ ಮೂಲಕ) ಯಯಾ (ಯಾವ) ಅವ್ಯಭಿಚಾರಿಣ್ಯಾ (ಅವ್ಯಭಿಚಾರಿಯಾದ) ಧೃತ್ಯಾ (ಧೃತಿಯಿಂದ) ಮನಃ-ಪ್ರಾಣೇಂದ್ರಿಯಕ್ರಿಯಾಃ (ಮನಃಪ್ರಾಣೇಂದ್ರಿಯಕ್ರಿಯೆಗಳನ್ನು) ಧಾರಯತೇ (ಹಿಡಿಯುತ್ತಾನೆಯೋ) ಸಾ ಧೃತಿಃ (ಆ ಧೃತಿಯು) ಸಾತ್ತ್ವಿಕೀ (ಸಾತ್ತ್ವಿಕವು).

೩೩. ಎಲೈ ಅರ್ಜುನ, (ಪುರುಷನು) ಯೋಗದ ಮೂಲಕ ಯಾವ ಅವ್ಯಭಿಚಾರಿಯಾದ[1] ಧೃತಿಯಿಂದ ಮನಸ್ಸು ಪ್ರಾಣ ಇಂದ್ರಿಯಗಳು— ಇವುಗಳ ಕ್ರಿಯೆಗಳನ್ನು ಹಿಡಿಯುತ್ತಾನೆಯೋ ಆ ಧೃತಿಯು ಸಾತ್ತ್ವಿಕವು.

1 ಬೇರೆ ಯಾವ ವಿಷಯದಲ್ಲೂ ಸಕ್ತವಾಗದ.

**ಯಯಾ ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ ೩೪ ॥**

ತು (ಆದರೆ) ಪಾರ್ಥ (ಎಲೈ ಅರ್ಜುನನೆ) ಫಲಾಕಾಂಕ್ಷೀ (ಫಲಾಕಾಂಕ್ಷಿಯು) ಪ್ರಸಂಗೇನ (ಅತ್ಯಂತ ಸಂಗದ ಮೂಲಕ) ಯಯಾ ಧೃತ್ಯಾ (ಯಾವ ಧೃತಿಯಿಂದ) ಧರ್ಮಕಾಮಾರ್ಥಾನ್ (ಧರ್ಮಾರ್ಥಕಾಮಗಳನ್ನು) ಧಾರಯತೇ (ಹಿಡಿಯುತ್ತಾನೆಯೋ) ಸಾ ಧೃತಿಃ (ಆ ಧೃತಿಯು) ರಾಜಸೀ (ರಾಜಸಿಕವು).

೩೪. ಎಲೈ ಅರ್ಜುನ, ಫಲಾಕಾಂಕ್ಷಿಯು ಅತ್ಯಂತ ಸಂಗದ ಮೂಲಕ ಯಾವ ಧೃತಿಯಿಂದ ಧರ್ಮಾರ್ಥಕಾಮಗಳನ್ನು ಹಿಡಿಯುತ್ತಾನೆಯೋ ಆ ಧೃತಿಯು ರಾಜಸಿಕವು.

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥ ೩೫ ॥**

ಪಾರ್ಥ (ಎಲೈ ಅರ್ಜುನನೆ) ದುರ್ಮೇಧಾಃ (ದುರ್ಬುದ್ಧಿಯುಳ್ಳ ಮನುಷ್ಯನು) ಯಯಾ (ಯಾವುದರಿಂದ) ಸ್ವಪ್ನಂ (ನಿದ್ರೆಯನ್ನೂ) ಭಯಂ (ಭಯವನ್ನೂ) ಶೋಕಂ (ಶೋಕವನ್ನೂ) ವಿಷಾದಂ (ವಿಷಾದವನ್ನೂ) ಮದಂ ಏವಂ ಚ (ಮತ್ತು ಮದ ವನ್ನೂ) ನ ವಿಮುಂಚತಿ (ಬಿಡುವುದಿಲ್ಲವೋ) ಸಾ ಧೃತಿಃ (ಆ ಧೃತಿಯು) ತಾಮಸೀ (ತಾಮಸಿಕವು).

**೩೫.** ಎಲೈ ಅರ್ಜುನ, ದುರ್ಬುದ್ಧಿಯುಳ್ಳವನು ಯಾವ (ಧೃತಿಯಿಂದ) ನಿದ್ರೆ ಭಯ ಶೋಕ ವಿಷಾದ ಮದ— ಇವುಗಳನ್ನು ಬಿಡುವುದಿಲ್ಲವೋ ಆ ಧೃತಿಯು ತಾಮಸಿಕವು.

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ ೩೬ ॥**
**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ॥ ೩೭ ॥**

ಭರತರ್ಷಭ (ಎಲೈ ಭರತಶ್ರೇಷ್ಠನೆ) ಇದಾನೀಂ ತು (ಈಗ) ತ್ರಿವಿಧಂ (ಮೂರು ವಿಧವಾದ) ಸುಖಂ (ಸುಖವನ್ನು) ಮೇ (ನನ್ನಿಂದ) ಶೃಣು (ಕೇಳು) ಯತ್ರ (ಯಾವುದ ರಲ್ಲಿ) ಅಭ್ಯಾಸಾತ್ (ಅಭ್ಯಾಸದಿಂದ) [ಮನುಷ್ಯನು] ರಮತೇ (ರಮಿಸುತ್ತಾನೆಯೋ) ದುಃಖಾಂತಂ ಚ (ದುಃಖದ ಅವಸಾನವನ್ನು) ನಿಗಚ್ಛತಿ (ಹೊಂದುತ್ತಾನೆಯೋ) ಯತ್ ತತ್ (ಯಾವ ಸುಖವು) ಅಗ್ರೇ (ಮೊದಲು) ವಿಷಂ ಇವ (ವಿಷದಂತೆಯೂ) ಪರಿಣಾಮೇ (ಕೊನೆಯಲ್ಲಿ) ಅಮೃತೋಪಮಂ (ಅಮೃತಸದೃಶವಾಗಿಯೂ) [ಇರು ವುದೋ] ಆತ್ಮಬುದ್ಧಿಪ್ರಸಾದಜಂ (ಆತ್ಮಬುದ್ಧಿಯ ಪ್ರಸಾದದಿಂದ ಉಂಟಾದ) ತತ್ (ಆ) ಸುಖಂ (ಸುಖವು) ಸಾತ್ತ್ವಿಕಂ (ಸಾತ್ತ್ವಿಕವು) [ಎಂದು] ಪ್ರೋಕ್ತಂ (ಹೇಳ ಲ್ಪಟ್ಟಿದೆ).

**೩೬-೩೭.** ಎಲೈ ಭರತಶ್ರೇಷ್ಠನೆ, ಈಗ ಮೂರು ವಿಧವಾದ ಸುಖ ವನ್ನು ನನ್ನಿಂದ ಕೇಳು: (ಮನುಷ್ಯನು) ದೀರ್ಘಾಭ್ಯಾಸದ ಮೂಲಕ ಯಾವ ಸುಖದಲ್ಲಿ ರಮಿಸುತ್ತಾನೆಯೋ ಮತ್ತು ದುಃಖದ ಅವಸಾನವನ್ನು ಹೊಂದು ತ್ತಾನೆಯೋ, ಯಾವ ಸುಖವು ಮೊದಲು[1] ವಿಷದಂತೆಯೂ ಕೊನೆಯಲ್ಲಿ ಅಮೃತಸದೃಶವಾಗಿಯೂ ಇರುವುದೋ— ಆತ್ಮಬುದ್ಧಿಯ[2] ಪ್ರಸಾದದಿಂದ ಉಂಟಾದ— ಆ ಸುಖವು ಸಾತ್ತ್ವಿಕವೆಂದು ಹೇಳಲ್ಪಟ್ಟಿದೆ.

1 ಯೋಗಾಭ್ಯಾಸದ ಪ್ರಾರಂಭದಲ್ಲಿ.
2 ಆತ್ಮವಿಷಯವಾದ ಬುದ್ಧಿಯು.

**ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ ೩೮ ॥**

ವಿಷಯೇಂದ್ರಿಯ-ಸಂಯೋಗಾತ್ (ವಿಷಯೇಂದ್ರಿಯಗಳ ಸಂಯೋಗದಿಂದ) ಯತ್ ತತ್ (ಯಾವ ಸುಖವು) ಅಗ್ರೇ (ಮೊದಲು) ಅಮೃತೋಪಮಂ (ಅಮೃತ ಸದೃಶವಾಗಿಯೂ) ಪರಿಣಾಮೇ (ಕೊನೆಯಲ್ಲಿ) ವಿಷಂ ಇವ (ವಿಷದಂತೆಯೂ) [ಇರುವುದೋ] ತತ್ (ಆ) ಸುಖಂ (ಸುಖವು) ರಾಜಸಂ (ರಾಜಸಿಕವು) [ಎಂದು] ಸ್ಮೃತಂ (ಹೇಳಲ್ಪಟ್ಟಿದೆ).

೩೮. ವಿಷಯೇಂದ್ರಿಯಗಳ ಸಂಯೋಗದಿಂದ ಯಾವ ಸುಖವು ಮೊದಲು[1] ಅಮೃತಸದೃಶವಾಗಿಯೂ ಕೊನೆಯಲ್ಲಿ ವಿಷದಂತೆಯೂ[2] ಇರುವುದೋ ಆ ಸುಖವು ರಾಜಸಿಕವು (ಎಂದು) ಹೇಳಲ್ಪಟ್ಟಿದೆ.

1 ಅನುಭವಕಾಲದಲ್ಲಿ.
2 ಬಲ ವೀರ್ಯ ರೂಪ ಪ್ರಜ್ಞೆ ಮೇಧಸ್ಸು ಧನ ಉತ್ಸಾಹ ಇವುಗಳು ನಾಶವಾಗುವುದಕ್ಕೆ ಕಾರಣವಾಗಿರುವುದರಿಂದ (ಶ್ರೀಶಂಕರ).

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ ೩೯ ॥**

ಯತ್ (ಯಾವ) ಸುಖಂ (ಸುಖವು) ಅಗ್ರೇ ಚ (ಮೊದಲಲ್ಲಿ) ಅನುಬಂಧೇ ಚ (ಮತ್ತು ಕೊನೆಯಲ್ಲಿ) ಆತ್ಮನಃ (ತನಗೆ) ಮೋಹನಂ (ಮೋಹಕವೋ) ನಿದ್ರಾಲಸ್ಯ-ಪ್ರಮಾದೋತ್ಥಂ (ನಿದ್ರಾಲಸ್ಯಪ್ರಮಾದಗಳಿಂದುಂಟಾದ) ತತ್ (ಆ ಸುಖವು) ತಾಮಸಂ (ತಾಮಸವು) [ಎಂದು] ಉದಾಹೃತಂ (ಹೇಳಲ್ಪಟ್ಟಿದೆ).

೩೯. ಯಾವ ಸುಖವು ಮೊದಲಲ್ಲಿ ಮತ್ತು ಕೊನೆಯಲ್ಲಿ ತನಗೆ ಮೋಹಕವಾಗಿರುವುದೋ[1] ನಿದ್ರೆ ಆಲಸ್ಯ ಪ್ರಮಾದ ಇವುಗಳಿಂದ ಉಂಟಾದ ಆ ಸುಖವು ತಾಮಸವೆಂದು ಹೇಳಲ್ಪಟ್ಟಿದೆ.

1 ಇಲ್ಲಿ ಮೋಹವೆಂದರೆ ಯಥಾರ್ಥವಸ್ತುವಿನ ಅಪ್ರಕಾಶ (ಶ್ರೀರಾಮಾನುಜ).

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦ ॥**

ಯತ್ ಸತ್ತ್ವಂ (ಯಾವ ಪ್ರಾಣಿಸಮೂಹವು) ಏಭಿಃ (ಈ) ತ್ರಿಭಿಃ (ಮೂರು) ಪ್ರಕೃತಿಜೈಃ (ಪ್ರಕೃತಿಯಿಂದ ಹುಟ್ಟಿದ) ಗುಣೈಃ (ಗುಣಗಳಿಂದ) ಮುಕ್ತಂ ಸ್ಯಾತ್ (ಮುಕ್ತವಾಗಿದೆಯೋ) ತತ್ (ಅದು) ಪೃಥಿವ್ಯಾಂ ವಾ (ಪೃಥಿವಿಯಲ್ಲಾಗಲೀ) ದಿವಿ ದೇವೇಷು ವಾ ಪುನಃ (ಪುನಃ ಸ್ವರ್ಗದಲ್ಲಿರುವ ದೇವತೆಗಳಲ್ಲಾಗಲೀ) ನ ಅಸ್ತಿ (ಇಲ್ಲ).

**೪೦.** ಪ್ರಕೃತಿಯಿಂದ ಹುಟ್ಟಿದ ಈ ಮೂರು ಗುಣಗಳಿಂದ ಮುಕ್ತವಾಗಿರುವ ಪ್ರಾಣಿಸಮೂಹವು ಪೃಥಿವಿಯಲ್ಲಾಗಲೀ[1] ಸ್ವರ್ಗದಲ್ಲಿರುವ ದೇವತೆಗಳಲ್ಲಾಗಲೀ ಇಲ್ಲ.

1 ಮನುಷ್ಯರಲ್ಲಾಗಲೀ.

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧ ॥**

ಪರಂತಪ (ಎಲೈ ಅರ್ಜುನನೆ) ಬ್ರಾಹ್ಮಣ-ಕ್ಷತ್ರಿಯ-ವಿಶಾಂ (ಬ್ರಾಹ್ಮಣ-ಕ್ಷತ್ರಿಯವೈಶ್ಯರ) ಶೂದ್ರಾಣಾಂ ಚ (ಮತ್ತು ಶೂದ್ರರ) ಕರ್ಮಾಣಿ (ಕರ್ಮಗಳು) ಸ್ವಭಾವ-ಪ್ರಭವೈಃ (ಸ್ವಭಾವದಿಂದ ಹುಟ್ಟಿದ) ಗುಣೈಃ (ಗುಣಗಳಿಂದ) ಪ್ರವಿಭಕ್ತಾನಿ (ವಿಭಾಗಿಸಲ್ಪಟ್ಟಿವೆ).

**೪೧.** ಎಲೈ ಅರ್ಜುನ, ಬ್ರಾಹ್ಮಣಕ್ಷತ್ರಿಯವೈಶ್ಯರ ಮತ್ತು ಶೂದ್ರರ ಕರ್ಮಗಳು ಸ್ವಭಾವದಿಂದ[1] ಹುಟ್ಟಿದ ಗುಣಗಳಿಂದ ವಿಭಾಗಿಸಲ್ಪಟ್ಟಿವೆ.

1 ಹಿಂದಿನ ಜನ್ಮದ ಕರ್ಮದ ಸಂಸ್ಕಾರವು ವರ್ತಮಾನಜನ್ಮದಲ್ಲಿ ಅಭಿವ್ಯಕ್ತವಾದರೆ ಸ್ವಭಾವವೆನಿಸುವುದು.

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥ ೪೨ ॥**

ಶಮಃ (ಶಮ) ದಮಃ (ದಮ) ತಪಃ (ತಪಸ್ಸು) ಶೌಚಂ (ಶೌಚ) ಕ್ಷಾಂತಿಃ (ಕ್ಷಮೆ) ಆರ್ಜವಂ (ಆರ್ಜವ) ಜ್ಞಾನಂ (ಜ್ಞಾನ) ವಿಜ್ಞಾನಂ (ವಿಜ್ಞಾನ) ಆಸ್ತಿಕ್ಯಂ ಏವ ಚ (ಮತ್ತು ಆಸ್ತಿಕಭಾವ) [ಇವು] ಸ್ವಭಾವಜಂ (ಸ್ವಭಾವದಿಂದ ಉಂಟಾದ) ಬ್ರಹ್ಮಕರ್ಮ (ಬ್ರಾಹ್ಮಣನ ಕರ್ಮ).

**೪೨.** ಶಮ ದಮ ತಪಸ್ಸು ಶೌಚ ಕ್ಷಮೆ ಆರ್ಜವ ಜ್ಞಾನ ವಿಜ್ಞಾನ ಮತ್ತು ಆಸ್ತಿಕಭಾವ—ಇವು ಸ್ವಭಾವದಿಂದ ಉಂಟಾದ ಬ್ರಾಹ್ಮಣನ ಕರ್ಮ.

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩ ॥**

ಶೌರ್ಯಂ (ಶೌರ್ಯ) ತೇಜಃ (ಪ್ರಾಗಲ್ಭ್ಯ) ಧೃತಿಃ (ಧೃತಿ) ದಾಕ್ಷ್ಯಂ (ಕಾರ್ಯದಕ್ಷತೆ) ಯುದ್ಧೇ ಚ (ಯುದ್ಧದಲ್ಲಿ) ಅಪಲಾಯನಂ ಅಪಿ (ಪಲಾಯನಮಾಡದಿರುವುದು) ದಾನಂ (ದಾನ) ಈಶ್ವರಭಾವಃ ಚ (ಮತ್ತು ಪ್ರಭುತ್ವ) [ಇವು] ಸ್ವಭಾವಜಂ (ಸ್ವಭಾವದಿಂದ ಉಂಟಾದ) ಕ್ಷಾತ್ರಂ ಕರ್ಮ (ಕ್ಷತ್ರಿಯನ ಕರ್ಮ).

**೪೩.** ಶೌರ್ಯ ಪ್ರಾಗಲ್ಭ್ಯ ಧೃತಿ ಕಾರ್ಯದಕ್ಷತೆ ಯುದ್ಧದಲ್ಲಿ ಪಲಾಯನಮಾಡದಿರುವುದು ದಾನ ಮತ್ತು ಪ್ರಭುತ್ವ—ಇವು ಸ್ವಭಾವದಿಂದ ಉಂಟಾದ ಕ್ಷತ್ರಿಯನ ಕರ್ಮ.

**ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪ ॥**

ಕೃಷಿ-ಗೌರಕ್ಷ್ಯ-ವಾಣಿಜ್ಯಂ (ಕೃಷಿ ಗೋರಕ್ಷಣೆ ವಾಣಿಜ್ಯ) ಸ್ವಭಾವಜಂ (ಸ್ವಭಾವದಿಂದ ಉಂಟಾದ) ವೈಶ್ಯಕರ್ಮ (ವೈಶ್ಯನ ಕರ್ಮ) ಶೂದ್ರಸ್ಯ ಅಪಿ (ಶೂದ್ರನಿಗೂ) ಪರಿಚರ್ಯಾತ್ಮಕಂ (ಪರಿಚರ್ಯಾರೂಪವಾದ) ಕರ್ಮ (ಕರ್ಮವು) ಸ್ವಭಾವಜಂ (ಸ್ವಭಾವದಿಂದ ಉಂಟಾದುದು).

**೪೪.** ಕೃಷಿ ಗೋರಕ್ಷಣೆ ಮತ್ತು ವಾಣಿಜ್ಯ—ಇವು ಸ್ವಭಾವದಿಂದ ಉಂಟಾದ ವೈಶ್ಯನ ಕರ್ಮ; ಪರಿಚರ್ಯಾರೂಪವಾದ ಕರ್ಮವು ಶೂದ್ರನಿಗೆ ಸ್ವಭಾವದಿಂದ ಉಂಟಾದುದು.

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫ ॥**

ಸ್ವೇ ಸ್ವೇ (ತನ್ನ ತನ್ನ) ಕರ್ಮಣಿ (ಕರ್ಮದಲ್ಲಿ) ಅಭಿರತಃ (ನಿರತನಾದ) ನರಃ (ಮನುಷ್ಯನು) ಸಂಸಿದ್ಧಿಂ (ಸಂಸಿದ್ಧಿಯನ್ನು) ಲಭತೇ (ಹೊಂದುತ್ತಾನೆ) ಸ್ವಕರ್ಮ-ನಿರತಃ (ಸ್ವಕರ್ಮದಲ್ಲಿ ನಿರತನಾದವನು) ಯಥಾ (ಹೇಗೆ) ಸಿದ್ಧಿಂ (ಸಿದ್ಧಿಯನ್ನು) ವಿಂದತಿ (ಹೊಂದುತ್ತಾನೆಯೋ) ತತ್ (ಅದನ್ನು) ಶೃಣು (ಕೇಳು).

**೪೫.** ತನ್ನ ತನ್ನ ಕರ್ಮದಲ್ಲಿ ನಿರತನಾದ ಮನುಷ್ಯನು ಸಂಸಿದ್ಧಿಯನ್ನು[1] ಹೊಂದುತ್ತಾನೆ. ಸ್ವಕರ್ಮದಲ್ಲಿ ನಿರತನಾದವನು ಹೇಗೆ ಸಿದ್ಧಿಯನ್ನು ಹೊಂದುತ್ತಾನೆಯೋ ಅದನ್ನು ಕೇಳು.

[1] ಸ್ವಕರ್ಮಾನುಷ್ಠಾನದಿಂದ ಅಶುದ್ಧಿಯು ಕ್ಷಯವಾದ ಮೇಲೆ ಶರೀರೇಂದ್ರಿಯಗಳು ಜ್ಞಾನನಿಷ್ಠೆಗೆ ಯೋಗ್ಯತೆಯನ್ನು ಹೊಂದುವುವು ಎಂಬ ಸಿದ್ಧಿ (ಶ್ರೀಶಂಕರ). ಪರಮ ಪದಪ್ರಾಪ್ತಿ (ಶ್ರೀರಾಮಾನುಜ).

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬ ॥**

ಯತಃ (ಯಾವನ ದೆಸೆಯಿಂದ) ಭೂತಾನಾಂ (ಪ್ರಾಣಿಗಳ) ಪ್ರವೃತ್ತಿಃ (ಪ್ರವೃತ್ತಿಯು) [ಉಂಟಾಗುವುದೋ] ಯೇನ (ಯಾವನಿಂದ) ಇದಂ ಸರ್ವಂ (ಈ ಜಗತ್ತೆಲ್ಲವೂ) ತತಂ (ವ್ಯಾಪ್ತವಾಗಿರುವುದೋ) ತಂ (ಅವನನ್ನು) ಸ್ವಕರ್ಮಣಾ (ಸ್ವಕರ್ಮದಿಂದ) ಅಭ್ಯರ್ಚ್ಯ (ಆರಾಧಿಸಿ) ಮಾನವಃ (ಮನುಷ್ಯನು) ಸಿದ್ಧಿಂ (ಸಿದ್ಧಿಯನ್ನು) ವಿಂದತಿ (ಪಡೆಯುತ್ತಾನೆ).

**೪೬.** ಯಾವನ ದೆಸೆಯಿಂದ ಪ್ರಾಣಿಗಳ ಪ್ರವೃತ್ತಿ[1] (ಉಂಟಾಗುವುದೋ), ಯಾವನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವುದೋ ಅವನನ್ನು ಸ್ವಕರ್ಮದಿಂದ ಆರಾಧಿಸಿ ಮನುಷ್ಯನು ಸಿದ್ಧಿಯನ್ನು ಹೊಂದುತ್ತಾನೆ.

[1] ಉತ್ಪತ್ತಿ ಅಥವಾ ವ್ಯಾಪಾರ (ಶ್ರೀಶಂಕರ).

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭ ॥**

ಸ್ವನುಷ್ಠಿತಾತ್ (ಚೆನ್ನಾಗಿ ಅನುಷ್ಠಾನಮಾಡಲ್ಪಟ್ಟ) ಪರಧರ್ಮಾತ್ (ಪರಧರ್ಮಕ್ಕಿಂತ) ವಿಗುಣಃ (ಗುಣರಹಿತವಾದ) ಸ್ವಧರ್ಮಃ (ಸ್ವಧರ್ಮವು) ಶ್ರೇಯಾನ್ (ಶ್ರೇಯಸ್ಕರವಾದುದು) ಸ್ವಭಾವನಿಯತಂ (ಸ್ವಭಾವದಿಂದ ನಿಯತವಾದ) ಕರ್ಮ (ಕರ್ಮವನ್ನು) ಕುರ್ವನ್ (ಮಾಡುತ್ತ) ಕಿಲ್ಬಿಷಂ (ಕಿಲ್ಬಿಷವನ್ನು) ನ ಆಪ್ನೋತಿ (ಹೊಂದುವುದಿಲ್ಲ).

**೪೭.** ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ಗುಣವಿಲ್ಲದ ಸ್ವಧರ್ಮವೇ ಶ್ರೇಯಸ್ಕರವಾದುದು. ಸ್ವಭಾವದಿಂದ ನಿಯತವಾದ ಕರ್ಮವನ್ನು ಮಾಡುತ್ತ (ಮನುಷ್ಯನು) ಕಿಲ್ಬಿಷವನ್ನು[1] ಹೊಂದುವುದಿಲ್ಲ.

[1] ಪಾಪವನ್ನು (ಶ್ರೀಶಂಕರ). ಸಂಸಾರವನ್ನು (ಶ್ರೀರಾಮಾನುಜ).

[ಪ್ರಕೃತಿಸಂಸರ್ಗದಿಂದ ಕೂಡಿದ ಮನುಷ್ಯನಿಗೆ ಇಂದ್ರಿಯವ್ಯಾಪಾರರೂಪವಾದ ಕರ್ಮಯೋಗವೆಂಬ ಧರ್ಮವು ಸುಕರವಾಗಿರುತ್ತದೆ. ಆದುದರಿಂದ ಸ್ವಧರ್ಮವಾದ ಕರ್ಮಯೋಗವು ವಿಗುಣವಾದರೂ ಪರಧರ್ಮವಾದ ಎಂದರೆ ಜಿತೇಂದ್ರಿಯರಾದವರ ಧರ್ಮವಾದ ಜ್ಞಾನಯೋಗಕ್ಕಿಂತಲೂ ಶ್ರೇಯಸ್ಕರವಾದುದು. ಏಕೆಂದರೆ

ಸರ್ವೇಂದ್ರಿಯನಿಗ್ರಹದ ಮೂಲಕ ಕಷ್ಟಸಾಧ್ಯವಾದ ಜ್ಞಾನಯೋಗವು ಯಾವಾಗಲಾದರೂ ಚೆನ್ನಾಗಿ ಅನುಷ್ಠಿಸಲ್ಪಟ್ಟರೂ ಪ್ರಮಾದಕ್ಕೆ ಆಸ್ಪದವಾಗಿದೆ—(ಶ್ರೀರಾಮಾನುಜ).

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮ ॥**

ಕೌಂತೇಯ (ಎಲೈ ಅರ್ಜುನನೆ) ಸದೋಷಂ ಅಪಿ (ದೋಷವುಳ್ಳದ್ದಾದರೂ) ಸಹಜಂ ಕರ್ಮ (ಸಹಜವಾದ ಕರ್ಮವು) ನ ತ್ಯಾಜ್ಯಂ (ತ್ಯಜಿಸಲ್ಪಡತಕ್ಕದ್ದಲ್ಲ) ಹಿ (ಏಕೆಂದರೆ) ಸರ್ವಾರಂಭಾಃ (ಸಮಸ್ತ ಕರ್ಮಗಳು) ಧೂಮೇನ (ಹೊಗೆಯಿಂದ) ಅಗ್ನಿಃ ಇವ (ಅಗ್ನಿಯು ಆವರಿಸಲ್ಪಟ್ಟಂತೆ) ದೋಷೇಣ (ದೋಷದಿಂದ) ಆವೃತಾಃ (ಆವರಿಸಲ್ಪಟ್ಟಿವೆ).

೪೮. ಎಲೈ ಅರ್ಜುನ, ಸಹಜವಾದ ಕರ್ಮವು ದೋಷವುಳ್ಳದ್ದಾದರೂ ತ್ಯಜಿಸಲ್ಪಡತಕ್ಕದ್ದಲ್ಲ. ಏಕೆಂದರೆ ಹೊಗೆಯಿಂದ ಬೆಂಕಿಯು (ಆವರಿಸಲ್ಪಟ್ಟಿರುವ) ಹಾಗೆ ಸಮಸ್ತ ಕರ್ಮಗಳು ದೋಷದಿಂದ ಆವರಿಸಲ್ಪಟ್ಟಿವೆ.

[ಎಲ್ಲಾ ಆರಂಭಗಳು— ಕರ್ಮಾರಂಭವಾಗಲೀ ಜ್ಞಾನಾರಂಭವಾಗಲೀ— ದುಃಖದಿಂದ ಆವರಿಸಲ್ಪಟ್ಟಿವೆ. ಆದರೆ ಈ ವ್ಯತ್ಯಾಸವುಂಟು: ಕರ್ಮಯೋಗವು ಸುಕರವಾದುದು ಮತ್ತು ಪ್ರಮಾದರಹಿತವಾದುದು, ಜ್ಞಾನಯೋಗವಾದರೋ ದುಷ್ಕರವಾದುದು ಮತ್ತು ಪ್ರಮಾದಕ್ಕೆ ಆಸ್ಪದವುಳ್ಳದ್ದು— ಶ್ರೀರಾಮಾನುಜ.]

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥ ೪೯ ॥**

ಸರ್ವತ್ರ (ಸರ್ವವಿಷಯಗಳಲ್ಲಿಯೂ) ಅಸಕ್ತಬುದ್ಧಿಃ (ಆಸಕ್ತಿಶೂನ್ಯನಾದವನೂ) ಜಿತಾತ್ಮಾ (ಮನಸ್ಸನ್ನು ಜಯಿಸಿದವನೂ) ವಿಗತಸ್ಪೃಹಃ (ಸ್ಪೃಹೆಯಿಲ್ಲದವನೂ) ಸಂನ್ಯಾಸೇನ (ಸಂನ್ಯಾಸದಿಂದ) ಪರಮಾಂ (ಪರಮವಾದ) ನೈಷ್ಕರ್ಮ್ಯ-ಸಿದ್ಧಿಂ (ನೈಷ್ಕರ್ಮ್ಯಸಿದ್ಧಿಯನ್ನು) ಅಧಿಗಚ್ಛತಿ (ಹೊಂದುತ್ತಾನೆ).

೪೯. ಸರ್ವವಿಷಯಗಳಲ್ಲಿಯೂ ಆಸಕ್ತಿಶೂನ್ಯನಾದವನೂ ಮನಸ್ಸನ್ನು ಜಯಿಸಿದವನೂ ಸ್ಪೃಹೆಯಿಲ್ಲದವನೂ (ಆದ ಮನುಷ್ಯನು) ಸಂನ್ಯಾಸದಿಂದ[1] ನೈಷ್ಕರ್ಮ್ಯಸಿದ್ಧಿಯನ್ನು[2] ಹೊಂದುತ್ತಾನೆ.

1 ಸಮ್ಯಗ್ದರ್ಶನದಿಂದ ಅಥವಾ ತತ್ಪೂರ್ವಕವಾದ ಸರ್ವಕರ್ಮಸಂನ್ಯಾಸದಿಂದ (ಶ್ರೀಶಂಕರ).

2 ನಿಷ್ಕ್ರಿಯಬ್ರಹ್ಮವೇ ಆತ್ಮವೆಂದು ತಿಳಿದುಕೊಂಡದ್ದರಿಂದ ಕರ್ಮಗಳು ಯಾವನನ್ನು ಬಿಟ್ಟುಹೋಗಿವೆಯೋ ಅವನು ನಿಷ್ಕರ್ಮನು. ಅವನ ಭಾವವು ನೈಷ್ಕರ್ಮ್ಯವು.

ನೈಷ್ಕರ್ಮ್ಯವಾದ ಸಿದ್ಧಿ ನೈಷ್ಕರ್ಮ್ಯಸಿದ್ಧಿ. ಅಥವಾ ನಿಷ್ಕ್ರಿಯವಾದ ಆತ್ಮಸ್ವರೂಪದಲ್ಲಿ ನಿಲ್ಲುವುದೆಂಬ ಸಿದ್ಧಿಯು ಉಂಟಾಗುವಿಕೆ ನೈಷ್ಕರ್ಮ್ಯಸಿದ್ಧಿ (ಶ್ರೀಶಂಕರ).

ಜ್ಞಾನಯೋಗಕ್ಕೂ ಫಲವಾದ ಪರಮಧ್ಯಾನನಿಷ್ಠೆಯನ್ನು ಹೊಂದುತ್ತಾನೆ; ಎಂದರೆ ಮುಂದೆ ಹೇಳುವ ಸರ್ವೇಂದ್ರಿಯಕರ್ಮಗಳ ಉಪರತಿರೂಪವಾದ ಧ್ಯಾನಯೋಗವನ್ನು ಹೊಂದುತ್ತಾನೆ (ಶ್ರೀರಾಮಾನುಜ).

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥**

ಕೌಂತೇಯ (ಎಲೈ ಅರ್ಜುನನೆ) ಸಿದ್ಧಿಂ ಪ್ರಾಪ್ತಃ (ಸಿದ್ಧಿಯನ್ನು ಹೊಂದಿದವನು) ಯಥಾ (ಹೇಗೆ) ಬ್ರಹ್ಮ (ಬ್ರಹ್ಮವನ್ನು) ಆಪ್ನೋತಿ (ಹೊಂದುತ್ತಾನೆಯೋ) ತಥಾ (ಹಾಗೆಯೇ) ಯಾ (ಯಾವುದು) ಜ್ಞಾನಸ್ಯ (ಜ್ಞಾನದ) ಪರಾ ನಿಷ್ಠಾ (ಪರಮ ನಿಷ್ಠೆಯೋ) [ಅದನ್ನು] ಸಮಾಸೇನ ಏವ (ಸಂಕ್ಷೇಪವಾಗಿ) ಮೇ (ನನ್ನಿಂದ) ನಿಬೋಧ (ತಿಳಿದುಕೊ).

**೫೦.** ಎಲೈ ಅರ್ಜುನ, ಸಿದ್ಧಿಯನ್ನು[1] ಹೊಂದಿದವನು ಜ್ಞಾನದ ಪರಮ ನಿಷ್ಠೆಯಾದ ಬ್ರಹ್ಮವನ್ನು ಹೇಗೆ ಹೊಂದುವನೋ (ಅದನ್ನು) ನನ್ನಿಂದ ಸಂಕ್ಷೇಪವಾಗಿ ತಿಳಿದುಕೊ.

1 ಇಲ್ಲಿ ಸಿದ್ಧಿಯೆಂದರೆ ಜ್ಞಾನನಿಷ್ಠೆಗೆ ಶರೀರೇಂದ್ರಿಯಗಳ ಯೋಗ್ಯತೆ. ಇದು ಸ್ವಕರ್ಮದಿಂದ ಈಶ್ವರನನ್ನು ಅರ್ಚಿಸಿದ ಫಲದಿಂದ ಉಂಟಾಗುತ್ತೆ (ಶ್ರೀಶಂಕರ). ಪ್ರತಿದಿನವೂ ಅನುಷ್ಠಿಸಲ್ಪಡುವ ಕರ್ಮಯೋಗದಿಂದ ಉಂಟಾದ ಧ್ಯಾನದ ಸಿದ್ಧಿ (ಶ್ರೀರಾಮಾನುಜ).

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥**
**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥**
**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥ ೫೩ ॥**

ವಿಶುದ್ಧಯಾ ಬುದ್ಧ್ಯಾ (ವಿಶುದ್ಧವಾದ ಬುದ್ಧಿಯಿಂದ) ಯುಕ್ತಃ (ಕೂಡಿದವನಾಗಿ) ಧೃತ್ಯಾ (ಧೃತಿಯಿಂದ) ಆತ್ಮಾನಂ (ತನ್ನನ್ನು) ನಿಯಮ್ಯ (ನಿಗ್ರಹಿಸಿ) ಶಬ್ದಾದೀನ್ ಚ (ಶಬ್ದಾದಿವಿಷಯಗಳನ್ನು) ತ್ಯಕ್ತ್ವಾ (ಬಿಟ್ಟು) ರಾಗದ್ವೇಷೌ ಚ (ರಾಗದ್ವೇಷಗಳನ್ನು) ವ್ಯುದಸ್ಯ (ನಿರಾಕರಿಸಿ) ವಿವಿಕ್ತಸೇವೀ (ನಿರ್ಜನಪ್ರದೇಶದಲ್ಲಿ ಇರುವವನಾಗಿ) ಲಘ್ವಾಶೀ

(ಮಿತಾಹಾರಿಯಾಗಿ) ಯತ-ವಾಕ್ಕಾಯ-ಮಾನಸಃ (ವಾಕ್ ಶರೀರ ಮನಸ್ಸು ಇವುಗಳನ್ನು ನಿಗ್ರಹಿಸಿದವನಾಗಿ) ನಿತ್ಯಂ (ಯಾವಾಗಲೂ) ಧ್ಯಾನಯೋಗಪರಃ (ಧ್ಯಾನಯೋಗಪರಾಯಣನಾಗಿ) ವೈರಾಗ್ಯಂ (ವೈರಾಗ್ಯವನ್ನು) ಸಮುಪಾಶ್ರಿತಃ (ಆಶ್ರಯಿಸಿದವನಾಗಿ) ಅಹಂಕಾರಂ (ಅಹಂಕಾರವನ್ನೂ) ಬಲಂ (ಬಲವನ್ನೂ) ದರ್ಪಂ (ದರ್ಪವನ್ನೂ) ಕಾಮಂ (ಕಾಮವನ್ನೂ) ಕ್ರೋಧಂ (ಕ್ರೋಧವನ್ನೂ) ಪರಿಗ್ರಹಂ (ಪರಿಗ್ರಹವನ್ನೂ) ವಿಮುಚ್ಯ (ತ್ಯಜಿಸಿ) ನಿರ್ಮಮಃ (ಮಮತೆಯಿಲ್ಲದವನಾಗಿ) ಶಾಂತಃ (ಶಾಂತನಾಗಿ) ಬ್ರಹ್ಮಭೂಯಾಯ (ಬ್ರಹ್ಮಭಾವವನ್ನು ಹೊಂದಲು) ಕಲ್ಪತೇ (ಸಮರ್ಥನಾಗುತ್ತಾನೆ).

**೫೧-೫೩.** ವಿಶುದ್ಧವಾದ[1] ಬುದ್ಧಿಯಿಂದ ಕೂಡಿದವನಾಗಿ, ಧೃತಿಯಿಂದ ತನ್ನನ್ನು[2] ನಿಗ್ರಹಿಸಿ, ಶಬ್ದಾದಿವಿಷಯಗಳನ್ನು ಬಿಟ್ಟು, ರಾಗದ್ವೇಷಗಳನ್ನು ನಿರಾಕರಿಸಿ, ನಿರ್ಜನಪ್ರದೇಶದಲ್ಲಿ ವಾಸಮಾಡುವವನಾಗಿ, ಮಿತಾಹಾರಿಯಾಗಿ, ವಾಕ್ ಶರೀರ ಮನಸ್ಸು ಇವುಗಳನ್ನು ನಿಗ್ರಹಿಸಿದವನಾಗಿ, ಯಾವಾಗಲೂ ಧ್ಯಾನಯೋಗಪರಾಯಣನಾಗಿ,[3] ವೈರಾಗ್ಯವನ್ನು ಆಶ್ರಯಿಸಿದವನಾಗಿ, ಅಹಂಕಾರ ಬಲ ದರ್ಪ ಕಾಮ ಕ್ರೋಧ ಪರಿಗ್ರಹ ಇವುಗಳನ್ನು ತ್ಯಜಿಸಿ, ಮಮತೆಯಿಲ್ಲದವನಾಗಿ ಶಾಂತನಾಗಿ ಬ್ರಹ್ಮಭಾವವನ್ನು ಹೊಂದಲು ಸಮರ್ಥನಾಗುತ್ತಾನೆ.

1 ಮಾಯೆಯಿಲ್ಲದ ಮತ್ತು ಅಧ್ಯವಸಾಯಲಕ್ಷಣವುಳ್ಳ (ಶ್ರೀಶಂಕರ). ಯಥಾರ್ಥವಾದ ಆತ್ಮತತ್ತ್ವವೇ ವಿಷಯವಾಗಿ ಉಳ್ಳ (ಶ್ರೀರಾಮಾನುಜ).

2 ಕಾರ್ಯಕರಣಗಳ ಸಂಘಾತವನ್ನು (ಶ್ರೀಶಂಕರ).

3 ಧ್ಯಾನವೆಂದರೆ ಆತ್ಮಸ್ವರೂಪಚಿಂತನೆ. ಯೋಗವೆಂದರೆ ಆತ್ಮವಿಷಯದಲ್ಲಿಯೇ (ಚಿತ್ತವನ್ನು) ಏಕಾಗ್ರವಾಗಿ ಮಾಡುವುದು. ಧ್ಯಾನಯೋಗಗಳು ಯಾವನ ಶ್ರೇಷ್ಠವಾದ ಕರ್ತವ್ಯಗಳೋ ಅವನು ಧ್ಯಾನಯೋಗಪರನು (ಶ್ರೀಶಂಕರ). ಶರೀರವಾಙ್ಮನಸ್ಸುಗಳ ವೃತ್ತಿಗಳನ್ನು ಧ್ಯಾನಕ್ಕೆ ಅಭಿಮುಖವಾಗಿ ಮಾಡಿಕೊಂಡಿರುವವನು (ಶ್ರೀರಾಮಾನುಜ).

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ॥ ೫೪ ॥**

ಬ್ರಹ್ಮಭೂತಃ (ಬ್ರಹ್ಮಭಾವವನ್ನು ಹೊಂದಿದವನು) ಪ್ರಸನ್ನಾತ್ಮಾ (ಪ್ರಸನ್ನಾತ್ಮನಾದವನು) ನ ಶೋಚತಿ (ಶೋಕಿಸುವುದಿಲ್ಲ) ನ ಕಾಂಕ್ಷತಿ (ಬಯಸುವುದಿಲ್ಲ) ಸರ್ವೇಷು ಭೂತೇಷು (ಸಮಸ್ತಪ್ರಾಣಿಗಳಲ್ಲಿ) ಸಮಃ [ಸನ್] (ಸಮನಾಗಿ) ಪರಾಂ (ಪರವಾದ) ಮದ್ಭಕ್ತಿಂ (ನನ್ನಲ್ಲಿ ಭಕ್ತಿಯನ್ನು) ಲಭತೇ (ಹೊಂದುತ್ತಾನೆ).

**೫೪.** ಬ್ರಹ್ಮಭಾವವನ್ನು ಹೊಂದಿದವನೂ ಪ್ರಸನ್ನಾತ್ಮನಾದವನೂ[1] ಶೋಕಿಸುವುದಿಲ್ಲ, ಬಯಸುವುದಿಲ್ಲ; ಸರ್ವಭೂತಗಳಲ್ಲಿಯೂ ಸಮನಾಗಿ ನನ್ನಲ್ಲಿ ಪರಮಭಕ್ತಿಯನ್ನು ಹೊಂದುತ್ತಾನೆ.

[1] ಅಧ್ಯಾತ್ಮಪ್ರಸಾದವನ್ನು ಹೊಂದಿದವನು (ಶ್ರೀಶಂಕರ). ಕ್ಲೇಶಕರ್ಮ ಮೊದಲಾದುವುಗಳಿಂದ ಕಲುಷಿತವಾಗದ ಸ್ವಭಾವವುಳ್ಳವನು (ಶ್ರೀರಾಮಾನುಜ).

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥ ೫೫ ॥**

ಭಕ್ತ್ಯಾ (ಭಕ್ತಿಯ ಮೂಲಕ) [ನಾನು] ಯಾವಾನ್ ಯಃ ಚ ಅಸ್ಮಿ (ಎಷ್ಟರವನು ಮತ್ತು ಯಾವನು ಆಗಿರುವೆನು) [ಎಂದು] ಮಾಂ (ನನ್ನನ್ನು) ತತ್ತ್ವತಃ (ಯಥಾರ್ಥವಾಗಿ) ಅಭಿಜಾನಾತಿ (ಅರಿಯುತ್ತಾನೆ) ತತಃ (ಅದರ ಮೂಲಕ) ಮಾಂ (ನನ್ನನ್ನು) ತತ್ತ್ವತಃ (ತತ್ತ್ವದಿಂದ) ಜ್ಞಾತ್ವಾ (ತಿಳಿದುಕೊಂಡು) ತದನಂತರಂ (ಆಗಲೇ) ವಿಶತೇ (ಪ್ರವೇಶಿಸುತ್ತಾನೆ).

**೫೫.** ಭಕ್ತಿಯ ಮೂಲಕ (ನಾನು) ಎಷ್ಟರವನು[1] ಮತ್ತು ಯಾವನು[2] ಎಂದು ಯಥಾರ್ಥವಾಗಿ ಅರಿಯುತ್ತಾನೆ. ಅದರ ಮೂಲಕ ನನ್ನನ್ನು ತತ್ತ್ವದಿಂದ ತಿಳಿದುಕೊಂಡು ಆಗಲೇ (ನನ್ನನ್ನು) ಪ್ರವೇಶಿಸುತ್ತಾನೆ.

[1] ಉಪಾಧಿಯಿಂದುಂಟಾದ ಬೇರೆಬೇರೆ ಭೇದಗಳಿಂದ ನಾನು ಎಷ್ಟರವನು (ಶ್ರೀಶಂಕರ). ಗುಣಗಳಿಂದಲೂ ವಿಭೂತಿಯಿಂದಲೂ ಎಷ್ಟರವನು (ಶ್ರೀರಾಮಾನುಜ).
[2] ಸರ್ವೋಪಾಧಿಭೇದರಹಿತನೂ ಉತ್ತಮಪುರುಷನೂ ಆಕಾಶದಂತೆ ಸರ್ವವ್ಯಾಪಿಯೂ ಆದ ನಾನು ಯಾವನು (ಶ್ರೀಶಂಕರ). ಸ್ವರೂಪದಿಂದಲೂ ಸ್ವಭಾವದಿಂದಲೂ ನಾನು ಯಾವನು (ಶ್ರೀರಾಮಾನುಜ).

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥ ೫೬ ॥**

ಸದಾ (ಯಾವಾಗಲೂ) ಸರ್ವಕರ್ಮಾಣಿ (ಸರ್ವಕರ್ಮಗಳನ್ನೂ) ಕುರ್ವಾಣಃ ಅಪಿ (ಮಾಡುತ್ತಿದ್ದರೂ) ಮದ್ವ್ಯಪಾಶ್ರಯಃ (ನನ್ನನ್ನೇ ಆಶ್ರಯಿಸಿರುವವನು) ಮತ್ಪ್ರಸಾದಾತ್ (ನನ್ನ ಪ್ರಸಾದದಿಂದ) ಶಾಶ್ವತಂ (ಶಾಶ್ವತವಾದ) ಅವ್ಯಯಂ (ಅವ್ಯಯವಾದ) ಪದಂ (ಪದವನ್ನು) ಅವಾಪ್ನೋತಿ (ಹೊಂದುತ್ತಾನೆ).

**೫೬.** ಯಾವಾಗಲೂ ಎಲ್ಲಾ ಕರ್ಮಗಳನ್ನೂ[1] ಮಾಡುತ್ತಿದ್ದರೂ

ನನ್ನನ್ನೇ ಆಶ್ರಯಿಸಿರುವವನು ನನ್ನ ಪ್ರಸಾದದಿಂದ ಶಾಶ್ವತವೂ ಅವ್ಯಯವೂ ಆದ ಪದವನ್ನು ಹೊಂದುತ್ತಾನೆ.

1 ನಿತ್ಯ-ನೈಮಿತ್ತಿಕ-ಕಾಮ್ಯಕರ್ಮಗಳು.

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭ ॥**

ಚೇತಸಾ (ಬುದ್ಧಿಯಿಂದ) ಸರ್ವಕರ್ಮಾಣಿ (ಸರ್ವಕರ್ಮಗಳನ್ನೂ) ಮಯಿ (ನನ್ನಲ್ಲಿ) ಸಂನ್ಯಸ್ಯ (ಸಮರ್ಪಿಸಿ) ಮತ್ಪರಃ (ಮತ್ಪರಾಯಣನಾಗಿ) ಬುದ್ಧಿಯೋಗಂ (ಬುದ್ಧಿಯೋಗವನ್ನು) ಉಪಾಶ್ರಿತ್ಯ (ಆಶ್ರಯಿಸಿ) ಸತತಂ (ಯಾವಾಗಲೂ) ಮಚ್ಚಿತ್ತಃ (ನನ್ನಲ್ಲೇ ಚಿತ್ತವುಳ್ಳವನಾಗಿ) ಭವ (ಇರು).

**೫೭.** ಬುದ್ಧಿಯಿಂದ ಸರ್ವಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿ ಮತ್ಪರಾಯಣನಾಗಿ ಬುದ್ಧಿಯೋಗವನ್ನು ಆಶ್ರಯಿಸಿ ಯಾವಾಗಲೂ ನನ್ನಲ್ಲೇ ಚಿತ್ತವುಳ್ಳವನಾಗಿರು.

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥**

ಮಚ್ಚಿತ್ತಃ [ಸನ್] (ನನ್ನಲ್ಲಿಯೇ ಚಿತ್ತವುಳ್ಳವನಾಗಿ) ಮತ್ಪ್ರಸಾದಾತ್ (ನನ್ನ ಅನುಗ್ರಹದಿಂದ) ಸರ್ವದುರ್ಗಾಣಿ (ಸಮಸ್ತದುರ್ಗಗಳನ್ನು) ತರಿಷ್ಯಸಿ (ದಾಟುವೆ) ಅಥ ಚೇತ್ (ಅಲ್ಲವಾದರೆ) ತ್ವಂ (ನೀನು) ಅಹಂಕಾರಾತ್ (ಅಹಂಕಾರದಿಂದ) ನ ಶ್ರೋಷ್ಯಸಿ (ಕೇಳದಿದ್ದರೆ) ವಿನಂಕ್ಷ್ಯಸಿ (ನಾಶವಾಗುತ್ತೀಯೆ).

**೫೮.** ನನ್ನಲ್ಲಿ ಚಿತ್ತವುಳ್ಳವನಾಗಿ ನನ್ನ ಅನುಗ್ರಹದಿಂದ ಸಮಸ್ತ ದುರ್ಗಗಳನ್ನು[1] ದಾಟುವೆ. ನೀನು ಅಹಂಕಾರದಿಂದ (ನನ್ನ ಮಾತನ್ನು) ಕೇಳದೆ ಹೋದರೆ ನಾಶವಾಗುತ್ತೀಯೆ.

1 ದುಸ್ತರವಾದ ಸಂಸಾರಹೇತುಗಳ ಸಮೂಹವನ್ನು (ಶ್ರೀಶಂಕರ).

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

ಅಹಂಕಾರಂ (ಅಹಂಕಾರವನ್ನು) ಆಶ್ರಿತ್ಯ (ಆಶ್ರಯಿಸಿ) ನ ಯೋತ್ಸ್ಯೇ (ಯುದ್ಧ ಮಾಡುವುದಿಲ್ಲ) ಇತಿ (ಎಂದು) ಯತ್ ಮನ್ಯಸೇ (ತಿಳಿಯುವೆಯಾದರೆ) ತೇ (ನಿನ್ನ)

ಏಷಃ (ಈ) ವ್ಯವಸಾಯಃ (ನಿಶ್ಚಯವು) ಮಿಥ್ಯಾ (ಮಿಥ್ಯೆ) ಪ್ರಕೃತಿಃ (ಸ್ವಭಾವವು) ತ್ವಾಂ (ನಿನ್ನನ್ನು) ನಿಯೋಕ್ಷ್ಯತಿ (ಪ್ರೇರಿಸುವುದು).

**೫೯.** ಅಹಂಕಾರವನ್ನು ಆಶ್ರಯಿಸಿ 'ಯುದ್ಧಮಾಡುವುದಿಲ್ಲ' ಎಂದು ತಿಳಿಯುವೆಯಾದರೆ ಈ ನಿನ್ನ ನಿಶ್ಚಯವು ಮಿಥ್ಯೆ; (ಏಕೆಂದರೆ) ಸ್ವಭಾವವು ನಿನ್ನನ್ನು ಪ್ರೇರಿಸುವುದು.

**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್ ॥ ೬೦ ॥**

ಕೌಂತೇಯ (ಎಲೈ ಅರ್ಜುನನೆ) ಸ್ವಭಾವಜೇನ (ಸ್ವಭಾವದಿಂದ ಹುಟ್ಟಿದ) ಸ್ವೇನ (ನಿನ್ನ) ಕರ್ಮಣಾ (ಕರ್ಮದಿಂದ) ನಿಬದ್ಧಃ (ಕಟ್ಟಲ್ಪಟ್ಟವನಾಗಿ) ಯತ್ (ಯಾವುದನ್ನು) ಮೋಹಾತ್ (ಮೋಹದಿಂದ) ಕರ್ತುಂ (ಮಾಡಲು) ನ ಇಚ್ಛಸಿ (ಇಚ್ಛಿಸುವುದಿಲ್ಲವೋ) ತತ್ (ಅದನ್ನು) ಅವಶಃ ಅಪಿ (ಪರವಶನಾಗಿ) ಕರಿಷ್ಯಸಿ (ಮಾಡುವೆ).

**೬೦.** ಎಲೈ ಅರ್ಜುನ, ಸ್ವಭಾವದಿಂದ ಹುಟ್ಟಿದ ನಿನ್ನ ಕರ್ಮದಿಂದ ಕಟ್ಟಲ್ಪಟ್ಟವನಾಗಿ, ಮೋಹದಿಂದ ಯಾವುದನ್ನು ಮಾಡಲು ಇಚ್ಛಿಸುವುದಿಲ್ಲವೋ ಅದನ್ನು ಪರವಶನಾಗಿ ಮಾಡುವೆ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ**
**ಮಾಯಯಾ ॥ ೬೧ ॥**

ಅರ್ಜುನ (ಎಲೈ ಅರ್ಜುನನೆ) ಈಶ್ವರಃ (ಈಶ್ವರನು) ಮಾಯಯಾ (ಮಾಯೆಯಿಂದ) ಸರ್ವಭೂತಾನಿ (ಸರ್ವಪ್ರಾಣಿಗಳನ್ನು) ಯಂತ್ರಾರೂಢಾನಿ [ಇವ] (ಯಂತ್ರಾರೂಢವಾದ [ಬೊಂಬೆಗಳಂತೆ]) ಭ್ರಾಮಯನ್ (ತಿರುಗಿಸುತ್ತಾ) ಸರ್ವಭೂತಾನಾಂ (ಸರ್ವಜೀವರ) ಹೃದ್ದೇಶೇ (ಹೃದಯಪ್ರದೇಶದಲ್ಲಿ) ತಿಷ್ಠತಿ (ನೆಲೆಸಿರುತ್ತಾನೆ).

**೬೧.** ಎಲೈ ಅರ್ಜುನ, ಸರ್ವಪ್ರಾಣಿಗಳನ್ನು ಯಂತ್ರಾರೂಢವಾದ ಬೊಂಬೆಗಳಂತೆ ಮಾಯೆಯಿಂದ ತಿರುಗಿಸುತ್ತಾ ಈಶ್ವರನು ಸರ್ವಜೀವರ ಹೃದಯಪ್ರದೇಶದಲ್ಲಿ ನೆಲೆಸಿರುತ್ತಾನೆ.

[ತನ್ನಿಂದಲೇ ನಿರ್ಮಿತವಾದ ದೇಹೇಂದ್ರಿಯಾವಸ್ಥೆಯನ್ನು ಪಡೆದಿರುವ ಪ್ರಕೃತಿ ಎಂಬ ಯಂತ್ರವನ್ನು ಹತ್ತಿರುವ ಸಮಸ್ತಜೀವರನ್ನು ಸತ್ತ್ವಾದಿಗುಣಗಳೆಂಬ ಮಾಯೆಯಿಂದ ಆ ಗುಣಗಳಿಗೆ ಅನುಗುಣವಾಗಿ ಪ್ರೇರಿಸುತ್ತಾನೆ—ಶ್ರೀರಾಮಾನುಜ.]

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥ ೬೨ ॥**

ಭಾರತ (ಎಲೈ ಅರ್ಜುನನೆ) ಸರ್ವಭಾವೇನ (ಸರ್ವಾತ್ಮನಾ) ತಂ ಏವ (ಅವನನ್ನೇ) ಶರಣಂ ಗಚ್ಛ (ಶರಣುಹೊಂದು) ತತ್ಪ್ರಸಾದಾತ್ (ಅವನ ಅನುಗ್ರಹ ದಿಂದ) ಪರಾಂ ಶಾಂತಿಂ (ಪರಮಶಾಂತಿಯನ್ನೂ) ಶಾಶ್ವತಂ ಸ್ಥಾನಂ (ಶಾಶ್ವತವಾದ ಸ್ಥಾನವನ್ನೂ) ಪ್ರಾಪ್ಸ್ಯಸಿ (ಹೊಂದುವೆ).

**೬೨.** ಎಲೈ ಅರ್ಜುನ, ಸರ್ವಾತ್ಮನಾ ಅವನನ್ನೇ ಶರಣುಹೊಂದು. ಅವನ ಅನುಗ್ರಹದಿಂದ ಪರಮಶಾಂತಿಯನ್ನೂ ಶಾಶ್ವತವಾದ ಸ್ಥಾನವನ್ನೂ ಹೊಂದುವೆ.

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥**

ಇತಿ (ಹೀಗೆ) ಗುಹ್ಯಾತ್ (ಗುಹ್ಯಕ್ಕಿಂತಲೂ) ಗುಹ್ಯತರಂ (ಗುಹ್ಯತರವಾದ) ಜ್ಞಾನಂ (ಜ್ಞಾನವು) ತೇ (ನಿನಗೆ) ಮಯಾ (ನನ್ನಿಂದ) ಆಖ್ಯಾತಂ (ಹೇಳಲ್ಪಟ್ಟಿತು) ಏತತ್ (ಇದನ್ನು) ಅಶೇಷೇಣ (ಸಂಪೂರ್ಣವಾಗಿ) ವಿಮೃಶ್ಯ (ವಿಮರ್ಶೆಮಾಡಿ) ಯಥಾ (ಹೇಗೆ) ಇಚ್ಛಸಿ (ಇಚ್ಛಿಸುವೆಯೋ) ತಥಾ (ಹಾಗೆ) ಕುರು (ಮಾಡು).

**೬೩.** ಹೀಗೆ ಗುಹ್ಯಕ್ಕಿಂತಲೂ ಗುಹ್ಯತರವಾದ ಜ್ಞಾನವು ನನ್ನಿಂದ ನಿನಗೆ ಹೇಳಲ್ಪಟ್ಟಿತು. ಇದನ್ನು ಸಂಪೂರ್ಣವಾಗಿ ವಿಮರ್ಶೆಮಾಡಿ ಹೇಗೆ ಇಚ್ಛಿಸುವೆಯೋ[1] ಹಾಗೆ ಮಾಡು.

[1] ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ಇವುಗಳನ್ನು ನಿನ್ನ ಇಷ್ಟಾನುಸಾರ ಅನುಷ್ಠಾನಮಾಡು (ಶ್ರೀರಾಮಾನುಜ).

**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ॥ ೬೪ ॥**

ಸರ್ವಗುಹ್ಯತಮಂ (ಸರ್ವಗುಹ್ಯತಮವಾದ) ಮೇ (ನನ್ನ) ಪರಮಂ ವಚಃ (ಪರಮವಚನವನ್ನು) ಭೂಯಃ (ಪುನಃ) ಶೃಣು (ಕೇಳು) ಮೇ (ನನಗೆ) ದೃಢಂ (ಅತ್ಯಂತವಾಗಿ) ಇಷ್ಟಃ ಅಸಿ (ಇಷ್ಟನಾಗಿರುವೆ) ಇತಿ ತತಃ (ಆದುದರಿಂದ) ತೇ (ನಿನಗೆ) ಹಿತಂ (ಹಿತವನ್ನು) ವಕ್ಷ್ಯಾಮಿ (ಹೇಳುತ್ತೇನೆ).

**೬೪.** ಸರ್ವಗುಹ್ಯತಮವಾದ ನನ್ನ ಪರಮವಚನವನ್ನು ಪುನಃ ಕೇಳು: ನೀನು ಅತ್ಯಂತ ಇಷ್ಟನಾಗಿರುವೆಯಾದುದರಿಂದ ನಿನಗೆ ಹಿತವನ್ನು ಹೇಳುತ್ತೇನೆ.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥ ೬೫ ॥**

ಮನ್ಮನಾ ಭವ (ನನ್ನಲ್ಲಿಯೇ ಮನಸ್ಸುಳ್ಳವನಾಗು) ಮದ್ಭಕ್ತಃ [ಭವ] (ನನ್ನ ಭಕ್ತನಾಗು) ಮದ್ಯಾಜೀ [ಭವ] (ನನ್ನನ್ನೇ ಆರಾಧಿಸುವವನಾಗು) ಮಾಂ (ನನ್ನನ್ನು) ನಮಸ್ಕುರು (ನಮಸ್ಕರಿಸು) ಮಾಂ ಏವ (ನನ್ನನ್ನೇ) ಏಷ್ಯಸಿ (ಹೊಂದುವೆ) ತೇ (ನಿನಗೆ) ಸತ್ಯಂ (ಸತ್ಯವಾಗಿ) ಪ್ರತಿಜಾನೇ (ಪ್ರತಿಜ್ಞೆಮಾಡುತ್ತೇನೆ) ಮೇ (ನನಗೆ) ಪ್ರಿಯಃ ಅಸಿ (ಪ್ರಿಯನಾಗಿರುವೆ).

**೬೫.** ನನ್ನಲ್ಲಿಯೇ ಮನಸ್ಸುಳ್ಳವನಾಗು, ನನ್ನ ಭಕ್ತನಾಗು, ನನ್ನನ್ನೇ ಆರಾಧಿಸುವವನಾಗು, ನನ್ನನ್ನು ನಮಸ್ಕರಿಸು, ನನ್ನನ್ನೇ ಸೇರುವೆ; ಸತ್ಯವಾಗಿ ಪ್ರತಿಜ್ಞೆಮಾಡುತ್ತೇನೆ; (ಏಕೆಂದರೆ ನೀನು) ನನಗೆ ಪ್ರಿಯನಾಗಿರುವೆ.

[ಹೀಗೆ ಭಗವಂತನ ಸತ್ಯಪ್ರತಿಜ್ಞೆಯನ್ನು ತಿಳಿದುಕೊಂಡು, ಭಗವದ್ಭಕ್ತಿಗೆ ಮೋಕ್ಷ ಫಲವು ಅವಶ್ಯವಾಗಿ ಆಗುವುದೆಂದು ನಿಶ್ಚಯಿಸಿ, ಭಗವಂತನನ್ನು ಶರಣುಹೊಂದುವುದ ರಲ್ಲಿ ಏಕಪರಾಯಣನಾಗಿರಬೇಕು ಎಂದು ವಾಕ್ಯಾರ್ಥ—ಶ್ರೀಶಂಕರ].

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ**
**ಮಾ ಶುಚಃ ॥ ೬೬ ॥**

ಸರ್ವಧರ್ಮಾನ್ (ಸರ್ವಧರ್ಮಗಳನ್ನು) ಪರಿತ್ಯಜ್ಯ (ಪರಿತ್ಯಾಗಮಾಡಿ) ಏಕಂ ಮಾಂ (ನನ್ನೊಬ್ಬನನ್ನೇ) ಶರಣಂ ವ್ರಜ (ಶರಣುಹೊಂದು) ಅಹಂ (ನಾನು) ತ್ವಾ (ನಿನ್ನನ್ನು) ಸರ್ವಪಾಪೇಭ್ಯಃ (ಸರ್ವಪಾಪಗಳಿಂದ) ಮೋಕ್ಷಯಿಷ್ಯಾಮಿ (ಬಿಡಿಸು ವೆನು) ಮಾ ಶುಚಃ (ಶೋಕಿಸಬೇಡ).

**೬೬.** ಸರ್ವಧರ್ಮಗಳನ್ನು[1] ಪರಿತ್ಯಾಗಮಾಡಿ ನನ್ನೊಬ್ಬನನ್ನೇ ಶರಣು ಹೊಂದು. ನಾನು ನಿನ್ನನ್ನು ಸರ್ವಪಾಪಗಳಿಂದ[2] ಬಿಡಿಸುವೆನು; ಶೋಕಿಸ ಬೇಡ.

1 ಎಲ್ಲಾ ಧರ್ಮಗಳು; ಇಲ್ಲಿ ಧರ್ಮಶಬ್ದದಿಂದ ಅಧರ್ಮವನ್ನೂ ಗ್ರಹಿಸಿಕೊಳ್ಳ ಬೇಕು; ಏಕೆಂದರೆ ಇಲ್ಲಿ ನೈಷ್ಕರ್ಮ್ಯವನ್ನು ಹೇಳಲು ಹೊರಟಿದೆ (ಶ್ರೀಶಂಕರ).

2 ಎಲ್ಲಾ ಧರ್ಮಾಧರ್ಮಗಳ ಬಂಧನರೂಪವಾದ ಪಾಪಗಳಿಂದಲೂ (ಶ್ರೀಶಂಕರ).

[ಶ್ರೀರಾಮಾನುಜಾಚಾರ್ಯರು ಈ ರೀತಿ ವ್ಯಾಖ್ಯಾನಮಾಡಿರುತ್ತಾರೆ: ಪರಮ ನಿಃಶ್ರೇಯಸ್ಸಿಗೆ ಸಾಧನವಾದ ಕರ್ಮಯೋಗ-ಜ್ಞಾನಯೋಗ-ಭಕ್ತಿಯೋಗರೂಪವಾದ ಸರ್ವಧರ್ಮಗಳನ್ನು ಭಗವದಾರಾಧನೆಯೆಂದು ತನ್ನ ಯೋಗ್ಯತೆಗೆ ತಕ್ಕಂತೆ ಅನುಷ್ಠಾನ

ಮಾಡುವವನಾಗಿ, ಅವುಗಳಲ್ಲಿ ಫಲ ಮಮತೆ ಕರ್ತೃತ್ವ ಮೊದಲಾದುವುಗಳನ್ನು ಬಿಟ್ಟು ಭಗವಂತನೊಬ್ಬನೇ ಕರ್ತೃವೆಂದೂ ಆರಾಧ್ಯನೆಂದೂ ಪ್ರಾಪ್ಯನೆಂದೂ ಉಪಾಯವೆಂದೂ ಅನುಸಂಧಾನಮಾಡಬೇಕು.

ಎರಡನೆಯ ಅರ್ಥ: ಭಕ್ತಿಯೋಗದ ಅನುಷ್ಠಾನವು ಸರ್ವಪಾಪಗಳಿಂದ ಮುಕ್ತನಾದ ಮತ್ತು ಭಗವಂತನಿಗೆ ಅತ್ಯಂತ ಪ್ರಿಯನಾದ ಪುರುಷನಿಗೆ ಮಾತ್ರ ಸಾಧ್ಯವಾದುದರಿಂದಲೂ, ಆ ಭಕ್ತಿಯೋಗವನ್ನು ಪ್ರಾರಂಭಿಸುವುದಕ್ಕೆ ವಿರೋಧಿಗಳಾದ ಪಾಪಗಳು ಅನಂತವಾಗಿರುವುದರಿಂದಲೂ, ಪರಿಮಿತಕಾಲದಲ್ಲಿ ಮಾಡಲ್ಪಡುವ ಪ್ರಾಯಶ್ಚಿತ್ತರೂಪವಾದ ಧರ್ಮಗಳಿಂದ ಆ ಪಾಪಗಳ ನಿವಾರಣೆಯು ಅಸಾಧ್ಯವಾದುದರಿಂದಲೂ, ತಾನು ಭಕ್ತಿಯೋಗಕ್ಕೆ ಅನರ್ಹನೆಂದು ಆಲೋಚಿಸಿ ದುಃಖಿಸುತ್ತಿರುವ ಅರ್ಜುನನ ಶೋಕವನ್ನು ಹೋಗಲಾಡಿಸಲು ಶ್ರೀಭಗವಂತನು ಹೇಳಿದನು— ಅನಾದಿಕಾಲದಿಂದ ಸಂಚಿತವಾದ ಪಾಪಗಳು ಭಕ್ತಿಯೋಗಾರಂಭಕ್ಕೆ ವಿರೋಧಿಗಳು. ಅವುಗಳನ್ನು ಪರಿಹರಿಸಲು ವಿಧಿಸಿರುವ ನಾನಾವಿಧವಾದ ಕೃಚ್ಛ್ರಾದಿಪ್ರಾಯಶ್ಚಿತ್ತಗಳನ್ನು ಪರಿಮಿತಕಾಲದಲ್ಲಿ ಅನುಷ್ಠಿಸಲು ಅಸಾಧ್ಯವಾದುದರಿಂದ ಅವುಗಳನ್ನೆಲ್ಲಾ ತ್ಯಜಿಸಿ ಭಕ್ತಿಯೋಗಾರಂಭಸಿದ್ಧಿಗಾಗಿ ಪರಮಕಾರುಣಿಕನೂ ಯಾವ ವಿಶೇಷಗಳನ್ನೂ ಪರಿಗಣಿಸದೆ ಅಶೇಷಲೋಕಶರಣ್ಯನೂ ಆಶ್ರಿತವಾತ್ಸಲ್ಯಜಲಧಿಯೂ ಆದ ಭಗವಂತನೊಬ್ಬನನ್ನೇ ಶರಣುಹೊಂದಬೇಕು.]

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥ ೬೭ ॥**

ಇದಂ (ಇದು) ತೇ (ನಿನಗೆ) [ಉಕ್ತಂ (ಹೇಳಲ್ಪಟ್ಟಿತು)] ಅತಪಸ್ಕಾಯ (ತಪೋಹೀನನಿಗೆ) [ಇದು] ನ ವಾಚ್ಯಂ (ಹೇಳಲ್ಪಡತಕ್ಕದ್ದಲ್ಲ) ಅಭಕ್ತಾಯ (ಭಕ್ತನಲ್ಲದವನಿಗೆ) ಕದಾಚನ (ಎಂದಿಗೂ) ನ (ಹೇಳಲ್ಪಡತಕ್ಕದ್ದಲ್ಲ) ಅಶುಶ್ರೂಷವೇ ಚ (ಶುಶ್ರೂಷೆಮಾಡದವನಿಗೆ) ನ (ಹೇಳಲ್ಪಡತಕ್ಕದ್ದಲ್ಲ) ಯಃ (ಯಾವನು) ಮಾಂ (ನನ್ನನ್ನು) ಅಭ್ಯಸೂಯತಿ (ಅಸೂಯೆಪಡುತ್ತಾನೆಯೋ) [ಅವನಿಗೂ] ನ (ಹೇಳಲ್ಪಡತಕ್ಕದ್ದಲ್ಲ).

**೬೭.** ಇದನ್ನು ನಿನಗೆ (ಹೇಳಿರುತ್ತೇನೆ): ತಪೋರಹಿತನಿಗೆ (ಇದನ್ನು) ಹೇಳಕೂಡದು; ಭಕ್ತನಲ್ಲದವನಿಗೆ[1] ಎಂದಿಗೂ (ಹೇಳಕೂಡದು); ಶುಶ್ರೂಷೆ ಮಾಡದವನಿಗೆ[2] (ಹೇಳಕೂಡದು); ನನ್ನಲ್ಲಿ ಅಸೂಯೆಪಡುವವನಿಗೂ[3] (ಹೇಳಕೂಡದು).

[1] ತಪಸ್ವಿಯಾಗಿದ್ದರೂ (ಶ್ರೀಶಂಕರ).

[2] ತಪಸ್ವಿಯೂ ಮತ್ತು ಭಕ್ತನೂ ಆಗಿದ್ದರೂ (ಶ್ರೀಶಂಕರ).

[3] ಭಗವಂತನ ಸ್ವರೂಪದಲ್ಲಾಗಲೀ ಐಶ್ವರ್ಯದಲ್ಲಾಗಲೀ ಗುಣಗಳಲ್ಲಾಗಲೀ

ದೋಷವನ್ನು ಕಂಡುಹಿಡಿಯುವವನು . . . . ಇಲ್ಲಿ ಅಸಮಾನವಿಭಕ್ತಿಯನ್ನುಪಯೋಗಿ ಸಿರುವುದು (ಚತುರ್ಥಿಗೆ ಬದಲಾಗಿ ಪ್ರಥಮಾವಿಭಕ್ತಿ) ಅಸೂಯೆಪಡುವವನು ಅತ್ಯಂತ ತ್ಯಾಜ್ಯನು ಎಂದು ಸೂಚಿಸುವುದಕ್ಕಾಗಿ (ಶ್ರೀರಾಮಾನುಜ).

**ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥**

ಯಃ (ಯಾವನು) ಇದಂ (ಈ) ಪರಮಂ (ಪರಮವಾದ) ಗುಹ್ಯಂ (ರಹಸ್ಯ ವನ್ನು) ಮದ್ಭಕ್ತೇಷು (ನನ್ನ ಭಕ್ತರಲ್ಲಿ) ಅಭಿಧಾಸ್ಯತಿ (ಹೇಳುತ್ತಾನೆಯೋ) ಸಃ (ಅವನು) ಮಯಿ (ನನ್ನಲ್ಲಿ) ಪರಾಂ ಭಕ್ತಿಂ (ಪರಮಭಕ್ತಿಯನ್ನು) ಕೃತ್ವಾ (ಮಾಡಿ) ಮಾಂ ಏವ (ನನ್ನನ್ನೇ) ಏಷ್ಯತಿ (ಹೊಂದುತ್ತಾನೆ) ಅಸಂಶಯಃ (ಇದರಲ್ಲಿ ಸಂಶಯವಿಲ್ಲ).

**೬೮.** ಯಾವನು ಈ ಪರಮರಹಸ್ಯವನ್ನು[1] ನನ್ನ ಭಕ್ತರಲ್ಲಿ ಹೇಳುತ್ತಾನೆಯೋ ಅವನು ನನ್ನಲ್ಲಿ ಪರಮಭಕ್ತಿಯನ್ನು ಮಾಡಿ[2] ನನ್ನನ್ನೇ ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

[1] ನಿಃಶ್ರೇಯಸ್ಸಿಗೆ ಸಾಧನವಾದ ಕೇಶವಾರ್ಜುನರ ಸಂವಾದರೂಪವಾದ ಗ್ರಂಥ (ಶ್ರೀಶಂಕರ).

[2] 'ಭಗವಂತನೂ ಪರಮಗುರುವೂ ಆದ ಅಚ್ಯುತನ ಸೇವೆಯನ್ನೇ ಮಾಡುತ್ತಿದ್ದೇನೆ' ಎಂದು ಅರ್ಥ (ಶ್ರೀಶಂಕರ).

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥**

ಮನುಷ್ಯೇಷು ಚ (ಮನುಷ್ಯರಲ್ಲಿ) ತಸ್ಮಾತ್ (ಅವನಿಗಿಂತಲೂ) ಮೇ (ನನಗೆ) ಪ್ರಿಯಕೃತ್ತಮಃ (ಪ್ರಿಯವನ್ನುಂಟುಮಾಡುವವನು) ಕಶ್ಚಿತ್ ನ (ಯಾವನೂ ಇಲ್ಲ) ಭುವಿ (ಭೂಮಿಯಲ್ಲಿ) ತಸ್ಮಾತ್ (ಅವನಿಗಿಂತ) ಮೇ (ನನಗೆ) ಪ್ರಿಯತರಃ (ಪ್ರಿಯತರನಾದವನು) ಅನ್ಯಃ (ಬೇರೆ ಯಾವನೂ) ನ ಭವಿತಾ (ಹುಟ್ಟುವುದಿಲ್ಲ).

**೬೯.** ಮನುಷ್ಯರಲ್ಲಿ ಅವನಿಗಿಂತಲೂ[1] ನನಗೆ ಪ್ರಿಯವನ್ನುಂಟುಮಾಡುವವನು ಯಾವನೂ ಇಲ್ಲ; ಭೂಮಿಯಲ್ಲಿ ಅವನಿಗಿಂತ[2] ನನಗೆ ಪ್ರಿಯತರನಾದ ಬೇರೆ ಯಾವನೂ ಹುಟ್ಟುವುದಿಲ್ಲ.

[1-2] ಗೀತೋಪದೇಶವನ್ನು ಮಾಡುವವನು.

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**

ಯಃ ಚ (ಮತ್ತು ಯಾವನು) ಆವಯೋಃ (ನಮ್ಮಿಬ್ಬರ) ಇಮಂ (ಈ) ಧರ್ಮ್ಯಂ (ಧರ್ಮದಿಂದ ಕೂಡಿದ) ಸಂವಾದಂ (ಸಂವಾದವನ್ನು) ಅಧ್ಯೇಷ್ಯತೇ (ಅಧ್ಯಯನಮಾಡುತ್ತಾನೆಯೋ) ತೇನ (ಅವನಿಂದ) ಅಹಂ (ನಾನು) ಜ್ಞಾನ-ಯಜ್ಞೇನ (ಜ್ಞಾನಯಜ್ಞದಿಂದ) ಇಷ್ಟಃ ಸ್ಯಾಂ (ಇಷ್ಟನಾಗುವೆನು) ಇತಿ (ಎಂದು) ಮೇ (ನನ್ನ) ಮತಿಃ (ನಿಶ್ಚಯ).

೭೦. ಧರ್ಮದಿಂದ ಕೂಡಿದ ನಮ್ಮ ಈ ಸಂವಾದವನ್ನು ಯಾವನು ಅಧ್ಯಯನಮಾಡುವನೋ ಅವನಿಂದ ನಾನು ಜ್ಞಾನಯಜ್ಞದ ಮೂಲಕ ಇಷ್ಟನಾಗುವೆನು ಎಂದು ನನ್ನ ನಿಶ್ಚಯ.

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾಲ್ಲೋಕಾನ್ ಪ್ರಾಪ್ನುಯಾತ್ ಪುಣ್ಯಕರ್ಮಣಾಮ್ ॥ ೭೧ ॥**

ಶ್ರದ್ಧಾವಾನ್ (ಶ್ರದ್ಧಾವಂತನಾದ) ಅನಸೂಯಃ ಚ (ಅಸೂಯೆಯಿಲ್ಲದವನಾದ) ಯಃ (ಯಾವ) ನರಃ (ನರನು) ಶೃಣುಯಾತ್ ಅಪಿ (ಕೇಳುವನೋ) ಸಃ ಅಪಿ (ಅವನೂ ಕೂಡ) ಮುಕ್ತಃ (ಮುಕ್ತನಾಗಿ) ಪುಣ್ಯಕರ್ಮಣಾಂ (ಪುಣ್ಯಕರ್ಮಿಗಳ) ಶುಭಾನ್ (ಶುಭವಾದ) ಲೋಕಾನ್ (ಲೋಕಗಳನ್ನು) ಪ್ರಾಪ್ನುಯಾತ್ (ಹೊಂದುವನು).

೭೧. ಶ್ರದ್ಧಾವಂತನೂ ಅಸೂಯೆಯಿಲ್ಲದವನೂ ಆದ ಯಾವ ಮನುಷ್ಯನು (ಇದನ್ನು) ಕೇಳುವನೋ[1] ಅವನೂ ಕೂಡ ಮುಕ್ತನಾಗಿ ಪುಣ್ಯಕರ್ಮಿಗಳ ಶುಭವಾದ ಲೋಕವನ್ನು ಹೊಂದುವನು.

[1] ಕೇವಲ ಶ್ರವಣಮಾತ್ರದಿಂದಲೇ.

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ॥ ೭೨ ॥**

ಪಾರ್ಥ (ಎಲೈ ಪಾರ್ಥನೆ) ತ್ವಯಾ (ನಿನ್ನಿಂದ) ಏಕಾಗ್ರೇಣ ಚೇತಸಾ (ಏಕಾಗ್ರಚಿತ್ತದಿಂದ) ಏತತ್ (ಇದು) ಶ್ರುತಂ ಕಚ್ಚಿತ್ (ಕೇಳಲ್ಪಟ್ಟಿತೇನು) ಧನಂಜಯ (ಎಲೈ ಧನಂಜಯನೆ) ತೇ (ನಿನ್ನ) ಅಜ್ಞಾನಸಂಮೋಹಃ (ಅಜ್ಞಾನದಿಂದ ಉಂಟಾದ ಸಂಮೋಹವು) ಪ್ರನಷ್ಟಃ ಕಚ್ಚಿತ್ (ನಾಶವಾಯಿತೇನು).

೭೨. ಎಲೈ ಪಾರ್ಥ, ನೀನು ಇದನ್ನು ಏಕಾಗ್ರಚಿತ್ತದಿಂದ ಕೇಳಿದೆಯಾ? ಎಲೈ ಧನಂಜಯ, ಅಜ್ಞಾನದಿಂದ ಉಂಟಾದ ನಿನ್ನ ಮೋಹವು ನಾಶವಾಯಿತೆ?

ಅರ್ಜುನ ಉವಾಚ

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩ ॥**

ಅರ್ಜುನಃ (ಅರ್ಜುನನು) ಉವಾಚ (ಹೇಳಿದನು)— ಅಚ್ಯುತ (ಎಲೈ ಅಚ್ಯುತನೆ) ತ್ವತ್ಪ್ರಸಾದಾತ್ (ನಿನ್ನ ಅನುಗ್ರಹದಿಂದ) ಮೋಹಃ (ಮೋಹವು) ನಷ್ಟಃ (ನಷ್ಟವಾಯಿತು) ಮಯಾ (ನನ್ನಿಂದ) ಸ್ಮೃತಿಃ (ಸ್ಮೃತಿಯು) ಲಬ್ಧಾ (ಹೊಂದಲ್ಪಟ್ಟಿತು) ಗತಸಂದೇಹಃ (ಸಂಶಯರಹಿತನಾಗಿ) ಸ್ಥಿತಃ ಅಸ್ಮಿ (ಇರುವೆನು) ತವ (ನಿನ್ನ) ವಚನಂ (ವಚನವನ್ನು) ಕರಿಷ್ಯೇ (ಮಾಡುವೆನು).

ಅರ್ಜುನನು ಹೇಳಿದನು

೭೩. ಎಲೈ ಅಚ್ಯುತ, ನಿನ್ನ ಅನುಗ್ರಹದಿಂದ (ನನ್ನ) ಮೋಹವು[1] ನಷ್ಟವಾಯಿತು, ಸ್ಮೃತಿಯು[2] ಉಂಟಾಯಿತು; ಸಂದೇಹಶೂನ್ಯನಾಗಿ ಇರುವೆನು. ನಿನ್ನ ಉಪದೇಶದಂತೆ ನಡೆಯುತ್ತೇನೆ.

1 ಅಜ್ಞಾನದಿಂದ ಉಂಟಾದ, ಸಂಸಾರದ ಅನರ್ಥಗಳಿಗೆ ಕಾರಣವಾದ, ಸಾಗರದಂತೆ ದುಸ್ತರವಾದ (ಶ್ರೀಶಂಕರ).
2 ಆತ್ಮತತ್ತ್ವವಿಷಯವಾದ (ಶ್ರೀಶಂಕರ).

ಸಂಜಯ ಉವಾಚ

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥ ೭೪ ॥**

ಸಂಜಯಃ (ಸಂಜಯನು) ಉವಾಚ (ಹೇಳಿದನು)— ಇತಿ (ಹೀಗೆ) ಅಹಂ (ನಾನು) ವಾಸುದೇವಸ್ಯ (ವಾಸುದೇವನ) ಮಹಾತ್ಮನಃ ಪಾರ್ಥಸ್ಯ ಚ (ಮತ್ತು ಮಹಾತ್ಮನಾದ ಅರ್ಜುನನ) ಇಮಂ (ಈ) ಅದ್ಭುತಂ (ಅದ್ಭುತವಾದ) ರೋಮ-ಹರ್ಷಣಂ (ರೋಮಾಂಚನಕಾರಿಯಾದ) ಸಂವಾದಂ (ಸಂವಾದವನ್ನು) ಅಶ್ರೌಷಂ (ಕೇಳಿದೆನು).

ಸಂಜಯನು ಹೇಳಿದನು

೭೪. ಹೀಗೆ ನಾನು ವಾಸುದೇವನ ಮತ್ತು ಮಹಾತ್ಮನಾದ ಅರ್ಜುನನ ಅದ್ಭುತವಾದ ರೋಮಾಂಚನಕಾರಿಯಾದ ಈ ಸಂವಾದವನ್ನು ಕೇಳಿದೆನು.

**ವ್ಯಾಸಪ್ರಸಾದಾಚ್ಛ್ರುತವಾನಿಮಂ ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ ಕೃಷ್ಣಾತ್ ಸಾಕ್ಷಾತ್**
**ಕಥಯತಃ ಸ್ವಯಮ್ ॥ ೭೫ ॥**

ವ್ಯಾಸಪ್ರಸಾದಾತ್ (ವೇದವ್ಯಾಸರ ಅನುಗ್ರಹದಿಂದ) ಅಹಂ (ನಾನು) ಇಮಂ (ಈ) ಪರಂ (ಶ್ರೇಷ್ಠವಾದ) ಗುಹ್ಯಂ (ಗುಹ್ಯವಾದ) ಯೋಗಂ (ಯೋಗವನ್ನು) ಸಾಕ್ಷಾತ್ (ಸಾಕ್ಷಾತ್ತಾಗಿ) ಸ್ವಯಂ (ತಾನೇ) ಕಥಯತಃ (ಹೇಳುತ್ತಿರುವ) ಯೋಗೇಶ್ವರಾತ್ (ಯೋಗೇಶ್ವರನಾದ) ಕೃಷ್ಣಾತ್ (ಕೃಷ್ಣನಿಂದ) ಶ್ರುತವಾನ್ (ಕೇಳಿದವನಾಗಿದ್ದೇನೆ).

**೭೫.** ಶ್ರೀವೇದವ್ಯಾಸರ ಅನುಗ್ರಹದಿಂದ ಶ್ರೇಷ್ಠವಾದ ಗುಹ್ಯವಾದ ಈ ಯೋಗವನ್ನು ಸಾಕ್ಷಾತ್ತಾಗಿ ತಾನೇ ಹೇಳುತ್ತಿರುವ ಯೋಗೇಶ್ವರನಾದ ಕೃಷ್ಣನಿಂದ ಕೇಳಿದೆನು.

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ**
**ಮುಹುರ್ಮುಹುಃ ॥ ೭೬ ॥**

ರಾಜನ್ (ಎಲೈ ರಾಜನೆ) ಕೇಶವಾರ್ಜುನಯೋಃ (ಕೇಶವಾರ್ಜುನರ) ಇಮಂ (ಈ) ಅದ್ಭುತಂ (ಅದ್ಭುತವಾದ) ಪುಣ್ಯಂ (ಪುಣ್ಯವಾದ) ಸಂವಾದಂ (ಸಂವಾದವನ್ನು) ಸಂಸ್ಮೃತ್ಯ ಸಂಸ್ಮೃತ್ಯ (ನೆನೆನೆನೆದು) ಮುಹುಃ ಮುಹುಃ ಚ (ಪುನಃ ಪುನಃ) ಹೃಷ್ಯಾಮಿ (ಹರ್ಷಪಡುತ್ತೇನೆ).

**೭೬.** ಎಲೈ ಧೃತರಾಷ್ಟ್ರ, ಕೇಶವಾರ್ಜುನರ ಈ ಅದ್ಭುತವಾದ ಪುಣ್ಯವಾದ[1] ಸಂವಾದವನ್ನು ನೆನೆನೆನೆದು ಪುನಃ ಪುನಃ ಹರ್ಷಪಡುತ್ತೇನೆ.

1 ಶ್ರವಣಮಾತ್ರದಿಂದಲೇ ಪಾಪವನ್ನು ನಾಶಮಾಡುವ (ಶ್ರೀಶಂಕರ).

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ**
**ಚ ಪುನಃ ಪುನಃ ॥ ೭೭ ॥**

ರಾಜನ್ (ಎಲೈ ರಾಜನೆ) ಹರೇಃ (ಹರಿಯ) ತತ್ (ಆ) ಅತ್ಯದ್ಭುತಂ (ಅತ್ಯದ್ಭುತವಾದ) ರೂಪಂ (ರೂಪವನ್ನು) ಸಂಸ್ಮೃತ್ಯ ಸಂಸ್ಮೃತ್ಯ ಚ (ನೆನೆನೆನೆದು) ಮೇ (ನನಗೆ) ಮಹಾನ್ (ಮಹಾ) ವಿಸ್ಮಯಃ (ವಿಸ್ಮಯವು) [ಆಗುತ್ತಿದೆ] ಪುನಃ-ಪುನಃ ಚ (ಮತ್ತು ಪುನಃ ಪುನಃ) ಹೃಷ್ಯಾಮಿ (ಹರ್ಷಪಡುತ್ತೇನೆ).

**೭೭.** ಎಲೈ ಧೃತರಾಷ್ಟ್ರ, ಹರಿಯ ಅತ್ಯದ್ಭುತವಾದ ಆ ರೂಪವನ್ನು[1] ನೆನೆನೆನೆದು ನನಗೆ ಮಹಾವಿಸ್ಮಯವು (ಆಗುತ್ತಿದೆ); ಮತ್ತು ಪುನಃ ಪುನಃ ಹರ್ಷಪಡುತ್ತೇನೆ.

1 ವಿಶ್ವರೂಪವನ್ನು.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥ ೭೮ ॥**

ಯತ್ರ (ಎಲ್ಲಿ) ಯೋಗೇಶ್ವರಃ ಕೃಷ್ಣಃ (ಯೋಗೇಶ್ವರನಾದ ಕೃಷ್ಣನೋ) ಯತ್ರ (ಎಲ್ಲಿ) ಧನುರ್ಧರಃ (ಧನುರ್ಧಾರಿಯಾದ) ಪಾರ್ಥಃ (ಪಾರ್ಥನೋ) ತತ್ರ (ಅಲ್ಲಿ) ಶ್ರೀಃ (ಶ್ರೀ) ವಿಜಯಃ (ವಿಜಯ) ಭೂತಿಃ (ಐಶ್ವರ್ಯ) ಧ್ರುವಾ (ಶಾಶ್ವತವಾದ) ನೀತಿಃ (ನೀತಿ) [ಇವೆಯೆಂದು] ಮಮ (ನನ್ನ) ಮತಿಃ (ಮತ).

೭೮. ಎಲ್ಲಿ ಯೋಗೇಶ್ವರನಾದ ಕೃಷ್ಣನಿರುವನೋ, ಎಲ್ಲಿ ಧನುರ್ಧಾರಿಯಾದ ಪಾರ್ಥನು ಇರುವನೋ ಅಲ್ಲಿ ಶ್ರೀ, ವಿಜಯ, ಐಶ್ವರ್ಯ, ಶಾಶ್ವತವಾದ ನೀತಿ (ಇವುಗಳು ಇರುವುವೆಂದು) ನನ್ನ ಮತ.

**ಇತಿ ಮೋಕ್ಷಸಂನ್ಯಾಸಯೋಗೋ ನಾಮ**
**ಅಷ್ಟಾದಶೋಽಧ್ಯಾಯಃ ।**

ಮೋಕ್ಷಸಂನ್ಯಾಸಯೋಗವೆಂಬ ಹದಿನೆಂಟನೆಯ
ಅಧ್ಯಾಯವು ಮುಗಿಯಿತು.

# ಶ್ರೀಮದ್ಭಗವದ್ಗೀತಾ

## ಶ್ಲೋಕಗಳ ಅಕಾರಾದಿಸೂಚಿ

### ಅ

## ಗ



## ಚ



## ಜ

## ಧ



## ನ

# ತಿದ್ದೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 60 | 17 | ಕಃ ಚ | ಕಶ್ಚನ |
| 61 | 1 | ಕಾರ್ಯ | ಕಾರ್ಯಂ |
| 66 | 1 | ಯೇ ಯೇ | ಯೇ ವೇ |
| 71 | 8,11 | ಬುಧ್ವಾ | ಬುದ್ಧ್ವಾ |
| 90 | 1 | ಅಜ್ಞಶ್ಚಾಶ್ರದ್ಧಧಾನಶ್ಚ | ಅಜ್ಞಶ್ಚಾಶ್ರದ್ದಧಾನಶ್ಚ |
| 90 | 3 | ಅಶ್ರದ್ಧಧಾನಃ | ಅಶ್ರದ್ದಧಾನಃ |
| 106 | 24 | ಇಂದ್ರಿಯಾರ್ಥೇಷುಃ | ಇಂದ್ರಿಯಾರ್ಥೇಷು |
| 111 | 13 | ಯುಂಜನ್ನೇವ | ಯುಂಜನ್ನೇವಂ |
| 115 | 21 | ಯುಂಜನ್ನೇವ | ಯುಂಜನ್ನೇವಂ |
| 124 | 18 | ಭೂಯೋಽ | ಭೂಯೋಽ |
| 141 | 28 | ದುಃಖಾಲಯಮಶಾತ್ವತಮ್ | ದುಃಖಾಲಯಮಶಾಶ್ವತಮ್ |
| 189 | 19 | ಸಸ್ತೀತ್ಯುಕ್ತ್ವಾ | ಸ್ವಸ್ತೀತ್ಯುಕ್ತ್ವಾ |
| 191 | 21 | ದೃಷ್ಟ್ವೈವ | ದೃಷ್ಟ್ವೈವ |
| 200 | 26 | ಽಸ್ತ್ಯಭ್ಯದಿಕಃ | ಽಸ್ತ್ಯಭ್ಯಧಿಕಃ |
| 229 | 3 | ಧ್ಯಾನೇನಾನ್ಮತಿ | ಧ್ಯಾನೇನಾತ್ಮನಿ |
| 253 | 27 | ಸರ್ವೈರಹಮೇಹ | ಸರ್ವೈರಹಮೇವ |
| 279 | 14 | ಮನೀಷಣಃ | ಮನೀಷಿಣಃ |

ಪುಟ 162, ಪಂಕ್ತಿ 17: '(ಅವರೂ ಕೂಡ)' ಆದ ಮೇಲೆ 'ಮಾಂ ವ್ಯಪಾಶ್ರಿತ್ಯ (ನನ್ನನ್ನು ಆಶ್ರಯಿಸಿ)' ಎಂಬುದನ್ನು ಸೇರಿಸಿಕೊಳ್ಳಬೇಕು.

ಪುಟ 163, ಪಂಕ್ತಿ 10: '(ನಾನೇ ಪರಮಗತಿಯುಳ್ಳವನಾಗಿ)' ಆದ ಮೇಲೆ 'ಆತ್ಮಾನಂ ಯುಕ್ತ್ವಾ (ಮನಸ್ಸನ್ನು ನಿಲ್ಲಿಸಿ)' ಎಂಬುದನ್ನು ಸೇರಿಸಿಕೊಳ್ಳಬೇಕು.

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು

| | | ರೂ. | ಆ. |
|---|---|---|---|
| ಶ್ರೀ ರಾಮಕೃಷ್ಣ ವಚನವೇದ ಪೂರ್ವಾರ್ಧ | .. | ೧೦ | ೦ |
| ಶ್ರೀ ರಾಮಕೃಷ್ಣ ವಚನವೇದ ಉತ್ತರಾರ್ಧ | .. | ೧೦ | ೦ |
| ಕೊಲಂಬೊ ಇಂದ ಆಲ್ಮೋರಕೆ | .. | ೫ | ೦ |
| ಸಂವಾದತರಂಗಿಣಿ | .. | ೫ | ೦ |
| ಶ್ರೀ ರಾಮಕೃಷ್ಣ ಉಪದೇಶಾಮೃತ | .. | ೩ | ೮ |
| ಸ್ವಾಮಿ ವಿವೇಕಾನಂದ (ಕುವೆಂಪು) | .. | ೩ | ೮ |
| ಸ್ತವಕುಸುಮಾಂಜಲಿ (ಸ್ತೋತ್ರಗ್ರಂಥ) | .. | ೩ | ೮ |
| ಭಗವಾನ್ ಶ್ರೀ ರಾಮಕೃಷ್ಣ | .. | ೩ | ೦ |
| ಪತ್ರಮಾಲೆ | .. | ೩ | ೦ |
| ಜ್ಞಾನಯೋಗ | .. | ೩ | ೦ |
| ಗುರುವಿನೊಡನೆ ದೇವರಡಿಗೆ | .. | ೩ | ೦ |
| ಜೀವ ಈಶ್ವರಧರ್ಮ | .. | ೩ | ೦ |
| ರಾಜಯೋಗ | .. | ೨ | ೧೦ |
| ಶ್ರೀ ಶಾರದಾದೇವಿ ಸಂಭಾಷಣೆ | .. | ೨ | ೮ |
| ಗೀತಾಪತ್ರಗಳು | .. | ೨ | ೮ |
| ಮಿಂಚುನೋಟಕೆ ಹಿಂದೂಧರ್ಮ | .. | ೨ | ೮ |
| ಶ್ರೀ ಶಾರದಾದೇವಿ | .. | ೨ | ೦ |
| ಸಾಧಕನ ಕೈದೀವಿಗೆ | .. | ೨ | ೦ |
| ಪರಮಾರ್ಥ ಪ್ರಸಂಗ | .. | ೨ | ೦ |
| ಹೈಮಾಚಲ ಸಾನ್ನಿಧ್ಯದಲ್ಲಿ (ಹರಿದ್ವಾರದಿಂದ ಕೇದಾರ ಬದರಿಗೆ) | .. | ೨ | ೦ |
| ಕರ್ಮಯೋಗ | .. | ೧ | ೮ |
| ಬ್ರಹ್ಮಾನಂದ ವಚನ ಸುಧೆ | .. | ೧ | ೪ |
| ಶ್ರೀ ರಾಮಕೃಷ್ಣ ಉಪನಿಷತ್ | .. | ೧ | ೪ |
| ಪರಿವ್ರಾಜಕ | .. | ೧ | ೪ |
| ಪ್ರಾಚ್ಯ ಮತ್ತು ಪಾಶ್ಚಾತ್ಯ | .. | ೧ | ೪ |
| ಸನಾತನ ಭಾರತ | .. | ೧ | ೪ |
| ಭಕ್ತಿಯೋಗ | .. | ೧ | ೦ |

| | | ರೂ. | ಆ. |
|---|---|---|---|
| ಭಕ್ತಿ: ಗೌಣೀ ಮತ್ತು ಪರಾ | .. | ೧ | ೦ |
| ದಾರಿಯಲ್ಲಿ ದೀಪಧಾರಿ | .. | ೧ | ೦ |
| ಶ್ರೀ ಗುರುದೇವರ ವಚನ | .. | ೧ | ೦ |
| ಅಮರನಾಥ ಯಾತ್ರೆ | .. | ೧ | ೦ |
| ಧನ್ಯತೆಗೆ ದಾರಿ | .. | ೧ | ೦ |
| ಅನುಷ್ಠಾನ ವೇದಾಂತ | .. | ೧ | ೦ |
| ವೇದಾಂತ | .. | ೦ | ೧೦ |
| ವಿದ್ಯಾಭ್ಯಾಸ | .. | ೦ | ೧೦ |
| ಹಿಂದೂ ಧರ್ಮಸಾರ | .. | ೦ | ೧೦ |
| ವರ್ತಮಾನ ಭಾರತ | .. | ೦ | ೧೦ |
| ವಿವೇಕವಾಣಿ | .. | ೦ | ೧೦ |
| ಜ್ಞಾನಮಾರ್ಗ | .. | ೦ | ೮ |
| ನನ್ನ ಗುರುದೇವ | .. | ೦ | ೮ |
| ಭಕ್ತಿಮಾರ್ಗ | .. | ೦ | ೮ |
| ಚಿಕಾಗೋ ಉಪನ್ಯಾಸ | .. | ೦ | ೬ |
| ಆರತಿ | .. | ೦ | ೬ |
| ಶ್ರೀರಾಮಕೃಷ್ಣ (ಸಂಕ್ಷಿಪ್ತ ಜೀವನ) | .. | ೦ | ೫ |
| ಸ್ವಾಮಿ ವಿವೇಕಾನಂದ ,, | .. | ೦ | ೫ |
| ಶ್ರೀ ಶಾರದಾದೇವಿ ,, | .. | ೦ | ೫ |
| ಮುಮುಕ್ಷು ಲಕ್ಷಣ | .. | ೦ | ೪ |
| ನನ್ನ ಜೀವನ ಮತ್ತು ಧ್ಯೇಯ | .. | ೦ | ೪ |
| ಈಶ್ವರಾನುರಾಗ | .. | ೦ | ೪ |
| ನೊಂದ ಜೀವಕ್ಕೆ ಭರವಸೆ | .. | ೦ | ೪ |
| ಭಾರತ ಮಹಿಳೆ | .. | ೦ | ೪ |
| ಕರ್ಮರಹಸ್ಯ | .. | ೦ | ೪ |
| ಸಾಧನ | .. | ೦ | ೪ |
| ಪವಹಾರಿ ಬಾಬಾ | .. | ೦ | ೪ |
| ದೇವದೂತ ಏಸುಕ್ರಿಸ್ತ | .. | ೦ | ೪ |
| ಧ್ಯಾನ | .. | ೦ | ೪ |

**ಶ್ರೀ ರಾಮಕೃಷ್ಣಾಶ್ರಮ, ಮೈಸೂರು**